



ವೇಮಣ್ಣ



# ಹೊಸತು

## ಲೇಖಕರ - ಓದುಗರ ಸಂವಾದ


ಇಂದಿರಾ ಹೆಗಡೆ


ನೇಮಿಚಂದ್ರ

ದಿನಾಂಕ ೧೬-೨-೨೦೧೪ರಂದು ಬೆಂಗಳೂರಿನಲ್ಲಿ ನಡೆದ ಹೊಸತು ಪತ್ರಿಕೆಯ ಲೇಖಕರ-ಓದುಗರ ಸಂವಾದ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಿತು. ಲೇಖಕರು ಮತ್ತು ಓದುಗರು ಆಸಕ್ತಿಯಿಂದ ಭಾಗವಹಿಸಿ, ಕಳೆದ ಹದಿನೈದು ವರ್ಷಗಳಿಂದ ಪತ್ರಿಕೆ ನಡೆದು ಬಂದ ದಾರಿ, ಕರ್ನಾಟಕ ವೈಚಾರಿಕ ಲೋಕದಲ್ಲಿ ಹೊಸತು ಪತ್ರಿಕೆಯ ಪಾತ್ರ ಮತ್ತು ಬದ್ಧತೆಯನ್ನು ಶ್ಲಾಘಿಸಿದರು. ಇದೇ ಸಂದರ್ಭದಲ್ಲಿ ಮುಂಬರುವ ದಿನಗಳಲ್ಲಿ ಪತ್ರಿಕೆ ತನ್ನ ವಿನ್ಯಾಸ, ವಿವಿಧತೆಗಳಿಂದ ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಬರಲು, ಮತ್ತು ಹೆಚ್ಚು ಪ್ರಸಾರವಾಗಲು ಹಲವಾರು ಸಲಹೆ ಸೂಚನೆಗಳನ್ನು ಕೊಟ್ಟಿದ್ದಾರೆ. ಈ ಎಲ್ಲ ಸಲಹೆಗಳನ್ನು ಸಂಪಾದಕ ಹಾಗೂ ಸಮಾಲೋಚನಾ ಮಂಡಲಿ ಸದಸ್ಯರು ಗಂಭೀರವಾಗಿ ಪರಿಗಣಿಸಿದ್ದಾರೆ. ಸಂವಾದದಲ್ಲಿ ಮಂಡನೆಯಾದ ಸಲಹೆಗಳನ್ನು ಬರುವ ದಿನಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಅಳವಡಿಸಲು ಸಂಪಾದಕರು ಹಾಗೂ ಪ್ರಕಾಶಕರು ಸಿದ್ಧ. ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ, ಪತ್ರಗಳ ಮೂಲಕ ಪರೋಕ್ಷವಾಗಿ ಭಾಗವಹಿಸಿದ ಎಲ್ಲರಿಗೂ ಹೊಸತು ಬಳಗ ವಂದನೆಗಳನ್ನು ಸಲ್ಲಿಸುತ್ತದೆ.

– ಸಂಪಾದಕ


ಸಂಪಿಗೆ ತೋಂಟದಾರ್ಯ


ವೀಣಾ ಹಾಸನ್


ಈರಪ್ಪ ಕಂಬಳಿ


ರಾ. ನಂ. ಚಂದ್ರಶೇಖರ್


ಸುಬ್ರಹ್ಮಣ್ಯ


ಎಸ್. ಸಿ. ರಂಗನಾಥ್


ಶಂಕರನಾರಾಯಣ


ಎಂ. ಎಸ್. ಮುರಳಿಕೃಷ್ಣ


ರಾಮಲಿಂಗಪ್ಪ ಟಿ. ಬೇಗೂರು


ಕಮಲಂ ಆರಸು

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ವಿ. ಗೋಪಾಲ್, ತನು, ಶ್ರೀಹರಿ, ಪ್ರತೀಕ್ ಸಿನ್ಹಾ, ವಿ. ಆರ್. ಸಿ. ಶೇಖರ್, ವಿಜಯಾನಂದ ಕಾಲವಾಡ, ಗೋಪಿ ಹಿರೇಬೆಟ್ಟು

**ಮುಖಪುಟ : ಗೇಬ್ರಿಯಾಲ ಸಿಲಾಂಗ್**
(ಫಿಲಿಪೈನ್ಸ್‌ನ ಮೊದಲ ಕ್ರಾಂತಿಕಾರಿ ಹೋರಾಟಗಾರ್ತಿ)

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಭಾರತದ ಸಂವಿಧಾನ ರಚನೆಯಾದ ಹೊಸದರಲ್ಲಿ ರಾಜ್ಯಪಾಲರ ಹುದ್ದೆ ಅನಗತ್ಯ ಎಂಬುದಾಗಿ ಹಲವು ವಲಯಗಳಿಂದ ವಿರೋಧ ಬಂದಿತ್ತು. ಆದರೆ ಅಂದು ಅಧಿಕಾರದಲ್ಲಿದ್ದ ಕಾಂಗ್ರೆಸ್ ಅದಕ್ಕೆ ಸಮ್ಮತಿಸಲಿಲ್ಲ. ರಾಜ್ಯಗಳಿಗೆ ಹೊರೆಯಾಗಿರುವ, ದುಬಾರಿ ವೆಚ್ಚದ ಆಲಂಕಾರಿಕ ಹುದ್ದೆ. ಸಕ್ರಿಯ ರಾಜಕಾರಣದಿಂದ ದೂರವಾಗುವ, ಚುನಾವಣೆಯಲ್ಲಿ ಸೋತು ಸುಣ್ಣವಾಗಿರುವ ರಾಜಕಾರಣಿಗಳಿಗಾಗಿ ಕಲ್ಪಿಸಲಾಗಿರುವ ಹುದ್ದೆ. ಎಂದರೆ ರಾಜ್ಯಪಾಲರದ್ದು. ನೇಮಕ ಮಾಡುವ ಕೇಂದ್ರ ಸರಕಾರಕ್ಕೆ ಮಾತ್ರ ಉತ್ತರದಾಯಿಯಾಗಿರುವ ರಾಜ್ಯಪಾಲರಿಗೆ ರಾಜ್ಯದ ಪಾಲನೆಗೆ ಯಾವ ಅಧಿಕಾರವೂ ಇಲ್ಲ. ರಾಜ್ಯ ಸರಕಾರದ ಕ್ರಮಗಳಿಗೆ, ಕಾಯಿದೆಗಳಿಗೆ, ಶಿಫಾರಸುಗಳಿಗೆ ಅಸ್ತು ಎಂದು ಸಹಿ ಲಗತ್ತಿಸುವುದು ಬಿಟ್ಟರೆ, ವರ್ಷಕ್ಕೊಮ್ಮೆ ವಿಧಾನ ಮಂಡಲದ ಸಭೆ ಸೇರಿದಾಗ ಸರಕಾರ ತಯಾರಿಸಿಕೊಡುವ ಭಾಷಣವನ್ನು ಓದಿ ಕೃತಾರ್ಥರಾಗುವುದನ್ನು ಬಿಟ್ಟರೆ ಬೇರೇನೂ ಅಧಿಕಾರವಿಲ್ಲ. ಇದಕ್ಕಾಗಿ ಇವರಿಗೆ ಭವ್ಯವಾದ ಬಂಗಲೆ – ರಾಜಭವನ – ಸಿಬ್ಬಂದಿ, ವೇತನ ವಗ್ಯೆರೆ, ವಗ್ಯೆರೆ. ಇದು ಒಂದು ಬಗೆಯ ಲಾಭದಾಯಿಕ ಹುದ್ದೆ. ಸಂಬಳದ ಜೊತೆಗೆ ಗಿಂಬಳಕ್ಕೆ ಕೊರತೆ ಏನಿಲ್ಲ. ಸರಕಾರಿ ಹುದ್ದೆ ಅಲ್ಲವೆ ? ರಾಜಭವನಗಳು ರಾಜ್ಯಪಾಲರುಗಳು ಸಾಕಷ್ಟು ರಾಜಕಾರಣ ನಡೆಸಲು, ಕಿತಾಪತಿಗಳಿಗೆ ಬೇಕಾದಷ್ಟು ಅವಕಾಶಗಳಿರುತ್ತವೆ. ಅದರಲ್ಲೂ ಅನ್ಯಪಕ್ಷಗಳು ಅಧಿಕಾರದಲ್ಲಿರುವ ರಾಜ್ಯಗಳಲ್ಲಂತೂ ಇದು ಹೆಚ್ಚಾಗಿ ಕಂಡುಬರುತ್ತದೆ. ಎಷ್ಟೇ ಆಗಲಿ ರಾಜ್ಯಪಾಲರ ನೇಮಕ ಕೇಂದ್ರ ಸರಕಾರದ ವ್ಯಾಪ್ತಿಗೆ ಬರುವುದು. ಇದಕ್ಕೆ ರಾಷ್ಟ್ರಪತಿಯವರ ಸಮ್ಮತಿ ಇದ್ದೇ ಇರುತ್ತದೆ. ಹೆಚ್ಚಾಗಿ ರಾಜಕಾರಣಿಗಳೇ ನೇಮಕವಾಗುವುದರಿಂದ ಅವರು ರಾಜಕೀಯ ನಡೆಸದೆ ಮತ್ತೇನು ಮಾಡಲು ಸಾಧ್ಯ. ಸಭೆ, ಸಮಾರಂಭಗಳಲ್ಲಿ ಭಾಗವಹಿಸುತ್ತಾ ಕಾಲಕಳೆಯುವುದರ ಜೊತೆಗೆ ರಾಜಕಾರಣ ಇದ್ದೇ ಇರುತ್ತದೆ. ನಮ್ಮ ದೇಶದ ಇತಿಹಾಸದಲ್ಲಿ ರಾಜ್ಯಪಾಲರ ರಾಜಕಾರಣದ ಪ್ರಕರಣಗಳು ಬೇಕಾದಷ್ಟಿವೆ. ಆಂಧ್ರಪ್ರದೇಶದಲ್ಲಿ ತೆಲುಗು ದೇಶಂನ ಎನ್. ಟಿ. ರಾಮರಾವ್ ಸರಕಾರದ ಉಚ್ಚಾಟನೆ, ಕೇರಳದಲ್ಲಿ ನಂಬೂದಿರಿಪಾಡ್ ನೇತೃತ್ವದ ಕಮ್ಯುನಿಸ್ಟ್ ಸರಕಾರದ ವಜಾ ಅದಕ್ಕೆ ಉದಾಹರಣೆಗಳು, ಸಾಮಾನ್ಯವಾಗಿ ಅಧಿಕಾರಾವಧಿ ಮುಗಿಯುತ್ತಿರುವಾಗ ರಾಜ್ಯಪಾಲರುಗಳ ನಡವಳಿಕೆ ವಿಚಿತ್ರವಾಗಿರುತ್ತದೆ. ಕೆಲವೊಮ್ಮೆ ಆಡಳಿತ ಪಕ್ಷಕ್ಕೆ ಹತ್ತಿರದ ನಂಟಿರುವ ನಿವೃತ್ತ ಬ್ಯೂರಾಕ್ರಾಟರನ್ನು ರಾಜ್ಯಪಾಲರಾಗಿ ನೇಮಕ ಮಾಡುವ ಪರಿಪಾಠವೂ ಇದೆ. ರಾಜ್ಯಗಳಲ್ಲಿ ಚುನಾಯಿತ ಸರಕಾರ ಪತನಗೊಂಡಾಗ ಕೇಂದ್ರದ ಏಜೆಂಟರಾಗಿ ಅಧಿಕಾರ ನಡೆಸುವ ಅವಕಾಶವೂ ಲಭ್ಯ ಇವರಿಗೆ.

ಇಷ್ಟೆಲ್ಲ ಪೀಠಿಕೆ ನಮ್ಮ ರಾಜ್ಯದ ರಾಜ್ಯಪಾಲರ ಇತ್ತೀಚಿನ ವರ್ತನೆಗಳನ್ನು ನೋಡಿದಾಗ ಸಂವಿಧಾನರೀತ್ಯ ರಾಜ್ಯಪಾಲರ ಅಧಿಕಾರ ವ್ಯಾಪ್ತಿ ಎಷ್ಟು ಎಂಬುದನ್ನು ಗಮನಕ್ಕೆ ತರಲು ಅಷ್ಟೆ. ಅಂದಹಾಗೆ ರಾಜ್ಯಪಾಲರು ರಾಜ್ಯದಲ್ಲಿ ಇರುವ ವಿಶ್ವವಿದ್ಯಾನಿಲಯಗಳ ಕುಲಾಧಿಪತಿಗಳೂ ಆಗಿರುತ್ತಾರೆ. ಹಾಗಾಗಿ ಇವರಿಗೆ ಕುಲಪತಿಗಳನ್ನು ನೇಮಕ ಮಾಡುವುದಕ್ಕೆ ಸೀಮಿತ ಅಧಿಕಾರವೂ ಇರುತ್ತದೆ. ನಮ್ಮ ರಾಜ್ಯಪಾಲ ಎಚ್. ಆರ್. ಭಾರದ್ವಾಜ್ ಕಾಂಗ್ರೆಸ್ ಸದಸ್ಯರಾಗಿದ್ದವರು, ಕೇಂದ್ರದಲ್ಲಿ ಕಾನೂನು ಸಚಿವರಾಗಿದ್ದವರು, ಪ್ರಮುಖ ರಾಜಕಾರಣಿಯಾಗಿದ್ದವರು. ಇವರ ಅಧಿಕಾರಾವಧಿಯೂ ಮುಗಿಯುತ್ತ ಬಂದಿದೆ. ಐದು ವರ್ಷಗಳಲ್ಲಿ ಹಲವಾರು ವಿವಾದಗಳ ಸುಳಿ ಹಾಯ್ದು ಬಂದಿರುವ ಇವರು ಕನ್ನಡದ ಹಿರಿಯ ಸಾಹಿತಿಯೊಬ್ಬರನ್ನು ಕುರಿತು ಲಘುವಾಗಿ ಮಾತನಾಡಿ ವಿವಾದ ಸೃಷ್ಟಿಸಿದ್ದಾರೆ. ನಮ್ಮ ವಿಶ್ವವಿದ್ಯಾನಿಲಯಗಳ ಇಂದಿನ ಪರಿಸ್ಥಿತಿ ಕುರಿತು ಹೇಳುವುದಕ್ಕೆ ಇಲ್ಲಿ ಸಾಧ್ಯವಾಗದು, ಆದರೆ ಕುಲಪತಿ ಸ್ಥಾನ ಬಹುದೊಡ್ಡ ಲಾಭದಾಯಕ ಹುದ್ದೆಯಾಗಿ ಬಿಟ್ಟಿರುವುದು ದುರಂತ. ಇದು ಹಲವು ಕೋಟಿ ವ್ಯವಹಾರಗಳ ಉಗ್ರಾಣ. ಕುಲಾಧಿಪತಿಗಳ ಪಾಲೂ ಇದರಲ್ಲಿದೆ ಎಂಬ ಆರೋಪವೂ ಇದೆ. ದಾವಣಗೆರೆ ವಿಶ್ವವಿದ್ಯಾನಿಲಯಕ್ಕೆ ಕುಲಪತಿ ನೇಮಕಾತಿಯ ಪ್ರಕರಣ ಎಲ್ಲರಿಗೂ ತಿಳಿದಿರುವಂಥದ್ದು. ಈ ನೇಮಕ ಸಂವಿಧಾನಬದ್ಧವಾಗಿದೆ ಎನ್ನುವುದರಲ್ಲಿ

*(೯ನೇ ಪುಟಕ್ಕೆ)*



# ಸಂಪಾದಕೀಯ





ಸಂಪುಟ-೧೫ ಸಂಚಿಕೆ-೮ ಮಾರ್ಚ್ ೨೦೧೪





■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೮೦೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೮೦೨೩
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in


## ಬಜೆಟ್ : ದಾನಪತ್ರ ಮಾತ್ರವಾಗಬಾರದು

'ಬಜೆಟ್ (ಆಯ-ವ್ಯಯ) ಮಂಡನೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪಾರ್ಲಿಮೆಂಟ್‌ನಿಂದ ಪಂಚಾಯತಿವರೆಗೆ ಮಹತ್ವದ ಕೆಲಸ. ಜನರ ಪ್ರತಿನಿಧಿಯಾಗಿ ತಾನು ಹೇಗೆ ಮತ್ತು ಯಾರ ಪರವಾಗಿ ಕೆಲಸ ಮಾಡುತ್ತೇನೆಂದು ಆಳುವ ವರ್ಗ ಘೋಷಿಸುವುದು ಈ ಬಜೆಟ್‌ನಿಂದ. ಸಾಮಾನ್ಯವಾಗಿ ಈ ಆಯ-ವ್ಯಯ ಎನ್ನುವುದು ಇತಿಹಾಸದ ಪ್ರಕ್ರಿಯೆಗೂ, ಭವಿಷ್ಯದ ನಡೆಗೂ ಒಂದು ಕೊಂಡಿಯಾಗಿರುತ್ತದೆ. ಅದು ಇಂದು ನಮ್ಮ ಸರಕಾರಗಳು ಒಂದು ವರ್ಷದ ಅವಧಿಯನ್ನು ಒಂದು ಆಯ-ವ್ಯಯದ ಘಟಕವನ್ನಾಗಿಟ್ಟುಕೊಂಡರೂ ಅದು ಇತಿಹಾಸದ ಅನುಭವಗಳನ್ನೂ ಭವಿಷ್ಯದ ನಡೆಯನ್ನು ಒಳಗೊಂಡಿರುತ್ತದೆ. ಇತ್ತೀಚಿನ ಎರಡು ದಶಕದಲ್ಲಿ ಮಂಡನೆಯಾಗುತ್ತಿರುವ ಆಯ-ವ್ಯಯಗಳನ್ನು ನೋಡಿದರೆ ಅವು ನಿಜವಾದ ಪ್ರಜಾಪ್ರಭುತ್ವ ವ್ಯವಸ್ಥೆಯ ಸರಕಾರಗಳ ನೀತಿಯನ್ನು ಅನುಸರಿಸದೇ ಬಂಡವಾಳಶಾಹಿ ಪ್ರಜಾಪ್ರಭುತ್ವದ, ಅಂದರೆ ಮಾರುಕಟ್ಟೆಯ ಹಿತಾಸಕ್ತಿಯನ್ನು ಕಾಯ್ದುಕೊಳ್ಳುವುದನ್ನು ಮುಖ್ಯವಾಗಿಸಿಕೊಳ್ಳುತ್ತಿವೆ. ಇದೇ ಸಂದರ್ಭದಲ್ಲಿ ಮಾರುಕಟ್ಟೆಯ ಹಿತಾಸಕ್ತಿಗೆ ಪೂರಕವಾದ ತೀರ್ಮಾನಗಳನ್ನು ಜಾರಿಗೆ ತರುವಾಗ ಈ ಗ್ರಾಹಕ ಸಮುದಾಯ (ಅಂದರೆ ಪ್ರಜೆಗಳು) ಬಂಡೇಳಬಾರದು ಎಂದು ಕೆಲವು ಯೋಜನೆಗಳನ್ನು ಅವರಿಗಾಗಿ ರೂಪಿಸಿ ಅವರನ್ನು ಸುಮ್ಮನಾಗಿಸುವುದು ಬಂಡವಾಳಶಾಹಿ ಪ್ರಜಾಪ್ರಭುತ್ವದ ಮುಖ್ಯ ಲಕ್ಷಣ. ಇನ್ನು ನಮ್ಮನ್ನಾಳುತ್ತಿರುವ ಸರಕಾರಗಳು ನಿಜವಾದ ಪ್ರಜಾಪ್ರಭುತ್ವ ವ್ಯವಸ್ಥೆಯ ಪ್ರತಿನಿಧಿಗಳಲ್ಲ ಎಂದರೆ ಆಳುವ ವರ್ಗಕ್ಕೂ ಅದರ ಹಿತೈಷಿಗಳಿಗೂ ಬೇಸರವಾಗಬಹುದು. ಬೇಸರವಾದರೂ ಚಿಂತೆಯಿಲ್ಲ ಇದು ಸತ್ಯ ಮತ್ತು ವಾಸ್ತವ. ನಮ್ಮನ್ನಾಳುವ ಸರಕಾರಗಳ ಮೂಲ ಆಶಯಕ್ಕೂ ಅವು ಮಂಡಿಸುವ ಬಜೆಟ್‌ಗಳಿಗೂ ಮಧ್ಯೆ ಮೂಲಭೂತ ವಿಷಯದ ಕುರಿತೇ ವೈರುಧ್ಯಗಳಿವೆ ಎಂಬುದನ್ನು ಕಂಡುಕೊಳ್ಳದಿದ್ದರೆ ಈ ವಾಸ್ತವ ಅರ್ಥವಾಗಲಾರದು.

ಪ್ರಜಾಸತ್ತೆಯ ಬಗ್ಗೆ ಬರ್ಟ್ರಂಡ್ ರಸೆಲ್ : "ಪ್ರಜಾಪ್ರಭುತ್ವ ಒಳ್ಳೆಯ ಸರಕಾರವನ್ನು ನಿಖರಪಡಿಸುವುದಿಲ್ಲ, ಆದರೆ ಕೆಲವು ಕೆಡಕುಗಳನ್ನು ನಿವಾರಿಸುತ್ತದೆ" ಎಂದು ಹೇಳುತ್ತಾರೆ. ಇದು ಇಂದಿನ ಸರಕಾರಗಳಿಗೆ ಹೆಚ್ಚು ಅನ್ವಯಿಸುತ್ತದೆ. ಇವುಗಳನ್ನು ಜನತೆಯ ಪ್ರಭುತ್ವಗಳು ಎಂದು ಕರೆದರೂ ಯಾವ ಜನತೆಯ ಮತ್ತು ಯಾವ ಜನತೆಗಾಗಿ ಈ ಪ್ರಭುತ್ವ ಎಂದು ಕೇಳಬೇಕಾದ ಸಂದರ್ಭ ಇಂದು ಎದುರಾಗಿದ್ದರೂ ಇದು 'ಜನತೆಯಿಂದ' ಆಯ್ಕೆಯಾದ ಒಂದೇ ಕಾರಣಕ್ಕೆ ಇದನ್ನು ಪ್ರಜಾಪ್ರಭುತ್ವ ಎಂದು ಒಪ್ಪಿಕೊಳ್ಳಬಹುದು. ರಸೆಲ್ ಪ್ರಕಾರ ಒಳ್ಳೆಯ ಆಡಳಿತವನ್ನು ನಿರೀಕ್ಷಿಸದಿದ್ದರೂ ಕೆಲವು ಕೆಡಕುಗಳನ್ನು ನಿವಾರಿಸುವ ಹಿನ್ನೆಲೆಯಿಂದ ನೋಡಬಹುದು. ಆ ಹಿನ್ನೆಲೆಯಲ್ಲಿ ಇಂದಿನ ಅಂದರೆ ಈ ವರ್ಷ ಮಂಡನೆಯಾದ ಬಜೆಟ್‌ಗಳನ್ನು ನೋಡಬಹುದು.

ಕೆಲವು ಸಲ ಮುಖ ಮನಸ್ಸಿನ ಕನ್ನಡಿಯಾಗುವುದಿಲ್ಲ, ಹಿಪಾಕ್ರಸಿ ಅಂತ ಒಂದು ವರ್ತನೆ ಇದೆ. ಈ ಬಜೆಟ್‌ಗಳಿಗೆ ಅಂಥ ಗುಣವಿದೆ. ಅವು ಆಳುವ ಪಕ್ಷಗಳ ನೀತಿಯನ್ನು, ಗುಣಲಕ್ಷಣಗಳನ್ನು ತಾತ್ಕಾಲಿಕವಾಗಿ ಮರೆಮಾಚಿ ಬೇರೆಯಾದ ಗುಣಲಕ್ಷಣಗಳನ್ನು ತೋರಿಸುತ್ತಿರುತ್ತವೆ. ಇದು ಪಾರ್ಲಿಮೆಂಟ್ ಚುನಾವಣೆಗೆ ಹೋಗುವ ಸಂದರ್ಭ, ಕೇಂದ್ರ ಸರಕಾರಕ್ಕೆ ಪೂರ್ಣಪ್ರಮಾಣದ ಬಜೆಟ್ ಮಂಡಿಸುವ ಅವಕಾಶವೂ ಇಲ್ಲದಿರುವುದರಿಂದ ಚಿದಂಬರಂ ಮಾಡಿದ ಘೋಷಣೆಗಳಿಗೆ ಯಾವುದೇ ಬೆಲೆಯಿಲ್ಲ. ಆದರೆ ಹಿಂದಿನ ವರ್ಷಗಳಲ್ಲಿ ಕಾರ್ಪೋರೇಟ್ ಜಗತ್ತಿನ ಪ್ರತಿನಿಧಿಯಾಗಿ, ಲಕ್ಷಕೋಟಿಗಳ ಲೆಕ್ಕದಲ್ಲಿ ಕಾರ್ಪೋರೇಟ್ ಕಂಪನಿಗಳಿಗೆ ರಿಯಾಯಿತಿ ಘೋಷಿಸಿದ ಕಾಂಗ್ರೆಸ್ ನಾಯಕತ್ವದ ಯುಪಿಎ ಸರಕಾರ, ಅದರ ವಿತ್ತ ಸಚಿವ ಚಿದಂಬರಂ ಚುನಾವಣೆಯ ಕೋಲನ್ನು ಮುಂದಿಟ್ಟುಕೊಂಡು ತಮ್ಮ ಹಳೆಯ ಚಾಳಿ ಮುಂದುವರಿಸಿದರೆ ಏಟು ತಿನ್ನುವುದು ಖಚಿತ ಎಂಬುದರ ಅರಿವಿರುವುದರಿಂದ ಜನಸ್ನೇಹಿ ಎಂಬ ಜಾರಿಗೆ ಸಾಧ್ಯವಾಗದ ತಾತ್ಕಾಲಿಕ ಬಜೆಟ್‌ನ್ನು ಮಂಡಿಸಿ ಹೆಜ್ಜೆ ಕಿತ್ತಿದ್ದಾರೆ. ಚಿದಂಬರಂ ಅವರ ಮಧ್ಯಂತರ ಬಜೆಟ್‌ನಲ್ಲಿ ತೆರಿಗೆರಹಿತ, ಮಧ್ಯಮವರ್ಗವನ್ನು ಓಲೈಸುವ ಅಂಶಗಳು ಹೆಚ್ಚಿರುವುದು, ಮಲ್ಲಿಕಾರ್ಜುನ ಖರ್ಗೆಯವರ ಬೆಲೆ ಏರಿಕೆ ಇಲ್ಲದ ರೈಲ್ವೆ ಬಜೆಟ್ ಜನಸ್ನೇಹಿಯಂತೆ ಕಾಣುವುದು ಚುನಾವಣಾ ಸಂದರ್ಭದ, ಜನಪ್ರಿಯತೆಗಾಗಿ ಮಂಡಿಸಿದ ಬಜೆಟ್‌ಗಳಾಗಿವೆ. ಆದರೂ ಖರ್ಗೆಯವರ ರೈಲ್ವೆ ಬಜೆಟ್‌ನಲ್ಲಿ ವಿದೇಶಿ ಬಂಡವಾಳ ಹೂಡಿಕೆಗೆ ಅವಕಾಶ ಮಾಡಿಕೊಡುವ ಹುನ್ನಾರಗಳು ನಮ್ಮ ರೈಲ್ವೆ ವ್ಯವಸ್ಥೆಯ ಮೂಲಭೂತ ಆಶಯಗಳನ್ನೇ ನಾಶಮಾಡುತ್ತವೆ. ಇದನ್ನು ವಿರೋಧಿಸಲೇಬೇಕು.

ರಾಜ್ಯ ಸರಕಾರದ ಬಜೆಟ್ ಸಹ ಬರುವ ಲೋಕಸಭಾ ಚುನಾವಣೆಯ ಲಾಭ – ಹಾನಿ ಲೆಕ್ಕಾಚಾರದಿಂದ ದೂರವಾಗಿಲ್ಲ. ಈ ಸಂದರ್ಭದಲ್ಲಿ ಆಳುವ ಪಕ್ಷದ ಘೋಷಣೆಗಳೂ ಬಜೆಟ್‌ನ ಭಾಗವಾಗಿ ಬರುತ್ತವೆಂಬುದಕ್ಕೆ ಇದೊಂದು ಉದಾಹರಣೆ. ರಸೆಲ್ ಹೇಳುವುದನ್ನೇ ಗಮನಿಸಿದರೆ ಮಾನ್ಯ ಸಿದ್ದರಾಮಯ್ಯನವರು ಮಂಡಿಸಿದ ಈ ಬಜೆಟ್‌ನಿಂದ ಕೆಲವು 'ಕೆಡಕುಗಳು ನಿವಾರಣೆ'ಯಾಗಿದ್ದನ್ನು ಗಮನಿಸಬಹುದು. ಹಿಂದಿನ ಬಿ.ಜೆ.ಪಿ. ಸರಕಾರ ನೂರಾರು ಕೋಟಿ ಜನರ ದುಡ್ಡನ್ನು ಧಾರ್ಮಿಕ ಸಂಸ್ಥೆಗಳಿಗೆ ಮಠಾಧಿಪತಿಗಳಿಗೆ ಬಜೆಟ್‌ನಲ್ಲಿಯೇ ಘೋಷಣೆ ಮಾಡಿದಂಥ ಕೇಡು ಕಡಿಮೆಯಾಗಿದೆ, ನಿಂತಿಲ್ಲ. ಈ ಸರಕಾರ ಬೇರೆ ರೀತಿಯಲ್ಲಿ ಆ ಕೆಲಸ ಮಾಡಿದೆ. ಇರಲಿ, ಇದು ಚುನಾವಣೆ ಸಂದರ್ಭದ ಬಜೆಟ್ ಆಗಿರುವುದರಿಂದ ಅದಕ್ಕೂ ಸ್ವಲ್ಪ ರಿಯಾಯಿತಿ ಕೊಡಬಹುದು. ಸಿದ್ದರಾಮಯ್ಯನವರು ಅಹಿಂದದ ಚಾಂಪಿಯನ್ ಆಗಿರುವುದರಿಂದ, ಇಂದು ಸಂಪೂರ್ಣವಾಗಿ ಬಹುರಾಷ್ಟ್ರೀಯ ಕಂಪನಿಗಳ ಪರವಾಗಿ, ಅತ್ಯಂತ ಭ್ರಷ್ಟ ಪಕ್ಷವಾಗಿ

ಪರಿವರ್ತನೆಯಾಗಿರುವ ಕಾಂಗ್ರೆಸ್ ಪಕ್ಷದಲ್ಲಿದ್ದೂ ಹಿಂದುಳಿದ ಜನರ ಪರವಾಗಿ ಈ ಬಜೆಟ್ ತಿರುಗಿ ನೋಡುವಂತೆ ಮಾಡಿದ್ದಾರೆ. ಆದರೆ ಹಿಂದುಳಿದ ವರ್ಗದ ದುಸ್ಥಿತಿಯನ್ನು ಅಳೆಯುವ ಯಾವುದೇ ಮಾನದಂಡ, ನಿಖರ ಮಾಹಿತಿ ಇಲ್ಲದೇ ಇರುವುದರಿಂದ ಅವರ ಆಶಯ ಎಷ್ಟರಮಟ್ಟಿಗೆ ಈಡೇರುತ್ತದೆ ಎಂಬುದನ್ನು ಈಗಲೇ ಹೇಳಲಾಗುವುದಿಲ್ಲ.

ಒಂದು ಬಜೆಟ್ ಒಂದೇ ವರ್ಷಕ್ಕೆ ಸೀಮಿತವಾದರೂ ಅದು ತನ್ನ ಪ್ರಜೆಗಳ ನೂರಾರು ವರ್ಷಗಳ ಮುಂದಿನ ಪಯಣಕ್ಕೆ ಮಾರ್ಗದರ್ಶಿಯಾಗುವಂತಿರಬೇಕು. ಆದರೆ ಬರೀ 'ದಾನ' ರೂಪದಲ್ಲಿರುವ ಈ ಬಜೆಟ್ ಮತ್ತು ಸಾಮಾನ್ಯವಾಗಿ ಈಗಿನ ಬಜೆಟ್‌ಗಳು ಪ್ರಜೆಗಳ ಉತ್ಪಾದಕತೆಯನ್ನು ಹೆಚ್ಚಿಸದೇ ಅವರನ್ನು 'ಫಲಾನುಭವಿ'ಗಳನ್ನಾಗಿ ನೋಡುತ್ತವೆ. ಬಹುತೇಕ ಸಂದರ್ಭದಲ್ಲಿ ಈ 'ಫಲಾನುಭವಿ'ಗಳು ರಾಜಕಾರಣಿಗಳು, ಭ್ರಷ್ಟ ಅಧಿಕಾರಿಗಳು, ಗುತ್ತಿಗೆದಾರರು (ಮಧ್ಯವರ್ತಿಗಳು) ಮತ್ತು ಖಾಸಗಿ ಸಂಸ್ಥೆಗಳೇ ಆಗಿರುತ್ತವೆ. ಸುಮ್ಮನೆ ಒಂದು ಉದಾಹರಣೆಯನ್ನು ಗಮನಿಸುವುದಾದರೆ 'ಯಶಸ್ವಿನಿ' ಹೆಸರಿನಲ್ಲಿ ಜನರ ಆರೋಗ್ಯಕ್ಕಾಗಿ ಸರಕಾರ ವಿನಿಯೋಗಿಸುವ ಹಣ ಕಳೆದ ಮೂರು ವರ್ಷಗಳಲ್ಲಿ ಸುಮಾರು ೨೨೧ ರೂಪಾಯಿ ಕೋಟಿ ಖಾಸಗಿ ಆಸ್ಪತ್ರೆಗಳಿಗೆ ರಾಜಮಾರ್ಗದಲ್ಲಿಯೇ ಸೇರಿದೆ. ಈ ಸಲದ ಬಜೆಟ್‌ನಲ್ಲಿ ೨೧,೩೦೫ ಕೋಟಿ ರೂಪಾಯಿ ಶಿಕ್ಷಣಕ್ಕೆ ಕೊಡಲಾಗಿದೆ. ಆರ್.ಟಿ.ಇ. ಹೆಸರಿನಲ್ಲಿ ಇದರಲ್ಲಿನ ಮುಖ್ಯ ಭಾಗ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ರಾಜಮಾರ್ಗದಲ್ಲಿಯೇ ಸೇರುತ್ತದೆ. ಇದು ಬಡವರ, ಕೆಳಜಾತಿಯ ಮಕ್ಕಳಿಗೆ ಸರಕಾರ ತನ್ನ ಬಜೆಟ್ ಹೆಸರಿನಲ್ಲಿ ಘೋಷಿಸುವ ದಾನ. ಇದರ ಬದಲಾಗಿ ಶಿಕ್ಷಣ ಇಲಾಖೆಯಲ್ಲಿಯೇ ಖಾಲಿ ಇರುವ ೭,೯೪ ಹುದ್ದೆಗಳನ್ನು ತುಂಬಿ, ಇನ್ನೂ ಮೂಲಭೂತ ಸೌಲಭ್ಯಗಳನ್ನು ವಿಸ್ತರಿಸಿ, ಶಿಕ್ಷಣ ಇಲಾಖೆಯ ಗುಣಮಟ್ಟದ ವೃದ್ಧಿಗೆ ವಿಶೇಷ ಕಾರ್ಯಕ್ರಮ ರೂಪಿಸುವುದರ ಮೂಲಕ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನೇ ಉತ್ತಮಗೊಳಿಸಿದರೆ 'ಖಾಸಗಿ' ವಲಯಕ್ಕೆ ಹಣಕಾಸಿನ ಪರೋಕ್ಷ ಕಾಣಿಕೆ ನಿಲ್ಲಬಹುದು.

ಮುಖ್ಯಮಂತ್ರಿ ಸಿದ್ದರಾಮಯ್ಯನವರು ಶುದ್ಧಹಸ್ತರು ನಿಜ. ಅವರು ಘೋಷಿಸಿದ ೧,೩೮,೦೦೮ ಕೋಟಿ ರೂಪಾಯಿಯ ಬಜೆಟ್, ಹಿಂದಿನ ಸರಕಾರದ ಗುರಿಯನ್ನೂ ದಾಟಿದೆ ಎನ್ನುವುದೂ ನಿಜ. ಈ ಬಜೆಟ್‌ನಲ್ಲಿ 'ಕೆಲವು ಕೆಡಕು'ಗಳನ್ನು ನಿವಾರಿಸುವ ಗುಣಗಳಿರುವುದೂ ಸತ್ಯ. ಆದರೆ ಈಗಿರುವ ಆಡಳಿತ ಯಂತ್ರವನ್ನು ಇದೇ ರೀತಿಯಲ್ಲಿಟ್ಟುಕೊಂಡು ಮುಂದೆ ನಡೆದರೆ ಅವರ ಚುನಾವಣಾ ಸಂದರ್ಭದ ಆಶಯಗಳು ಈಡೇರಲಾರವು. ಈ ಬಜೆಟ್‌ನಲ್ಲಿ ಅನುಸೂಚಿತ ಜಾತಿಗಳ ಉಪಯೋಜನೆ ಹಾಗೂ ಬುಡಕಟ್ಟು ಉಪಯೋಜನೆಗಾಗಿ ೧೫,೮೩೪ ಕೋಟಿ ರೂಪಾಯಿಗಳನ್ನು ಅಧಿನಿಯಮದ ನಿರ್ದೇಶನದಂತೆ ಒದಗಿಸಲಾಗಿದೆ. ಆದರೆ ಕಳೆದ ವರ್ಷದ ಹಣ ಸರಿಯಾಗಿ, ಸಂಪೂರ್ಣವಾಗಿ ನಿರ್ದಿಷ್ಟ ಉದ್ದೇಶಕ್ಕೆ ಉಪಯೋಗವಾಗಿದೆಯೇ ಎಂಬುದನ್ನು ಗಮನಿಸಿದಾಗ ನಿರಾಶೆಯಾಗುತ್ತದೆ. ಈ ಉಪಯೋಜನೆಗೆ ಮೀಸಲಾದ ಹಣ ಪೂರ್ತಿ ಉಪಯೋಗವಾಗದೇ ಇರುವ ಉದಾಹರಣೆಗಳೂ ಇವೆ. "ಆಲಮಟ್ಟಿ ಅಣೆಕಟ್ಟನ್ನು ೫೨೪.೨೫ ಮೀಟರ್‌ಗೆ ಏರಿಸುವ ಉದ್ದೇಶಕ್ಕಾಗಿ ಮುಳುಗಡೆ ಪ್ರದೇಶದ ಭೂಸ್ವಾಧೀನ, ಪುನರ್‌ವಸತಿ ಹಾಗೂ ಪುನರ್‌ನಿರ್ಮಾಣ ಕಾಮಗಾರಿಗಳ ಚುರುಕು" ಎಂದು ೨೦೧೩–೧೪ನೇ ಸಾಲಿನ ಸಾಧನೆಗಳ ಕುರಿತು ಮುಖ್ಯಮಂತ್ರಿಗಳು ಹೇಳುತ್ತಾರೆ. ಆದರೆ ಈ ಮುಂಚೆಯೇ ಮುಳುಗಡೆಯಾಗಿ ಒದಗಿಸಲಾದ ಪುನರ್‌ವಸತಿ ಕೇಂದ್ರಗಳನ್ನು ಮುಖ್ಯಮಂತ್ರಿಗಳು ಗಮನಿಸಬೇಕು. ಅವು ನಿರಾಶ್ರಿತರ ಕರುಣಾಜನಕ ತಾಣಗಳಾಗಿವೆ. ಶುದ್ಧ ಕುಡಿವ ನೀರಿನ ತೊಂದರೆ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿದೆ. ೩೨೦೭ ಹಳ್ಳಿಗಳು ಫ್ಲೋರೈಡ್, ಅರ್ಸೆನಿಕ್, ಅನ್ಯ ರಾಸಾಯನಿಕ ಪೀಡಿತ ಸಮಸ್ಯಾತ್ಮಕ ಹಳ್ಳಿಗಳಿವೆ ಎಂದು ಬಜೆಟ್‌ನಲ್ಲಿ ಮುಖ್ಯಮಂತ್ರಿಗಳು ಹೇಳುತ್ತಾರೆ. ಆದರೆ ವಾಸ್ತವದಲ್ಲಿ ಹಳ್ಳಿಗಳ ಸಂಖ್ಯೆ ಮತ್ತು ಸಮಸ್ಯೆ ಈ ಸಂಖ್ಯೆಗಿಂತ ಅಪಾರ ಪ್ರಮಾಣದಲ್ಲಿ ಹೆಚ್ಚಿದೆ. ಈ ಬಜೆಟ್ ಇಂಥ ಮೂಲಭೂತ ಸಮಸ್ಯೆಗಳಿಗೆ ಹೆಚ್ಚಿನ ಆದ್ಯತೆ ನೀಡಬೇಕಿತ್ತು.

ಇನ್ನು ಬಜೆಟ್ ತುಂಬ ಸಾಲ, ಸಹಾಯಧನ, ಪ್ರೋತ್ಸಾಹಧನ, ಗೌರವಧನ, ಸಾಲಮನ್ನಾ–ಬಡ್ಡಿಮನ್ನಾಗಳಂಥ ಶಬ್ದಗಳೇ ತುಂಬಿವೆ. ಇವೆಲ್ಲ ಇರಬಾರದೆಂದಲ್ಲ. ಆದರೆ ಬರೀ ಇವೇ ಇರಕೂಡದು. ಜನತೆ ಉತ್ಪಾದನೆಯಲ್ಲಿ ತೊಡಗಿ ಸ್ವಾವಲಂಬಿಗಳಾದರೆ ಖಂಡಿತ ಈ ಸಾಲ, ಸಹಾಯಧನ ಬೇಕಾಗುವುದಿಲ್ಲ. ನಮ್ಮ ಮಾನವ ಸಂಪನ್ಮೂಲದ ಸದ್ಬಳಕೆಯಾದರೆ ಅವರೆಲ್ಲ ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗಿದರೆ, ಅವರ ದುಡಿತಕ್ಕೆ ತಕ್ಕ ಪ್ರತಿಫಲ ದೊರೆತರೆ ಅವರಿಗೆ ಯಾವ ಸಾಲ, ಪ್ರೋತ್ಸಾಹ, ಭಾಗ್ಯಗಳ ಅವಶ್ಯಕತೆಯಿಲ್ಲ. ಈಗಿರುವ ೧,೪೦,೦೦೦ ಕೋಟಿ ಸಾಲ ಅಥವಾ ಈಗ ಸರಕಾರ ತರಲು ಹೊರಟಿರುವ ಸುಮಾರು ೨೨ ಸಾವಿರ ಕೋಟಿ ಸಾಲದ ಅವಶ್ಯಕತೆಯೂ ಇರುವುದಿಲ್ಲ. ಜನರನ್ನು ಆರ್ಥಿಕವಾಗಿ ಸ್ವಾವಲಂಬಿಯಾಗಿಸಿದರೆ, ಸಬಲೀಕರಣ ಗೊಳಿಸಿದರೆ ಈಗಿರುವ ವಾಣಿಜ್ಯ ತೆರಿಗೆಯಿಂದ ಬರುವ ಆದಾಯ ಹೆಚ್ಚುತ್ತದೆ. ಎರಡನೇ ದೊಡ್ಡ ಆದಾಯ ವಾಗಿರುವ ಅಬಕಾರಿ ಮೂಲವನ್ನು ಕಡಿಮೆಗೊಳಿಸಿ ಜನರ ಆರೋಗ್ಯವನ್ನೂ ರಕ್ಷಿಸಬಹುದು. ಈ 'ದಾನ' ವ್ಯವಸ್ಥೆಯ ಬದಲಾಗಿ ಜನತೆಯನ್ನು ಉತ್ಪಾದಕ ವ್ಯವಸ್ಥೆಯ ಭಾಗವಾಗಿಸುವ ಕೆಲಸವಾಗಬೇಕು. ಆದ್ಯತೆಯ ಮೇಲೆ ಸರಕಾರ ಸಾಮಾಜಿಕ, ಲಿಂಗ, ಪ್ರಾದೇಶಿಕ ಅಸಮಾನತೆ ನಿವಾರಿಸಲು ಪ್ರಾಮಾಣಿಕ ಕೆಲಸ ಮಾಡಿದರೆ ಸಾಕು.

ಕೊನೆಯದಾಗಿ ಬಜೆಟ್‌ನ ಘೋಷಣೆ, ಅನುದಾನವಾಗಿ, ಅನುದಾನ ಯೋಜನೆಯ ರೂಪದಲ್ಲಿ ಜನರನ್ನು ತಲುಪಿ, ನಿರೀಕ್ಷಿತ ಗುರಿ ಮುಟ್ಟಲು ರಾಜಕಾರಣಿಗಳ, ಆಡಳಿತಗಾರರ ಪ್ರಾಮಾಣಿಕತೆ, ಪಾರದರ್ಶಕತೆ, ಇಚ್ಛಾಶಕ್ತಿ ಮುಖ್ಯ. ಅದೇ ಈಗಿರುವ ಕೊರತೆ. ಅಧಿಕಾರಕ್ಕೆ ಬಂದು ಒಂಬತ್ತು ತಿಂಗಳಾದರೂ ಹಿಂದಿನ ಲೋಕಾಯುಕ್ತ ಸಂತೋಷ ಹೆಗಡೆ ಅವರು ಕೊಟ್ಟ ವರದಿಯ ಕಡೆಗೆ ಈ ಸರಕಾರ ನೋಡಿಲ್ಲ. ಹೀಗಾದರೆ ಭ್ರಷ್ಟಾಚಾರ ನಿಯಂತ್ರಿಸುವುದೆಂತು ? ಬಜೆಟ್‌ನಲ್ಲಿ ಘೋಷಿಸಿದ ಯೋಜನೆಗಳು ಜನರಿಗೆ ತಲುಪುವುದೆಂತು ?

ಸಿದ್ದನಗೌಡ ಪಾಟೀಲ



ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



■ **ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

■ **ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

# ಕನ್ನಡ ಚಿತ್ರರಂಗ – ಕಾಡುತ್ತಿರುವ ಸಮಸ್ಯೆಗಳು

ಕನ್ನಡ ಚಿತ್ರರಂಗಕ್ಕೆ ಎಂಬತ್ತು ವರ್ಷ ತುಂಬಿದ್ದರೂ ಇನ್ನೂ ಸಂಪೂರ್ಣವಾಗಿ ಸುಭದ್ರವಾದ ಒಂದು ನೆಲೆಯನ್ನು ಕಂಡುಕೊಂಡಿಲ್ಲ. ಅಸ್ತಿತ್ವಕ್ಕೆ ಬಂದಾಗಿನಿಂದ ಒಂದಲ್ಲ ಒಂದು ವಿವಾದದ ಸುಳಿಯಲ್ಲಿ ಸಿಲುಕಿ ನರಳುತ್ತಿರುತ್ತದೆ. ವರ್ಷಕ್ಕೆ ಎರಡು ಮೂರು ಚಿತ್ರಗಳನ್ನು ತಯಾರಿಸುತ್ತಿದ್ದ ಅದು ಇಂದು ನೂರಾರು ಚಿತ್ರಗಳನ್ನು ತೆರೆ ಕಾಣಿಸುತ್ತಿದೆ. ಸಿನಿಮಾದ ತಾಂತ್ರಿಕತೆಯಲ್ಲಿ, ಖರ್ಚು–ವೆಚ್ಚಗಳಲ್ಲಿ ಕನ್ನಡ ಚಿತ್ರರಂಗ ಯಾವ ರೀತಿಯಲ್ಲೂ ಹಿಂದೆ ಬಿದ್ದಿಲ್ಲ. ಒಂದೆರಡು ಲಕ್ಷ ರೂಪಾಯಿಗಳಲ್ಲಿ ಚಿತ್ರ ತಯಾರಾಗುತ್ತಿದ್ದ ಕಾಲ ಹೋಗಿ ಇವತ್ತು ಹಲವು ಕೋಟಿಗಳ ಉದ್ಯಮವಾಗಿದೆ. ತಯಾರಾಗಿ ಬಿಡುಗಡೆಯಾಗುತ್ತಿರುವ ಚಿತ್ರಗಳಲ್ಲಿ ಕಾಳೆಷ್ಟು, ಜೊಳ್ಳೆಷ್ಟು ಎನ್ನುವುದು ಇಲ್ಲಿ ಮುಖ್ಯವಲ್ಲ. ಅದು ಯಾವತ್ತೂ ಈ ಉದ್ಯಮದಲ್ಲಿ ಇರುವ ಸಂಗತಿ ಯಾವುದೇ ಭಾಷೆಯದ್ದಾಗಿರಲಿ, ಬಂಡವಾಳಕ್ಕಂತೂ ಕೊರತೆ ಇಲ್ಲ. ಅದು ಎಲ್ಲಿಂದ ಬರುತ್ತದೆ, ಹೇಗೆ ಎನ್ನುವುದು ಬೇರೆಯ ವಿಷಯ. ಪ್ರಾರಂಭದ ದೆಸೆಯಲ್ಲಿ ಪರಕೀಯ ಭಾವನೆ ಕಾಡುತ್ತಿದ್ದರೆ, ಬೆಳೆಯುತ್ತ ಬಂದ ಹಾಗೆ ಕಾಡಿದ್ದು ಕೀಳರಿಮೆ. ಇಷ್ಟು ವರ್ಷಗಳಾದರೂ ಅದರಿಂದ ಇನ್ನೂ ಹೊರಗೆ ಬಾರದಿರುವುದು ವಿಷಾದನೀಯ.

ನಾನಾ ಬಗೆಯ ಸಮಸ್ಯೆಗಳನ್ನು, ವಿವಾದಗಳನ್ನು ಕಂಡಿರುವ ನಮ್ಮ ಚಿತ್ರರಂಗ ಇಂದು ಮತ್ತೊಮ್ಮೆ ಡಬ್ಬಿಂಗ್ ಚಿತ್ರಗಳು ಬೇಕೇ ಬೇಡವೆ ಎಂಬ ತೀವ್ರ ಚರ್ಚೆಯಲ್ಲಿ ಮುಳುಗಿದೆ. ಪರ–ವಿರೋಧಗಳ ಕಚ್ಚಾಟದ ಜೊತೆಗೆ ಬೀದಿಗಿಳಿದು ಹೋರಾಟವೂ ನಡೆದಿದೆ. ಇದರಲ್ಲಿ ಯಾರು ಸರಿ, ಯಾರು ತಪ್ಪು ಎನ್ನುವುದಕ್ಕಿಂತ ಮುಂದೇನು ಎನ್ನುವುದೇ ಪ್ರಶ್ನೆ. ಡಬ್ಬಿಂಗ್ ವಿವಾದ ನ್ಯಾಯಾಲಯದ ಮೆಟ್ಟಿಲೇರಿದೆ. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ತಟಸ್ಥವಾಗಿದೆ. ಚಿತ್ರರಂಗ ಒಡೆದ ಮನೆಯಾಗಿದೆ. ಇದಕ್ಕೆ ಅಂತ್ಯ ನ್ಯಾಯಾಲಯದ ತೀರ್ಪೇ ಇಲ್ಲವೇ ಕಾಲೋಚಿತ ವಿವೇಚನೆಯೇ ಕಾದು ನೋಡಬೇಕಿದೆ.

ಏನಿದು ಡಬ್ಬಿಂಗ್ ? ಬೇರೆ ಭಾಷೆಗಳಲ್ಲಿ ತಯಾರಾಗಿರುವ ಯಶಸ್ವೀ ಚಲನಚಿತ್ರವನ್ನು ಯಥಾವತ್ತಾಗಿ ಕನ್ನಡದಲ್ಲಿ ಭಟ್ಟಿ ಇಳಿಸುವುದು ಎನ್ನುವುದು ಒಂದು ಸುಲಭವಾದ ವಿವರಣೆ. ಡಬ್ಬಿಂಗ್ ಚಿತ್ರದಲ್ಲಿ ಕಲಾವಿದರ ತುಟಿ ಚಲನೆಗೆ ಅನುಗುಣವಾಗಿ ಭಾಷೆ ಅಳವಡಿಸುವುದು ಮುಖ್ಯವಾಗುತ್ತದೆ. ಅತ್ಯಂತ ಕಡಿಮೆ ಖರ್ಚಿನಲ್ಲಿ ಇದನ್ನು ಮಾಡುವುದು ಸಾಧ್ಯವಿದೆ. ಡಬ್ಬಿಂಗ್ ಕಲಾವಿದರನ್ನು ಬಿಟ್ಟರೆ ಉಳಿದ ಎಲ್ಲ ಕಲಾವಿದರು, ತಂತ್ರಜ್ಞರುಗಳಿಗೆ ಏನೂ ಪಾತ್ರವಿಲ್ಲ. ಡಬ್ಬಿಂಗ್ ಚಿತ್ರಗಳಿಂದ ಸೃಜನಶೀಲತೆ ಮಾಯವಾಗುವುದರ ಜೊತೆಗೆ, ಕಲಾವಿದರು ಮತ್ತು ಕಾರ್ಮಿಕರು ಉದ್ಯೋಗ ವಂಚಿತರಾಗುತ್ತಾರೆ. ಸ್ವಂತಿಕೆ ಸಂಪೂರ್ಣವಾಗಿ ನಶಿಸಿಹೋಗುತ್ತದೆ. ಅದರಿಂದಾಗಿ ಡಬ್ಬಿಂಗ್‌ನಿಂದ ಅನಾಹುತವೇ ಹೆಚ್ಚು ಎನ್ನುವುದು ಡಬ್ಬಿಂಗ್ ವಿರೋಧಿಗಳ ಅಂಬೋಣ. ಡಬ್ಬಿಂಗ್ ಇಲ್ಲದೇ ಹೋದರೆ ಕನ್ನಡದ ಪ್ರೇಕ್ಷಕರು ಉತ್ತಮ ಚಿತ್ರಗಳಿಂದ ವಂಚಿತರಾಗುತ್ತಾರೆ, ಬೆಳವಣಿಗೆ ಕುಂಠಿತವಾಗುತ್ತದೆ ಎನ್ನುವುದು ಪರವಾಗಿರುವವರ ನಿಲುವು. ಅರವತ್ತರ ದಶಕದಲ್ಲಿ ಈ ಡಬ್ಬಿಂಗ್ ವಿವಾದ ಭುಗಿಲೆದ್ದಿತ್ತು. ಆಗಲೂ ಚಿತ್ರರಂಗದ ಕಲಾವಿದರು, ತಯಾರಕರು ದೊಡ್ಡ ಹೋರಾಟವನ್ನೇ ನಡೆಸಿದ್ದರು. ಸಾಕಷ್ಟು ಕಾಲ ಈ ವಿವಾದ ತಣ್ಣಗಾಗಿತ್ತು. ಈ ವಿವಾದ ಮುಖ್ಯವಾಗಿ ಚಿತ್ರ ನಿರ್ಮಾಪಕರಿಗೆ ಸಂಬಂಧಪಟ್ಟಿದ್ದು, ನೆರೆಯ ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ, ಕೇರಳ ಮುಂತಾದ ರಾಜ್ಯಗಳಲ್ಲಿ ಡಬ್ಬಿಂಗ್ ಚಿತ್ರಗಳ ತಯಾರಿಕೆಗೆ ಯಾವ ವಿರೋಧವೂ ಇಲ್ಲ. ಅಲ್ಲಿ ಪ್ರದರ್ಶನಗೊಳ್ಳುವ ಡಬ್ಬಿಂಗ್ ಚಿತ್ರಗಳಿಂದ ಆ ಭಾಷೆಯ ಚಿತ್ರಗಳಿಗೆ ಯಾವ ರೀತಿಯಲ್ಲಿಯೂ ಹಾನಿಯಾಗಿಲ್ಲ. ಹಾಗಿರುವಾಗ ಕನ್ನಡ ಚಿತ್ರರಂಗಕ್ಕೆ ಏಕೆ ಆ ಸ್ವಾತಂತ್ರ್ಯವಿಲ್ಲ ಎನ್ನುವ ವಾದವೂ ಇದೆ. ಕನ್ನಡ ಚಿತ್ರರಂಗ ಇನ್ನೂ ಆ ಘಟ್ಟವನ್ನು ತಲುಪಿಲ್ಲ ಎನ್ನುವುದೊಂದೇ ಇದಕ್ಕೆ ಉತ್ತರ ಆಗಿರುತ್ತದೆ.

ಕನ್ನಡ ಚಿತ್ರ ಹುಟ್ಟಿ ಬೆಳೆದಿದ್ದೇ ಅನ್ಯಭಾಷೆಯ ನೆರಳಿನಲ್ಲಿ. ಅಂದಿನ ಮದರಾಸು ದಕ್ಷಿಣ ಭಾರತದ ಎಲ್ಲ ಭಾಷೆಯ ಚಿತ್ರಗಳಿಗೂ ತವರು. ಕನ್ನಡ ಚಿತ್ರಗಳಿಗೆ ಬಂಡವಾಳದಿಂದ ಹಿಡಿದು, ಸಾಲ–ಸೋಲ, ಸ್ಟುಡಿಯೋ ಸೆಟ್‌ಗಳು ಹಾಗೂ ತಾಂತ್ರಿಕ ವರ್ಗದವರೆಗೆ ಮೊದಲಿದ್ದುದು ಅನ್ಯಭಾಷೆಯ ಆಶ್ರಯವೇ. ಈ ಸಂಕೋಲೆಯನ್ನು ಬಿಡಿಸಿಕೊಂಡು ಕನ್ನಡ ಚಿತ್ರರಂಗ ಕರ್ನಾಟಕದ ರಾಜಧಾನಿಯಲ್ಲಿ ನೆಲೆಯೂರುವುದಕ್ಕೆ ನಲವತ್ತು ವರ್ಷಗಳು ಬೇಕಾದುವು. ಡಬ್ಬಿಂಗ್, ರೀಮೇಕ್, ಅನ್ಯಭಾಷಾ ಚಿತ್ರಗಳ ಪೈಪೋಟಿ ಎಲ್ಲವನ್ನೂ ದಾಟಿ ಬಂದಿರುವ ಕನ್ನಡ ಚಿತ್ರರಂಗ ಪ್ರೌಢಾವಸ್ಥೆಯನ್ನು ತಲುಪಿ ಇನ್ನೂ ತನ್ನ ಕಾಲಮೇಲೆ ನಿಂತಿಲ್ಲವೇ ಎನ್ನುವ ಅನುಮಾನ ಬರುವುದು ಅಸಹಜವೇನಲ್ಲ. ರೀಮೇಕ್ ಚಿತ್ರಗಳ ಹಾವಳಿಯ ವಿರುದ್ಧವಾಗಿ ನಡೆದ ಆಂದೋಳನ ಒಂದು ಕಡೆಯಾದರೆ, ತಯಾರಾದ ಕನ್ನಡ ಚಿತ್ರಗಳಿಗೆ ಚಿತ್ರಮಂದಿರಗಳ ಅಲಭ್ಯತೆ ಇನ್ನೊಂದು. ಇವೆಲ್ಲ ಅರವತ್ತು ಎಪ್ಪತ್ತರ ದಶಕದಲ್ಲಿ ಕನ್ನಡ ಚಿತ್ರರಂಗವನ್ನು ಕಾಡಿದ್ದ ಸಮಸ್ಯೆ. ಇದಕ್ಕಾಗಿ ದೊಡ್ಡ ಹೋರಾಟವೇ ನಡೆದು ಒಂದು ರೀತಿಯ ಖಾಜಿ ನ್ಯಾಯ ತಯಾರಕರು, ವಿತರಕರು ಮತ್ತು ಪ್ರದರ್ಶಕರ ಮಧ್ಯೆ ಆಗಿ ಸಮಸ್ಯೆ ತಣ್ಣಗಾದ್ದನ್ನು ನಾವು ಕಂಡಿದ್ದೇವೆ. ಈಗ ಚಿತ್ರಮಂದಿರಗಳ ಮಾದರಿಯೇ ಬದಲಾಗುತ್ತಿದೆ. ಹಿಂದೆ ಇದ್ದ ದೊಡ್ಡ ಚಿತ್ರಮಂದಿರಗಳೆಲ್ಲ ಒಂದೊಂದಾಗಿ ಅದೃಶ್ಯವಾಗಿ ಮಲ್ಟಿಪ್ಲೆಕ್ಸ್ ಯುಗ ಪ್ರಾರಂಭವಾಗಿದೆ ಮಹಾನಗರಗಳಲ್ಲಿ. ಆಧುನಿಕ ತಂತ್ರಜ್ಞಾನದ ಪರಿಣಾಮವಾಗಿ ಇಂದು ಕನ್ನಡ ಚಿತ್ರಗಳು ರಾಜ್ಯಾದ್ಯಂತ ಏಕ ಕಾಲದಲ್ಲಿ ಪ್ರದರ್ಶನಗೊಳ್ಳುತ್ತಿವೆ. ಸರಕಾರದಿಂದ ಉತ್ತಮ ಚಿತ್ರಗಳಿಗೆ ಪರಿಹಾರ ಧನ, ತೆರಿಗೆ ವಿನಾಯಿತಿ, ಹಲವಾರು ಪ್ರಶಸ್ತಿಗಳು, ಹೀಗೆ ನಾನಾ ಬಗೆಯ ಪ್ರೋತ್ಸಾಹವಿದ್ದಾಗ್ಯೂ ಚಿತ್ರೋದ್ಯಮ ಇನ್ನೂ ತನ್ನ ನೆಲೆ ಕಂಡುಕೊಳ್ಳದೆ ತೊಳಲಾಡುತ್ತಿರುವುದು ಅರ್ಥವಾಗದ ಸಂಗತಿ.

ಇಂದು ತಯಾರಾಗುತ್ತಿರುವ ಚಿತ್ರಗಳ ಪೈಕಿ ಗಲ್ಲಾಪೆಟ್ಟಿಗೆ ತುಂಬಿ ಲಾಭದಾಯಕವಾಗುವುದು ಶೇಕಡ ೧೦ರಷ್ಟು ಮಾತ್ರ. ಕಳೆದ ವರ್ಷ ಪ್ರದರ್ಶನ ಕಂಡ ಚಿತ್ರಗಳಲ್ಲಿ ಕೇವಲ ಹತ್ತು – ಹನ್ನೆರಡು ಚಿತ್ರಗಳು ಮಾತ್ರ ಹಣ ಗಳಿಸಿದ್ದವು. ಇನ್ನು ಮೇನ್‌ಸ್ಟ್ರೀಮ್ ಚಿತ್ರಗಳಾದರೆ, ಪರ್ಯಾಯ ಅಥವಾ ಹೊಸ ಅಲೆ ಚಿತ್ರಗಳ ಪಾಡು ಬೇರೆ. ಕೆಲವೇ ನಿರ್ದೇಶಕರು ಮಾಡುವ ವಾಸ್ತವವಾದ ಜೀವನಕ್ಕೆ ಹತ್ತಿರವಾದ ಚಿತ್ರಗಳ ಪ್ರದರ್ಶನಕ್ಕೆ ಥಿಯೇಟರುಗಳ ಲಭ್ಯತೆಯೇ ದೊಡ್ಡ ಸಮಸ್ಯೆ. ಇಂಥ ಚಿತ್ರಗಳನ್ನು ನೋಡುವವರೇ ಒಂದು ವರ್ಗದ ಜನ. ಈಗಿನ ಕಮರ್ಷಿಯಲ್ ಚಿತ್ರಗಳ ಭರಾಟೆಯಲ್ಲಿ ಪ್ರಾಯೋಗಿಕ ಚಿತ್ರಗಳ ಭವಿಷ್ಯ ಅನುಮಾನಾಸ್ಪದವಾಗುತ್ತಿದೆ, ಚಲನಚಿತ್ರಗಳಿಗೆ ಹಾಕಿದ ಬಂಡವಾಳ ವಾಪಸ್ ಬರುವುದೂ ಕೂಡ ಬಹಳ ಕಡಿಮೆ ಸಂಖ್ಯೆಯ ಚಿತ್ರಗಳಿಗೆ. ಇಂಥದೇ ಪರಿಸ್ಥಿತಿ ಇತರ ಭಾಷೆಯ ಚಿತ್ರಗಳಲ್ಲೂ ಇವೆ. ಬಹುಶಃ ಚಿತ್ರರಂಗದ ಜಾಯಮಾನವೆ ಹಾಗೇನೊ. ಇನ್ನು ಚಿತ್ರಗಳ ಗುಣಮಟ್ಟಕ್ಕೆ ಸಂಬಂಧಪಟ್ಟ ಹಾಗೆ ಏನೂ ಹೇಳದಿರುವುದೇ ಮೇಲು. ಇಡೀ ಕುಟುಂಬದ ಸದಸ್ಯರು ಕುಳಿತು ನೋಡ ಬಹುದಾದ ಚಿತ್ರಗಳು ಅಪರೂಪ. ಸಾಮಾನ್ಯವಾಗಿ ಇಂದು ತಯಾರಾಗುತ್ತಿರುವ ಚಿತ್ರಗಳು ನಮ್ಮ ಸಂಸ್ಕೃತಿ, ಪರಂಪರೆಗಳ ಪ್ರತೀಕ ಎನ್ನುವುದು ಅನುಮಾನದ ಸಂಗತಿ. ಹಾಗೆಂದಮಾತ್ರಕ್ಕೆ ಕನ್ನಡದಲ್ಲಿ ಕತೆ, ಕಾದಂಬರಿಗಳಿಗೆ ಕೊರತೆ ಏನಿಲ್ಲ. ಹೇಗಿದ್ದರೂ ಇತರ ಭಾಷೆಗಳಲ್ಲಿ ಯಶಸ್ವಿಯಾದ ಚಿತ್ರಗಳ ಕಡೆಗೆ ವ್ಯಾಮೋಹವೇ ಹೆಚ್ಚು. ಸ್ವಂತಿಕೆ ತೋರಬಯಸುವವರಿಗೆ ಬೇಕಾದಷ್ಟು ಅವಕಾಶವಿದೆ. ಆದರೆ ಸುಲಭದ ಸೂತ್ರಗಳಿಗೆ, ಹಿಂಸೆ ಮತ್ತು ಲೈಂಗಿಕತೆಗೆ ಪ್ರಾಧಾನ್ಯತೆ ನೀಡುವ ಜಡ್ಡು ಹಾದಿ ಕ್ರಮಿಸುವುದು ಅಭ್ಯಾಸವಾಗಿ ಹೋಗಿದೆ. ಇದರಿಂದ ಹೊರಗೆ ಬಾರದೆ, ಸ್ವಂತಿಕೆ ತೋರದೆ, ಯಶಸ್ಸಿನ ಬೆನ್ನುಹತ್ತಿ ಹೋಗುವುದರಿಂದ ಪ್ರಯೋಜನವಿಲ್ಲ. ಕನ್ನಡ ಚಿತ್ರರಂಗ ಪ್ರೌಢಾವಸ್ಥೆ ತಲುಪಿ ಹೊಸ ಪಥವನ್ನು ಅನುಸರಿಸಿದಾಗ ಎಲ್ಲವೂ ಸುಗಮವಾಗುತ್ತದೆ. ಡಬ್ಬಿಂಗ್, ರೀಮೇಕ್, ಅನ್ಯಭಾಷಾ ಪೈಪೋಟಿ ಎಲ್ಲ ತಾನಾಗಿಯೇ ಮಾಯವಾಗುತ್ತವೆ. ಹಾಗಾದಾಗ ಮಾತ್ರವೇ ಕನ್ನಡ ಚಿತ್ರರಂಗಕ್ಕೆ ಉಳಿಗಾಲ.

*ಈ ತಿಂಗಳು (೫ನೇ ಪುಟದಿಂದ)*

ಸಂಶಯವಿಲ್ಲ. ರಾಜ್ಯ ಸರಕಾರ ನೇಮಿಸುವ ತಜ್ಞರ ಸಮಿತಿಯ ಶಿಫಾರಸಿನ ಮೇರೆಗೆ ಮುಖ್ಯಮಂತ್ರಿಗಳು ಮೂವರ ಹೆಸರನ್ನು ರಾಜ್ಯಪಾಲರಿಗೆ ಕಳಿಸಿಕೊಡುತ್ತಾರೆ. ಇದರಲ್ಲಿ ಒಂದನ್ನು ಅವರು ಆಯ್ಕೆ ಮಾಡುತ್ತಾರೆ. ಇದು ಕ್ರಮ. ಇಲ್ಲಿ ಪ್ರಶ್ನೆ ಉದ್ಭವಿಸಿರುವುದು ಸಮಿತಿ ಅಪೇಕ್ಷಿಸಿದ್ದ ಅಭ್ಯರ್ಥಿ ಆಯ್ಕೆಯಾಗಲಿಲ್ಲ ಎನ್ನುವುದು. ರಾಜ್ಯಪಾಲರು ಈ ವಿಷಯದಲ್ಲಿ ಸಮಿತಿ ಅಧ್ಯಕ್ಷರ ಕುರಿತು ವೈಯಕ್ತಿಕವಾಗಿ, ಅದೂ ಅವರ ಆರೋಗ್ಯ ಕುರಿತು ಲೇವಡಿ ಮಾಡಿರುವುದು ಖಂಡನೀಯ. ಮತ್ತೆ ನಮ್ಮ ರಾಜಭವನಗಳನ್ನು ಅಲಂಕರಿಸುವವರು ಶುದ್ಧ ಹಸ್ತರೇನಲ್ಲ.

✶ ✶ ✶

ನಗರೀಕರಣದ ಭರಾಟೆಯಲ್ಲಿ ಸರಕಾರದ ಅಧೀನದಲ್ಲಿರುವ ಜಮೀನು ಕಬಳಿಸುವ ಪ್ರವೃತ್ತಿ ವಿಪರೀತದ ಮಟ್ಟಕ್ಕೆ ಹೋಗಿದೆ ಈಚಿನ ವರ್ಷಗಳಲ್ಲಿ. ಸರಕಾರಕ್ಕೆ ಸೇರಿರುವ ಭೂಮಿಯನ್ನು ಲಪಟಾಯಿಸುವ ರೂಢಿ ಇಂದು ನಿನ್ನೆಯದಲ್ಲ, ಲಾಗಾಯ್ತಿನಿಂದ ಬಂದದ್ದು. ಅಧಿಕಾರಿಗಳು, ಸ್ಥಿತಿವಂತರು, ರಾಜಕಾರಣಿಗಳು ಇದರಲ್ಲಿ ಶಾಮೀಲಾಗಿರುತ್ತಾರೆ. ಅರಣ್ಯಪ್ರದೇಶಗಳ ಒತ್ತುವರಿ, ಕೆರೆ, ಕುಂಟೆಗಳ ಒತ್ತುವರಿ ಅನೇಕ ವೇಳೆ ಬೆಳಕಿಗೆ ಬರುವುದಿಲ್ಲ. ಎಲ್ಲವನ್ನೂ ಹಾಗೆ ಮುಚ್ಚಿಹಾಕಿಬಿಡುತ್ತಾರೆ. ಸರಕಾರಕ್ಕೂ ಅದರ ಮಾಹಿತಿ ಇರುವುದಿಲ್ಲ. ಈಚಿನ ವರ್ಷಗಳಲ್ಲಿ ಭೂಕಬಳಿಕೆ ಒಂದು ಬೃಹತ್ ದಂಧೆಯಾಗಿಬಿಟ್ಟಿದೆ. ಹಿಂದೊಮ್ಮೆ ಶಾಸಕ ರಾಮಸ್ವಾಮಿ ನೇತೃತ್ವದಲ್ಲಿ ರಚನೆಯಾಗಿದ್ದ ಸಮಿತಿಯೊಂದು ಸರಕಾರಿ ಆಸ್ತಿಪಾಸ್ತಿಗಳ ಕಬಳಿಕೆ ಹಾಗೂ ಸರಕಾರಕ್ಕೆ ಸೇರಿದ್ದ ಜಮೀನುಗಳ ಪರಭಾರೆ ಕುರಿತು ವರದಿ ಸಲ್ಲಿಸಿತು. ಅದು ಬಹುತೇಕ ಬೆಂಗಳೂರು ಮತ್ತು ಸುತ್ತಮುತ್ತಲ ಪ್ರದೇಶಕ್ಕೆ ಸಂಬಂಧಪಟ್ಟಿದ್ದಾಗಿತ್ತು. ಅದರಲ್ಲಿ ಹಲವು ಪ್ರತಿಷ್ಠಿತ ವ್ಯಕ್ತಿಗಳು ಮತ್ತು ಅಧಿಕಾರಿಗಳ ಹೆಸರುಗಳು ಪ್ರಸ್ತಾಪವಾಗಿದ್ದುವು. ಶಾಸನಸಭೆಯಲ್ಲಿ ವರದಿಯನ್ನು ಮಂಡಿಸಿದರೂ ಅಧಿಕಾರಕ್ಕೆ ಬಂದ ಸರಕಾರಗಳು ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ಈಗ ಆ ವರದಿಯ ಸೊಲ್ಲೇ ಇಲ್ಲ, ಹಾಗೆಯೇ ಸರಕಾರಿ ದಫ್ತರದಲ್ಲಿ ಮುಚ್ಚಿಹೋಗಿದೆ. ಈಚೆಗೆ ವಿಧಾನ ಪರಿಷತ್ತಿನಲ್ಲಿ ಪ್ರಶ್ನೆಯೊಂದಕ್ಕೆ ಉತ್ತರ ನೀಡಿದ ಸಚಿವರು ರಾಜ್ಯದಲ್ಲಿ ಸರಕಾರಕ್ಕೆ ಸೇರಿದ ೧೩,೦೨,೨೪೧ ಎಕರೆ ಜಮೀನು ಗುಳುಂ ಆಗಿದೆ ಎಂದು ತಿಳಿಸಿದ್ದಾರೆ. ಸಾವಿರಾರು ಪುಟಗಳ ವಿವರಣೆ ಹೊಂದಿರುವ ಈ ಉತ್ತರ ಜಿಲ್ಲಾವಾರಾಗಿ ಸರಕಾರಿ ಜಮೀನುಗಳ ಕಬಳಿಕೆಯನ್ನು ದಾಖಲಿಸಿದೆ. ಸಚಿವರು ನೀಡಿರುವ ಹೇಳಿಕೆಯ ಪ್ರಕಾರ ಸರಕಾರದ ವಶದಲ್ಲಿ ೬೨,೨೫,೩೪೯ ಎಕರೆ. ಈ ಪೈಕಿ ಐದನೇ ಒಂದು ಭಾಗದಷ್ಟು ಭೂಮಿ ಅತಿಕ್ರಮಣವಾಗಿದೆ. ಸಚಿವರು ನೀಡಿರುವ ಉತ್ತರದಲ್ಲಿ ಕಾಲಾವಧಿಯ ಪ್ರಸ್ತಾಪ ಎಲ್ಲೂ ಇಲ್ಲ. ಇದರಲ್ಲಿ ಸುಮಾರು ಒಂದು ಲಕ್ಷ ಎಕರೆ ಭೂಮಿಗೆ ಮಾತ್ರ ಸರಕಾರದ ಪರವಾನಗಿ ದೊರೆತಿದೆ. ಉಳಿದವುಗಳ ಬಗೆಗೆ ಸರಕಾರ ಯಾವಾಗ ಕ್ರಮ ಕೈಗೊಳ್ಳುವುದೋ ನೋಡಬೇಕಿದೆ. ಹೊಸ ಟಾಸ್ಕ್ ಫೋರ್ಸು ಒಂದನ್ನು ಮಾಡಿ ಅತಿಕ್ರಮಣ ಭೂಮಿಯನ್ನು ವಶಪಡಿಸಿಕೊಳ್ಳಲು ಸರಕಾರ ಕ್ರಮ ಕೈಗೊಳ್ಳುವುದಾಗಿ ಸಚಿವರು ಹೇಳಿದ್ದಾರೆ. ಆ ದಿನ ಯಾವಾಗ ಬರುತ್ತೋ! ಅದುವರೆಗೆ ಸರಕಾರಿ ಭೂಮಿ ಒತ್ತುವರಿ ಮಾಡಿಕೊಂಡಿರುವ ಫಲಾನುಭವಿಗಳು ಸುರಕ್ಷಿತ.

✶ ✶ ✶

ಲಂಚ ರುಷುವತ್ತುಗಳು ಬೇರೂರಿರುವಂತೆಯೇ ಕಾಳಸಂತೆ ವ್ಯವಹಾರವೂ ಭದ್ರವಾಗಿ ನೆಲೆಗೊಂಡಿದೆ. ಪ್ರತಿನಿತ್ಯ ಸಾವಿರಾರು ಕೋಟಿ ರೂಪಾಯಿಗಳ ಕಪ್ಪು ಹಣ ದೇಶಾದ್ಯಂತ ಹರಿದಾಡುತ್ತಿರುತ್ತದೆ. ಈ ವ್ಯವಹಾರವೆಲ್ಲವೂ ಅಕ್ರಮ, ಆದರೂ ಅವು ರಾಜಾರೋಷವಾಗಿ ನಡೆಯುತ್ತವೆ. ಒಂದು ಮೂಲದ ಪ್ರಕಾರ ಪ್ರತಿನಿತ್ಯ ೧,೦೦೦ ಕೋಟಿ ರೂಪಾಯಿಗಳು ಕೈ ಬದಲಾಯಿಸುತ್ತಿರುತ್ತವೆ. ಈ ಅಕ್ರಮ ವ್ಯವಹಾರ ಒಂದು ಅತಿ ದೊಡ್ಡ ಜಾಲಬಂಧ. ಒಂದು ಸುವ್ಯವಸ್ಥಿತ ಬದಲಿ ಅರ್ಥ ವ್ಯವಸ್ಥೆ. ಹಣಕಾಸನ್ನು ಒಯ್ಯಲು ವಿಶೇಷ ಕೊರಿಯರ್‌ಗಳ ಜಾಲವೇ ಇದೆ. ಗುಜರಾತಿ ಭಾಷೆಯಲ್ಲಿ 'ಅಂಗಾರಿಯಾಸ್' ಎಂದರೆ ಹಿಂದಿಯಲ್ಲಿ 'ಚಲ್ಲಾಗಿಯ' ಎನ್ನುತ್ತಾರೆ. ಕನ್ನಡದಲ್ಲಿ 'ದೂತರು' ಎನ್ನಬಹುದೇನೊ! ದೂತರೋ ದೈತ್ಯರೋ ಅಂತೂ ಇವರು ಕೋಟಿಗಟ್ಟಲೆ ಹಣವನ್ನು ದೇಶಾದ್ಯಂತ ಒಯ್ಯುವ ಖದೀಮರು. ಇದರ ಮುಂದೆ ಯಾವ ಸ್ವಿಸ್ ಬ್ಯಾಂಕೂ ಇಲ್ಲ. ಈ ಅಂಗಾರಿಯಗಳು ಕಮಿಶನ್ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಾರೆ. ಕಪ್ಪು ಹಣವನ್ನು ಬಂಗಾರ ಮತ್ತು ವಜ್ರವೈಢೂರ್ಯಗಳಿಗೆ ಬದಲಿ ಮಾಡುವುದರಲ್ಲೂ ಇವರು ಚಾಣಾಕ್ಷರು. ಜುಲೈ ೧ರಿಂದ ರಿಸರ್ವ್ ಬ್ಯಾಂಕ್ ರೂ. ೫೦೦ ಮತ್ತು ರೂ. ೧೦೦೦ ಹಳೆಯ ನೋಟುಗಳನ್ನು ಹಿಂದಕ್ಕೆ ಪಡೆಯಲು ಆಜ್ಞೆ ಹೊರಡಿಸಿದೆ. ಸರ್ಕ್ಯುಲೇಶನ್‌ನಲ್ಲಿರುವ ಗುಪ್ತ ಹಣವನ್ನು ಹೊರತೆಗೆಯಲು ಕೈಗೊಂಡಿರುವ ಕ್ರಮ ಇದು. ೨೦೦೫ರ ಹಿಂದಿನ ನೋಟುಗಳ ಚಲಾವಣೆ ಇಲ್ಲದಿರುವುದರಿಂದ ಬದಲಾಯಿಸಿಕೊಳ್ಳಲು ಇಟ್ಟುಕೊಂಡಿರುವವರು ವಿವರಣೆ ಕೊಡಬೇಕಾಗುತ್ತದೆ. ರಿಸರ್ವ್ ಬ್ಯಾಂಕ್ ಸಾಕಷ್ಟು ಸಮಯಾವಕಾಶ ನೀಡಿರುವುದರಿಂದ ಪಳಗಿದ ಕೈಗಳು ಈಗಾಗಲೇ ಕಾರ್ಯೋನ್ಮುಖವಾಗಿವೆ. ಹಿಂದೆ, ಎರಡನೇ ಮಹಾ ಯುದ್ಧಾನಂತರ ಬ್ರಿಟಿಷ್ ಸರಕಾರ ಒಂದು ಸಾವಿರ ರೂಪಾಯಿಯ ನೋಟುಗಳ ಚಲಾವಣೆಯನ್ನು ನಿಲ್ಲಿಸಿದ್ದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಕಾಳಸಂತೆಕೋರರು ತಮ್ಮದೇ ವ್ಯವಸ್ಥೆ ಸ್ಥಾಪಿಸಿ ಕೊಂಡಿರುವುದರಿಂದ ರಿಜರ್ವ್ ಬ್ಯಾಂಕಿನ ಈ ಕ್ರಮಗಳು ನಿರೀಕ್ಷಿತ ಪರಿಣಾಮವನ್ನೇನೂ ಉಂಟುಮಾಡದು.

✶ ✶ ✶

ಭಾರತೀಯ ಸಂಸ್ಕೃತಿ ರಕ್ಷಣೆಯ ಮುಖವಾಡ ಧರಿಸಿರುವ ಹಿಂದುತ್ವ ಸಂಘಟನೆಗಳ ಅಸಹನೆಯ ಪ್ರವೃತ್ತಿ ದಿನೇ ದಿನೇ ಹೆಚ್ಚಾಗುತ್ತಿದೆ. ಇದು ಹೆಚ್ಚಾಗಿ

Statement about ownership and other particulars about newspaper

**FORM IV**

| | | |
|---|---|---|
| **1. Place of publication** | **:** | **Bangalore** |
| **2. Periodicity of its publication** | **:** | **Monthly** |
| **3. Printer's Name** | **:** | **R. S. Rajaram** |
| **Nationality** | **:** | **Indian** |
| **Address** | **:** | **Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001** |
| **4. Publisher's Name** | **:** | **R. S. Rajaram** |
| **Nationality** | **:** | **Indian** |
| **Address** | **:** | **Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001** |
| **5. Editor's Name** | **:** | **Dr. Siddanagouda Patil** |
| **Nationality** | **:** | **Indian** |
| **Address** | **:** | **Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001** |
| **6. Name and address of individuals who own the newspaper and partners and shareholders holding more than one percent of the total capital** | **:** | **Navakarnataka Publications (P) Ltd., Embassy Centre, Crescent Road P. B. No. 5159 Bangalore - 560 001 (Sole Proprietors)** |

**I, R. S. Rajaram, hereby declare that the particulars given above are true to the best of my knowledge and belief.**

Sd/-
R. S. Rajaram
Publisher

Date : 28-2-2014

ಲೇಖಕರು, ಪುಸ್ತಕಗಳ ಮೇಲೆ ನಡೆಯುತ್ತಿರುವ ದಾಳಿಯಲ್ಲಿ ಅಭಿವ್ಯಕ್ತಿಯಾಗುತ್ತಿದೆ. ಕರ್ನಾಟಕದಲ್ಲಿ ಈಚೆಗೆ ಯೋಗೇಶ ಮಾಸ್ಟರ್ ಎಂಬ ಲೇಖಕರ ಕೃತಿ 'ಡುಂಢಿ' ಕಾದಂಬರಿ ಸರಕಾರದ ಮುಟ್ಟುಗೋಲಿಗೆ ಗುರಿಯಾದ್ದು ಇನ್ನೂ ನೆನಪಿನಿಂದ ಅಳಿಸಿಲ್ಲ. ಹಿಂದೂ ಸಂಘಟನೆಗಳು ನಡೆಸಿದ ಪ್ರತಿಭಟನೆ, ವ್ಯಕ್ತಪಡಿಸಿದ ಆಕ್ರೋಶಗಳೇ ಇದಕ್ಕೆ ಕಾರಣ. ಸಲ್ಮಾನ್ ರಷ್ದಿಯ 'ಸೆಟಾನಿಕ್ ವರ್ಸಸ್' ಮಾರಾಟವನ್ನು ಇಸ್ಲಾಮಿಕ್ ಮೂಲಭೂತವಾದಿಗಳ ಒತ್ತಾಯಕ್ಕೆ ಮಣಿದು ನಿಷೇಧ ಮಾಡಿದ ನಂತರ ಮತಾಂಧರ ಒತ್ತಾಯಗಳಿಗೆ ಸರಕಾರ ತಲೆಬಾಗುವುದು ಜಾಸ್ತಿಯಾಗ ತೊಡಗಿದೆ. ಖ್ಯಾತ ವಿದ್ವಾಂಸ ಎ. ಕೆ. ರಾಮಾನುಜನ್ ರವರ 'ನೂರು ರಾಮಾಯಣಗಳು' ಕೃತಿಯನ್ನು ಪಠ್ಯದಿಂದ ಕಿತ್ತುಹಾಕಿದ್ದನ್ನು ನೆನಪಿಸಿಕೊಳ್ಳಬಹುದು. ಮೊನ್ನೆ ಮೊನ್ನೆ ಕೊಡಗಿನಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಹಿಂದುತ್ವವಾದಿಗಳು ನವಕರ್ನಾಟಕ ಪ್ರಕಾಶನ ಹೊರತಂದಿದ್ದ 'ಅಪ್ರತಿಮ ದೇಶಭಕ್ತ ಟೀಪೂಸುಲ್ತಾನ್' ಪುಸ್ತಕದ ಬಗ್ಗೆ ಪ್ರದರ್ಶಿಸಿದ ಆಕ್ರೋಶ ಮರೆಯುವಂತಿಲ್ಲ. ಸದ್ಯ ಸರಕಾರ ಪುಸ್ತಕವನ್ನು ಮುಟ್ಟುಗೋಲು ಹಾಕುವ ಸಾಹಸಕ್ಕೆ ಕೈಹಾಕಲಿಲ್ಲ. ಈ ಪ್ರತಿಭಟನೆಯ ಪರಿಣಾಮವಾಗಿ ಟಿಪ್ಪು ಕುರಿತ ಪುಸ್ತಕ ಹೆಚ್ಚು ಮಾರಾಟವಾದ್ದು ಬೇರೆ ವಿಷಯ. ಸಂಘಪರಿವಾರದ ಪ್ರೇರಣೆಯಿಂದ ಹಿಂದು ಸಂಸ್ಕೃತಿಯನ್ನು ರಕ್ಷಿಸುವ ಹೆಸರಿನಲ್ಲಿ ನಾನಾಬಗೆಯ ಮರಿ ಸಂಘಟನೆಗಳು ಹುಟ್ಟಿಕೊಂಡಿವೆ. ಇವುಗಳು ನಡೆಸುತ್ತಿರುವ ಉಪಟಳ ವಿಪರೀತದ ಮಟ್ಟಕ್ಕೆ ಹೋಗುತ್ತಿದೆ. ನಮ್ಮ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇದು ಗೂಂಡಾಗಿರಿಯ ಹಂತ ತಲುಪಿದೆ.

ಇತಿಹಾಸಕ್ಕೆ ಇನ್ನೊಂದು ಮಗ್ಗುಲು ಇದೆ ಎನ್ನುವುದನ್ನು ಒಪ್ಪದ ಹಿಂದುತ್ವವಾದಿಗಳು ಜ್ಞಾನಾರ್ಜನೆಗೆ ಅಡ್ಡಿಯೊಡ್ಡುತ್ತಿದ್ದಾರೆ. ಯಾವುದೇ ಸಂಶೋಧನಾ ಕೃತಿಗೂ ಒಂದೇ ಜಾಡಿನಲ್ಲಿ ಚಿಂತಿಸುವ ಹಿಂದುವಾದಿಗಳ ಆಕ್ಷೇಪ ಇದ್ದೇ ಇರುತ್ತದೆ. ಹಾಗಾಗಿ ಭಾರತೀಯ ಇನ್ನುಮುಂದೆ ಬೇರಾವ ಅಭಿಪ್ರಾಯವೂ ದಕ್ಕದೇ ಹೋಗುವ ಪ್ರಸಂಗ ಬಂದೀತೇನೊ ಎಂಬ ಭಯ ಹುಟ್ಟುತ್ತಿದೆ. ಇತ್ತೀಚೆಗೆ ಅಂಥ ಹಿಂದು ಮೂಲಭೂತವಾದಿಗಳ ಆಕ್ರೋಶಕ್ಕೆ ಬಲಿಯಾಗಿರುವ ಒಂದು ಕೃತಿ ಪ್ರಖ್ಯಾತ ಪೆಂಗ್ವಿನ್ ಪ್ರಕಾಶನ ಸಂಸ್ಥೆ ೨೦೦೯ರಲ್ಲಿ ಅಮೆರಿಕದ ಷಿಕಾಗೋದಲ್ಲಿ ಪ್ರಕಟಿಸಿರುವ 'ದಿ ಹಿಂದೂಸ್: ಆ್ಯನ್ ಆಲ್ಟರ್ನೇಟಿವ್ ಹಿಸ್ಟರಿ' (ಹಿಂದುಗಳು ಒಂದು ಪರ್ಯಾಯ ಇತಿಹಾಸ ಎಂಬ ಕೃತಿ. ಇದರ ಲೇಖಕಿ ವೆಂಡಿಡೊನಿಗರ್. ಈಕೆ ಸಂಸ್ಕೃತ ವಿದ್ವಾಂಸರು, ಇತಿಹಾಸಕಾರರು, ಹಾಗೂ ಷಿಕಾಗೊ ವಿಶ್ವವಿದ್ಯಾನಿಲಯ ಧರ್ಮಶಾಸ್ತ್ರಗಳ ಕುರಿತ ಪ್ರಾಧ್ಯಾಪಕಿ ಭಾರತದಲ್ಲಿರುವ ಪೆಂಗ್ವಿನ್ ರಾಂಡಮ್ ಹೌಸ್ ಸಂಸ್ಥೆ ಇದನ್ನು ೨೦೧೦ರಲ್ಲಿ ಪ್ರಕಟಿಸಿತ್ತು). ಪಠ್ಯಪುಸ್ತಕಗಳ ಮತ್ತು ಇತರ ಪುಸ್ತಕಗಳ ಮೇಲೆ ನಿಗಾ ಇರಿಸಿಕೊಂಡಿರುವ 'ಶಿಕ್ಷಬಚಾವೊ ಆಂದೋಳನ' ಎಂಬ ಸಂಸ್ಥೆ ನ್ಯಾಯಾಲಯದಲ್ಲಿ ಗ್ರಂಥದ ವಿತರಣೆಗೆ ಆಕ್ಷೇಪ ವ್ಯಕ್ತಪಡಿಸಿ ಹೂಡಿರುವ ಮೊಕದ್ದಮೆಯ ಹಿನ್ನೆಲೆಯಲ್ಲಿ ಪೆಂಗ್ವಿನ್ ಕಂಪನಿ ಪುಸ್ತಕವನ್ನು ಹಿಂದಕ್ಕೆ ಪಡೆದುಕೊಂಡು ಮಾರಾಟವನ್ನು ಸ್ಥಗಿತಗೊಳಿಸಲು ಒಪ್ಪಂದಕ್ಕೆ ಬಂದಿರುವುದು ವಿಷಾದನೀಯ. ಇಂಥ ಪರಿಸ್ಥಿತಿ ತಂದಿರುವ ಹಿಂದೂ ಸಂಘಟನೆಗಳ ವರ್ತನೆ ಖಂಡನೀಯ. ಇದಕ್ಕೆ ದೇಶದಲ್ಲಿ ಎಲ್ಲ ವಿಭಾಗಗಳ ಜನರಿಂದ, ಬುದ್ಧಿಜೀವಿಗಳಿಂದ ತೀವ್ರವಾದ ಪ್ರತಿಭಟನೆ ಬಂದಿದೆ. ನವದೆಹಲಿಯ ಸೆಂಟರ್ ಫಾರ್ ದಿ ಸ್ಟಡಿ ಆಫ್ ಡೆವಲಪಿಂಗ್ ಸೊಸೈಟಿಯ ಅನನ್ಯ ವಾಜಪೇಯಿ, ಕೊಲಂಬಿಯ ವಿಶ್ವವಿದ್ಯಾನಿಲಯದ ಷೆಲ್ಡೆಗ್ ಪೊಲ್ಲಾಕ್ ಮತ್ತು ಪಾರ್ಥ ಚಟರ್ಜಿ, ಉತ್ತರ ಕೆರೋಲಿನದ ಡ್ಯೂಕ್ ವಿಶ್ವವಿದ್ಯಾನಿಲಯದ ಲಾವೇರಿ ಪ್ಯಾಟನ್, ನವದೆಹಲಿಯ ಜವಹರಲಾಲ್ ನೆಹರೂ ವಿಶ್ವವಿದ್ಯಾನಿಲಯದ ನಿವೃತ್ತ ಪ್ರಾಧ್ಯಾಪಕಿ ರೊಮಿಲಾ ಥಾಪರ್, ಜೆರೂಸಲೆಮ್‌ನ ಹೀಬ್ರೂ ವಿಶ್ವವಿದ್ಯಾನಿಲಯದ ಡೇವಿಡ್ ಷುಲ್ಮಾನ್ ಮುಂತಾದವರು ಮನವಿಯೊಂದನ್ನು ಸಲ್ಲಿಸಿ ಪುಸ್ತಕ ಹಿಂದಕ್ಕೆ ಪಡೆದಿರುವುದನ್ನು, ಹಿಂದೂ ಸಂಘಟನೆಯ ಆಕ್ರೋಶವನ್ನು ಖಂಡಿಸಿ, ಕೂಡಲೇ ಸರಕಾರ ಮಧ್ಯೆ ಪ್ರವೇಶಿಸಿ ಪುಸ್ತಕದ ವಿತರಣೆಗೆ ಮುಕ್ತ ಅವಕಾಶ ಕಲ್ಪಿಸ ಬೇಕೆಂದು ಒತ್ತಾಯಿಸಿದ್ದಾರೆ, ಗ್ರಂಥ ಲೇಖಕಿಗೆ ತಮ್ಮ ಬೆಂಬಲ ಸೂಚಿಸಿದ್ದಾರೆ. ಇಂಥಾ ದುಂಡಾವೃತ್ತಿಗೆ ಕೊನೆ ಎಂದು ಎನ್ನುವುದೇ ನಮ್ಮ ಮುಂದಿರುವ ಪ್ರಶ್ನೆ. ●

## ಮಾರಿಯಾ ಜೊಸಿಫ್ಫಿಯ ಗೇಬ್ರಿಯಾಲ ಕರಿನೊ ಸಿಲಾಂಗ್

(೧೭೩೧ – ೧೭೬೩)

ಜ್ವಾಲಾಮುಖಿಗಳ ಸ್ಫೋಟದಿಂದಲೇ ರೂಪುಗೊಂಡಿರುವ, ಪೆಸಿಫಿಕ್ ಸಾಗರದ ಪಶ್ಚಿಮದಲ್ಲಿರುವ ಫಿಲಿಪೈನ್ಸ್ ದೇಶದ ಇತಿಹಾಸ ರೋಚಕವಾದುದು. ಇದು ಜಗತ್ತಿನ ಅತಿ ದೊಡ್ಡ ದ್ವೀಪಸ್ತೋಮ. ಸುಮಾರು ಮೂರು ಶತಮಾನಗಳ ಕಾಲ ಸ್ಪ್ಯಾನಿಷ್ ವಸಾಹತು ಆಳ್ವಿಕೆಗೆ ಒಳಗಾಗಿದ್ದ ಈ ದೇಶವನ್ನು ೧೮೯೮ರಲ್ಲಿ ಸ್ಪ್ಯಾನಿಷರು ಅಮೆರಿಕಾಗೆ ಮಾರಾಟ ಮಾಡಿದರು. ಮತ್ತೆ ೧೯೪೧ರಲ್ಲಿ ಆ ದೇಶವನ್ನು ಜಪಾನ್ ಆಕ್ರಮಿಸಿಕೊಂಡಿತು. ಮಗದೊಮ್ಮೆ ೧೯೪೫ರಲ್ಲಿ ಅಮೆರಿಕನ್ನರ ಆಡಳಿತ. ಹೆಸರಿಗೆ ೧೯೪೬ರಲ್ಲಿ ಸ್ವಾತಂತ್ರ್ಯ ಲಭಿಸಿದರೂ ನಿಜಾರ್ಥದಲ್ಲಿ ಫಿಲಿಪೈನ್ಸ್‌ಅನ್ನು ಇಂದಿಗೂ ಸ್ವತಂತ್ರ ರಾಷ್ಟ್ರ, ಅಲ್ಲಿ ಪ್ರಜಾಪ್ರಭುತ್ವವಾದಿ ಆಡಳಿತವಿದೆ ಎನ್ನಲು ಸಾಧ್ಯವಿಲ್ಲ.

ಈ ಎಲ್ಲ ಐತಿಹಾಸಿಕ ಹಿನ್ನೆಲೆಯಲ್ಲಿ ಇಸವಿ ೧೭೦೦ರ ಪ್ರಾರಂಭದ ದಶಕಗಳಲ್ಲೇ ಸ್ಪೇನ್‌ನ ವಸಾಹತುಶಾಹಿಗಳ ದುರಾಡಳಿತದ ವಿರುದ್ಧ ಅಲ್ಲಿನ ಮೂಲನಿವಾಸಿಗಳಾದ ಲೊಕ್ಯಾನೊ ಬುಡಕಟ್ಟಿನ ಜನರು ಡಿಯಾಗೊ ಸಿಲಾಂಗ್ ಎಂಬುವವನ ನಾಯಕತ್ವದಲ್ಲಿ ದಂಗೆ ಎದ್ದರು. ಆತನ ಮಡದಿ ಮಾರಿಯಾ ಸಿಲಾಂಗ್ ಇತರ ಹೋರಾಟಗಾರರೊಡನೆ ತಾನೂ ಸರಿಸಮಾನವಾಗಿ ವೀರಾವೇಶದಿಂದ ದಂಗೆಯಲ್ಲಿ ಪಾಲ್ಗೊಂಡಳು. ತನ್ನ ಗಂಡನ ಸಾವಿನ ನಂತರವೂ ಹೋರಾಟಕ್ಕೆ ನಾಯಕತ್ವ ನೀಡಿದ ದಿಟ್ಟ ಮಹಿಳೆ ಮಾರಿಯಾ ಸಿಲಾಂಗ್.

ದುರಂತವೆಂದರೆ ದೇಶಾದ್ಯಂತ ನಿರಂತರ ಸಶಸ್ತ್ರ ಹೋರಾಟ ನಡೆಸಿದರೂ ಅದೇ ನೆಲದ ಸ್ಥಳೀಯ ಬುಡಕಟ್ಟಿನ ವಿವಿಧ ಜನಾಂಗದವರು ಸ್ಪ್ಯಾನಿಷ್‌ರ ಜೊತೆಗೂಡಿ ನಡೆಸಿದ ಪಿತೂರಿಯಿಂದಾಗಿ ದಂಗೆ ವಿಫಲ ಗೊಂಡಿತು. ನೂರಾರು ಜನರು ಹತರಾದರು. ಮಾರಿಯಾ ತನ್ನ ಚಿಕ್ಕಪ್ಪ ನಿಕೊಲಾಸ್, ಮತ್ತಿತರರು ರಣರಂಗದಿಂದ ತಪ್ಪಿಸಿಕೊಂಡರೂ ವೈಗಾನ್ ಪ್ಲಾಜಾ ಎಂಬಲ್ಲಿ ನೇಣುಗಂಬವನ್ನೇರಿ ಹುತಾತ್ಮರಾದರು.



ಮಾರಿಯಾ ಸಿಲಾಂಗ್‌ನ ದಿಟ್ಟತನ, ವಸಾಹತುಶಾಹಿ ವಿರುದ್ಧದ ಕೆಚ್ಚು ಮತ್ತು ಅವಳ ದುರಂತಮಯ ಮರಣ ಫಿಲಿಪೈನ್ಸ್‌ನ ಮಹಿಳೆಯರು ಮತ್ತಷ್ಟು ಸ್ಫೂರ್ತಿಯಿಂದ ಹೋರಾಡಲು ಅನುವಾದುದು ಆ ದೇಶದ ಇತಿಹಾಸ ದಲ್ಲೇ ಒಂದು ಮಹತ್ವದ ಬೆಳವಣಿಗೆ. ಆ ದೇಶದ ಮಹಿಳೆಯರಿಗಷ್ಟೇ ಅಲ್ಲ, ಅನ್ಯಾಯದ ವಿರುದ್ಧ, ದಬ್ಬಾಳಿಕೆಯ ವಿರುದ್ಧ ಹೋರಾಡುತ್ತಿರುವ ಎಲ್ಲ ಮಹಿಳೆಯರಿಗೂ ಮಾದರಿ. ಕ್ರಾಂತಿಕಾರಿ ಹೋರಾಟಗಾರ್ತಿಯಾಗಿ ಇಂದಿಗೂ ಜನಮಾನಸದಲ್ಲಿ ನೆಲೆಸಿದ್ದಾಳೆ ಮಾರಿಯಾ ಜೊಸಿಫ್ಫಿಯ ಕರಿನೊ ಸಿಲಾಂಗ್.

ಈ ಮಾರ್ಚ್ ೮ರಂದು ಆಚರಿಸಲಾಗುವ 'ಮಹಿಳಾ ದಿನಾಚರಣೆ'ಯ ಸಂದರ್ಭದಲ್ಲಿ ಈಕೆಯನ್ನು ನೆನಪಿಸಿಕೊಳ್ಳುವುದು ಪ್ರಸ್ತುತವೆನಿಸುತ್ತದೆ. ಅವಳ ಕುರಿತು ಕಲಾವಿದನೊಬ್ಬ ರಚಿಸಿದ ಕಲಾಕೃತಿಯನ್ನು ಈ ತಿಂಗಳ 'ಹೊಸತು' ಮುಖಪುಟದಲ್ಲಿ ಪ್ರಕಟಿಸಲಾಗಿದೆ.

**'ಹೊಸತು' ಬಳಗದಿಂದ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಅಂಗವಾಗಿ ಎಲ್ಲ ಮಹಿಳೆಯರಿಗೆ ಹಾರ್ದಿಕ ಶುಭಾಶಯಗಳು.**




✉ **ಕ**ರ್ನಾಟಕದ ಹೆಮ್ಮೆಯ ವೈಣಿಕ ದಿವಂಗತ ಡಾ॥ ದೊರೆಸ್ವಾಮಿ ಅಯ್ಯಂಗಾರ್ ಅವರು ಹಾಗೂ ಅವರ ಆತ್ಮಕತೆಯನ್ನು ಸುಧಾ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಿದ ಲೇಖಕಿ ಶ್ರೀಮತಿ ಭಾರತೀ ಕಾಸರಗೋಡು ಅವರನ್ನು ನಾನು ಹಲವು ವರ್ಷಗಳಿಂದ ಬಲ್ಲವನಾಗಿದ್ದೇನೆ.

ಇವರಿಬ್ಬರ ಪರಿಚಯದ ಹಿನ್ನೆಲೆಯಲ್ಲಿ ಭಾರತೀಯ ವಿದ್ಯಾಭವನ ೧೯೯೭ರಲ್ಲಿ ಭಾರತೀ ಕಾಸರಗೋಡು ಅವರು ಮೈಸೂರಿನ ಗೀತಾ ಬುಕ್ ಹೌಸ್ ಸಂಸ್ಥೆಯ ಮೂಲಕ 'ವೀಣೆಯ ನೆರಳಿನಲ್ಲಿ' ಎಂಬ ಶೀರ್ಷಿಕೆಯೊಂದಿಗೆ ಪುಸ್ತಕವನ್ನು ಹೊರ ತಂದಾಗ ಅದರ ಲೋಕಾರ್ಪಣೆಯನ್ನು ಭಾರತೀಯ ವಿದ್ಯಾಭವನ ಸಂತೋಷದಿಂದ ನೆರವೇರಿಸಿದೆ. ಅಂದಿನ ಸಮಾರಂಭದಲ್ಲಿ ಉಪಸ್ಥಿತರಿದ್ದ ಡಾ॥ ಎಲ್. ಎಸ್. ಶೇಷಗಿರಿರಾವ್, ಪ್ರೊ॥ ಎಸ್. ಕೆ. ರಾಮಚಂದ್ರರಾವ್, ಡಾ॥ ಯು. ಆರ್. ಅನಂತಮೂರ್ತಿ ಮತ್ತಿತರರು 'ಈ ಪುಸ್ತಕ ಡಾ॥ ದೊರೆಸ್ವಾಮಿ ಅಯ್ಯಂಗಾರ್ ಅವರ ಜೀವನ ಹಾಗೂ ಕಲೆಯನ್ನು ಅತ್ಯಂತ ಸಮರ್ಥವಾಗಿ ಪ್ರತಿಬಿಂಬಿಸಿದೆ' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಇದಾದ ಹಲವಾರು ವರ್ಷಗಳ ಬಳಿಕ ಈಗ ಪ್ರೊ॥ ವಿ. ಅಮೃತ ಎಂಬುವವರು ತಮ್ಮ 'ವಿಪಂಚೀ ವೈಭವ' ಎಂಬ ಹೆಸರಿನ ಪುಸ್ತಕದಲ್ಲಿ ಭಾರತೀ ಕಾಸರಗೋಡು ಅವರ ಚಿಂತನೆ ಹಾಗೂ ಭಾಷೆ ಎರಡನ್ನೂ ಮತ್ತೆ ಮರುಪ್ರಕಟಿಸಿರುವುದು ಸೋಜಿಗದ ಸಂಗತಿ. ಇದರ ಅಗತ್ಯವಿತ್ತೇ?

*ಬೆಂಗಳೂರು* **ಎಚ್. ಎನ್. ಸುರೇಶ್**
ನಿರ್ದೇಶಕರು, ಭಾರತೀಯ ವಿದ್ಯಾಭವನ

*(ಶೈಲಜಾ ರವೀಂದ್ರ, ಭವಾನಿ ಶ್ರೀನಿವಾಸ ಹಾಗೂ ಎಂ. ಆರ್. ಸುನಂದಾ ಇವರೆಲ್ಲರೂ ವಿ. ಅಮೃತ ಅವರು ಕೃತಿಚೌರ್ಯ ಮಾಡಿದ್ದಾರೆಂದು ಖಂಡಿಸಿ ಪತ್ರ ಬರೆದಿದ್ದಾರೆ. – ಸಂ.)*

✉ 'ಹೊಸತು' ಓದುಗರ ಮತ್ತು ಲೇಖಕರ ಸಂವಾದ ಕಾರ್ಯಕ್ರಮ ಇಟ್ಟುಕೊಂಡಿದ್ದೀರಿ. ಕಳೆದ ಹತ್ತು ವರ್ಷಗಳಿಂದ ಎಲ್ಲರಿಗೂ ಬೆಂಗಳೂರು ಕೇಂದ್ರವಾಗಿಬಿಟ್ಟಿದೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಈ ಓದುಗರ, ಲೇಖಕರ ಸಂವಾದ ಇಟ್ಟುಕೊಂಡರೆ ಹೆಚ್ಚಿನ ಸಂಖ್ಯೆಯಲ್ಲಿ ಜನರು ಪಾಲ್ಗೊಳ್ಳಲು ಸಾಧ್ಯವಾಗುತ್ತದೆ. ಇರಲಿ, 'ಹೊಸತು' ಪತ್ರಿಕೆ ಆರಂಭವಾದ ಕಾಲದಿಂದ ಓದುತ್ತಿರುವವರಲ್ಲಿ ನಾನೂ ಒಬ್ಬ. ಪತ್ರಿಕೆ ನಿಯಮಿತವಾಗಿ ಬರುತ್ತದೆ. ಅಚ್ಚುಕಟ್ಟಾಗಿ ಬರುತ್ತದೆ. ಸೊಗಸಾಗಿ ಕಾಣುತ್ತದೆ.

ಆದರೆ 'ಹೊಸತು' ಪತ್ರಿಕೆಯಲ್ಲಿ ಬರೆಯುವ ಲೇಖಕರ ಬಳಗ ತುಂಬಾ ಸೀಮಿತವಾಗಿದೆ. ವಿಷಯಗಳು ಸೀಮಿತವಾಗಿವೆ. ಎಡಪಂಥೀಯ ಚಿಂತನೆಗಳೂ ಇರಲಿ. ಆದರೆ ಇವುಗಳನ್ನು ಕೆಲವೇ ಲೇಖಕರು ಬರೆಯುವುದರಿಂದ ವಿಷಯದ ಆಳ–ಅಗಲ ಕಡಿಮೆಯಾಗಿದೆ ಎಂದು ನನಗೆ ಅನ್ನಿಸಿದೆ. ಕನ್ನಡದ ಚಿಂತಕರು ಬಹು ವಿಷಯಗಳಲ್ಲಿ ಪರಿಣತರಿದ್ದಾರೆ. ಅವರಿಂದ ಬರೆಸುವ ಅಗತ್ಯವಿದೆ. ತಕ್ಕಮಟ್ಟಿಗೆ 'ಹೊಸತು' ವಿಶೇಷಾಂಕದಲ್ಲಿ ವಸ್ತು–ವಿಷಯಗಳ ಆಳ ಮತ್ತು ವಿಸ್ತಾರ ಕಂಡುಬರುತ್ತದೆ. ಆದರೆ ತಿಂಗಳು ತಿಂಗಳು ಬರುವ 'ಹೊಸತು'ನಲ್ಲಿ ಚಿಂತನಾತ್ಮಕ ಬರಹಗಳು ಕಡಿಮೆಯಾಗಿವೆ. ದಯಮಾಡಿ ಕನ್ನಡದ ಚಿಂತಕರನ್ನು ಪತ್ರಿಕೆಯಲ್ಲಿ ಬರೆಯುವಂತೆ ಮಾಡಿ. ಸಮಕಾಲೀನ ಕನ್ನಡ, ಕರ್ನಾಟಕ ಮತ್ತು ದೇಶದ ವಿದ್ಯಮಾನಗಳು ತಮ್ಮದೇ ಆದ ಚಿಂತನೆಯಲ್ಲಿ ಬರೆದ ಲೇಖನಗಳು ಹೆಚ್ಚು ಹೆಚ್ಚು ಬರಲೆಂದು ಆಶಿಸುತ್ತೇನೆ.

ಕರ್ನಾಟಕದಲ್ಲಿಯೇ ಅನೇಕ ಕ್ಷೇತ್ರಗಳಲ್ಲಿ ಅನೇಕ ಸಮಸ್ಯೆಗಳು ಇರುತ್ತವೆ. ಒಮ್ಮೊಮ್ಮೆ ತಾರಕಕ್ಕೆ ಹೋಗುತ್ತವೆ. ಅಂತಹ ವಸ್ತು–ವಿಷಯಗಳನ್ನು ಕುರಿತು ತನಿಖೆ ರೂಪದ ಲೇಖನಗಳನ್ನು ಪತ್ರಿಕೆ ಒಳಗೊಳ್ಳಲಿ.

*ಹಂಪಿ* **ಅಮರೇಶ ನುಗಡೋಣಿ**




**ಕೋಡಗುಂಟಿ ಪ್ರಶಸ್ತಿ**

ಪ್ರತಿ ವರ್ಷದಂತೆ ಈ ಬಾರಿ ೨೦೧೩ರಲ್ಲಿ ಪದವಿ ಪಡೆದ ಸಂಶೋಧನಾ ಪ್ರಬಂಧಗಳನ್ನು 'ಕೋಡಗುಂಟಿ ಪ್ರಶಸ್ತಿ–೨೦೧೩'ಕ್ಕೆ ಆಹ್ವಾನಿಸಲಾಗಿದೆ. ಪ್ರಶಸ್ತಿಗೆ ಪ್ರಬಂಧದ ಒಂದು ಪ್ರತಿ, ಎರಡು ಪುಟಗಳ ಸಾರಾಲೇಖ ಮತ್ತು ಪದವಿ ಪಡೆದ ಪ್ರಮಾಣ ಪತ್ರದ ಪ್ರತಿ ಇವುಗಳನ್ನು ಇದೇ ಮಾರ್ಚ್, ೧೦ರ ಒಳಗೆ ಈ ಕೆಳಗಿನ ವಿಳಾಸಕ್ಕೆ ಕಳಿಸಿಕೊಡಬಹುದು.

**ಪರಶುರಾಮ ಕೋಡಗುಂಟಿ**
ಸಂಪಾದಕ, ಬಂಡಾರ ಪ್ರಕಾಶನ
ಮಸ್ಕಿ – ೫೮೪ ೧೨೪, ರಾಯಚೂರು ಜಿಲ್ಲೆ
ದೂರವಾಣಿ : ೮೯೫೮ ೬೭೧೧೮

✉ ವಾರ್ಷಿಕ ವಿಶೇಷ ಸಂಚಿಕೆಯಾಗಿ ರೂಪಿತಗೊಂಡ 'ಹೊಸತು'ವಿನ ಜನವರಿ ಮಾಸದ ಕಂತಾಗಿಯೂ ಕಾಣಿಸಿಕೊಂಡ – ಭಗವಾನ್ ಬುದ್ಧನ ಶಿಲ್ಪ ಲಾಂಛನದಿಂದ ಕಂಗೊಳಿಸಿ ಕಣ್ಮನ ಸೆಳೆದುದಲ್ಲದೆ ಒಳಪುಟಗಳನ್ನು ಓದಿಸಿಕೊಳ್ಳುವ ಅಭಿಲಾಷೆ ಮೂಡಿದುದೇ ತಡ ಗುಜರಾತ್ ಅಭಿವೃದ್ಧಿ ಮಾದರಿ ಎನ್ನುವ ಹಿಂದಿನ ಸಂಚಿಕೆಯಿಂದಲೇ ಮುಂದುವರಿಸಿಕೊಂಡು ಬಂದ ಟಿ. ಆರ್. ಚಂದ್ರಶೇಖರ ಅವರ ವಿಶ್ಲೇಷಣಾ ಲೇಖನ ಗಮನ ಸೆಳೆಯಿತು. ಹಿಂದಿನ ರಾಜಕೀಯದ ಚದುರಂಗದಾಟದೆಡೆಗೆ ಅಂದರೆ ಭಾರತ ಸ್ವಾತಂತ್ರ್ಯ ಸಂಗ್ರಾಮದ ನಂತರದ ಘಟನಾವಳಿಗಳಿಂದಲೇ ಆರಂಭಿಸಲ್ಪಟ್ಟ ಒಂದೊಂದೇ ಘಟನೆಗಳನ್ನು ಚಿಂತನೆಯ ತಕ್ಕಡಿಯಲ್ಲಿ ಪಕ್ಷಾತೀತ ದೃಷ್ಟಿಯಿಂದ ವಿವೇಚಿಸುವಂತೆ ಮನವನ್ನೊಡಂಬಡಿಸಿದ ಅತ್ಯುತ್ತಮ ಲೇಖನ ಎಂದು ಅನ್ನಿಸಿಕೊಂಡಿತು.

ಟಿ. ಆರ್. ಅನಂತರಾಮು ಅವರಿಂದ 'ಸಿರಿಯದ ರಾಸಾಯನಿಕ ಶಸ್ತ್ರಗಳ ಹಿಂದೆ' ಎಂಬ ಅವಲೋಕನದ ಆವಿಷ್ಕಾರವಾಗಿ ಮೂಡಿಬಂದ ಲೇಖನ ಹಲವು ವಿವರಗಳನ್ನು ತಿಳಿದುಕೊಳ್ಳುವಲ್ಲಿ ಸಫಲತೆ ಹೊಂದಿತು. ಡಾ॥ ಬಿ. ಎನ್. ಸುಮಿತ್ರಾಬಾಯಿ ಅವರ 'ಸ್ತ್ರೀವಾದಿ ಚಳವಳಿ ಮತ್ತು ದಲಿತ ಮಹಿಳಾ ಪ್ರಶ್ನೆ' ಎಂಬ ಮಹಿಳೆಯರ ಹಕ್ಕುಗಳೆಡೆಗೆ ದೃಷ್ಟಿಹರಿಸಲ್ಪಟ್ಟ ಲೇಖನ ಮಹಾರಾಷ್ಟ್ರದ ಜ್ಯೋತಿ ಬಾ ಫುಲೆ ಎಂಬ ಮಹಿಳಾಪರ ಸುಧಾರಕರ ಕಾರ್ಯಚಟುವಟಿಕೆಗಳನ್ನು ಮನದಟ್ಟುಗೊಳಿಸುವಲ್ಲಿ ಸಫಲತೆ ಹೊಂದಿದೆ.

ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಸಮ್ಮೇಳನ ಯಶಸ್ವಿಗೆ ಕಾರಣರಾದ ಹಿರಿಯ ಕವಿ ನಾ. ಡಿಸೋಜ ಅವರ ಸಂದರ್ಶನ ಲೇಖನ ಸಂಚಿಕೆಗೆ ವಿಶೇಷ ಹೊಳಪನ್ನು ನೀಡಿದೆ.

*ಕಾಸರಗೋಡು* **ಕೀರಿಕ್ಕಾಡು ವನಮಾಲ ಕೇಶವ ಭಟ್ಟ**

✉ ಜನವರಿ ವಿಶೇಷಾಂಕ ತುಂಬ ಚೆನ್ನಾಗಿ ಬಂದಿದೆ. ಕಾದಿಟ್ಟು ಓದುವ ಈ ವಿಶೇಷಾಂಕ ಚಿಂತನಶೀಲ ಕೃತಿಯಾಗಿ ಓದುಗನನ್ನು ಸೆಳೆಯುತ್ತದೆ.

ಡಾ॥ ರಾಮಲಿಂಗಪ್ಪ ಬೇಗೂರು ಅವರ 'ಕನ್ನಡ ಕಾವ್ಯತತ್ತ್ವ ಮತ್ತು....' ಎನ್ನುವ ಲೇಖನವಂತೂ ಕಾವ್ಯಾಸಕ್ತರನ್ನು ಚಿಂತನೆಗೆ ಹಚ್ಚುತ್ತದೆ. ಇದೊಂದು ಅಧ್ಯಯನಶೀಲ ಲೇಖನ ಮಾತ್ರವಲ್ಲ ವಿವೇಚನಾಶೀಲವೂ ಹೌದು. ಆದರೂ ಪ್ರಶ್ನಾರ್ಥಕಗಳೇ ಹೆಚ್ಚಾಗಿವೆ. ಸ್ಪಷ್ಟತನದಲ್ಲಿ ಇನ್ನಿಷ್ಟು ತೊಡಗಿದ್ದರೆ ಇದೊಂದು ಕನ್ನಡ ಕಾವ್ಯಕ್ಕೆ ಹುಡುಕಿ ಓದುವ ಆಕರ ಬರಹವಾಗುತ್ತಿತ್ತು. ಒಟ್ಟಿನಲ್ಲಿ ಲೇಖಕರ ತಾದಾತ್ಮ್ಯತೆಗೆ ಸಾಕ್ಷಿಯಾಗಿ ಲೇಖನ ಬಂದಿರುವುದು ಅಪರೂಪ.

*ಜಮಖಂಡಿ* **ಅರ್ಜುನ ಕೋರಟಕರ**



## ಸ್ವಾತಂತ್ರ್ಯಾನಂತರದ ಭಾರತ – ೩

# ಅಲಿಪ್ತನೀತಿಗೆ ಅಸ್ತಿಭಾರ, ಔದ್ಯೋಗೀಕರಣಕ್ಕೆ ಪ್ರಾಶಸ್ತ್ಯ

ಸಿ. ಆರ್. ಕೃಷ್ಣರಾವ್

ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಕೈಗಾರಿಕಾಭಿವೃದ್ಧಿಗೆ ಕಿಂಚಿತ್ತೂ ಗಮನ ನೀಡಿರಲಿಲ್ಲ. ಭಾರತ ಅವರು ತಯಾರಿಸುತ್ತಿದ್ದ ಸರಕುಗಳಿಗೆ ಮಾರುಕಟ್ಟೆಯಾಗಿತ್ತು. ದೇಸೀ ಬಂಡವಾಳಗಾರರು ಬೆರಳೆಣಿಕೆಯಷ್ಟು ಮಾತ್ರ ಇದ್ದರು. ಟಾಟಾ, ಬಿರ್ಲಾ, ಗೋಯೆಂಕಾ, ಕಿರ್ಲೋಸ್ಕರ್, ಜೈನ್ ಮುಂತಾದವರು ದೊಡ್ಡ ಪ್ರಮಾಣದಲ್ಲಿ ಬಂಡವಾಳ ಹೂಡಲು ಸಮರ್ಥರಿರಲಿಲ್ಲ. ಅವರ ಆಸಕ್ತಿ ಇದ್ದುದು ಶೀಘ್ರವಾಗಿ ಅಧಿಕ ಲಾಭ ತರುವ ಉದ್ಯಮಗಳಲ್ಲಿ ಮಾತ್ರ. ಇಂಥ ಪರಿಸ್ಥಿತಿಯಲ್ಲಿ ಸರಕಾರವೇ ನೇರವಾಗಿ ಬಂಡವಾಳ ಹೂಡುವುದು ಅನಿವಾರ್ಯವಾಯಿತು. ಹಾಗೆ ಪ್ರಾರಂಭವಾದ ಮೊದಲ ಸಾರ್ವಜನಿಕ ವಲಯದ ಉದ್ಯಮ ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್. ದೇಶದಲ್ಲಿ ದೂರವಾಣಿ ಸಂಪರ್ಕವನ್ನು ವೃದ್ಧಿಪಡಿಸಲು ಅಗತ್ಯವಾದ ಉಪಕರಣಗಳನ್ನು ತಯಾರುಮಾಡುವ ಈ ಕಾರ್ಖಾನೆ ಪ್ರಾರಂಭವಾದ್ದು ಬೆಂಗಳೂರಿನಲ್ಲಿ, ೧೯೪೮ರಲ್ಲಿ. ಇದಕ್ಕೂ ಮುನ್ನ ೧೯೪೦ರಲ್ಲಿ ಎರಡನೇ ಮಹಾಯುದ್ಧ ಕಾಲದಲ್ಲಿ ಖಾಸಗಿ ಕ್ಷೇತ್ರದಲ್ಲಿ ಪ್ರಾರಂಭವಾಗಿದ್ದ ಹಿಂದೂಸ್ತಾನ್ ವಿಮಾನ ಕಾರ್ಖಾನೆ ಸ್ವಾತಂತ್ರ್ಯಾನಂತರ ಸರಕಾರದ ರಕ್ಷಣಾ ಇಲಾಖೆಯ ಸುಬರ್ದಿಗೆ ಒಳಪಟ್ಟಿತು. ಕೆಲಕಾಲ ಈ ಕಾರ್ಖಾನೆ ರೈಲ್ವೆ ಬೋಗಿಗಳನ್ನು ತಯಾರಿಸುತ್ತಿತ್ತು ಎಂದರೆ ಇಂದು ಯಾರಾದರೂ ಅಚ್ಚರಿಪಡಬಹುದು. ಮುಂದೆ ೧೯೬೪ರಲ್ಲಿ ವಿಮಾನ ಕಾರ್ಖಾನೆ ಅತಿ ದೊಡ್ಡ ಸಾರ್ವಜನಿಕ ವಲಯದ ಉದ್ಯಮವಾಗಿ ಬೆಳೆಯತೊಡಗಿತು.

**ಭಾ**ರತದ ಸ್ವತಂತ್ರ ವಿದೇಶಾಂಗ ನೀತಿಗೆ ವ್ಯಾಪಕವಾದ ಬೆಂಬಲವಿದ್ದರೂ ಸೋವಿಯೆತ್ ಒಕ್ಕೂಟದ ಜೊತೆ ನಿಕಟವಾದ ಮೈತ್ರಿಗೆ ಹಲವು ವಲಯಗಳಲ್ಲಿ ವಿರೋಧ ಇತ್ತು. ಬಲಪಂಥೀಯ ಮತ್ತು ಜಾತೀಯವಾದಿ ಪಕ್ಷಗಳವರು 'ಅಪ್ಪಟ' ಅಲಿಪ್ತನೀತಿ ಹೆಸರಿನಲ್ಲಿ ಅದನ್ನು ವಿರೋಧಿಸುತ್ತಿದ್ದರು. ಪಶ್ಚಿಮ ರಾಷ್ಟ್ರಗಳು ಮತ್ತು ಅಮೆರಿಕ ಜೊತೆ ಮೊದಲಿನಿಂದಲೂ ಅಧಿಕ ಸಂಪರ್ಕಗಳಿಗೆ ಹೊಂದಿಕೊಂಡಿದ್ದ ಅಧಿಕಾರಿಗಳು, ರಾಜಕೀಯ ಧುರೀಣರು, ಉದ್ಯಮಿಗಳು ಸೋವಿಯೆತ್ ಒಕ್ಕೂಟದ ಜೊತೆ ಪೂರ್ಣವಾಗಿ ಗುರುತಿಸಿಕೊಳ್ಳುವುದಕ್ಕೆ ವಿರೋಧವಿದ್ದರು. ಭಾರತ ಕಾಮನ್‌ವೆಲ್ತ್ ಕೂಟಕ್ಕೆ ಸೇರುವುದಕ್ಕೆ ಎಡಪಕ್ಷಗಳ ತೀವ್ರ ವಿರೋಧವಿದ್ದಾಗ್ಯೂ ಸರಕಾರ ಕಡೆಗಣಿಸಿದ್ದನ್ನು ಗಮನಿಸಬೇಕು. ಅಮೆರಿಕ ಮತ್ತು ಪಾಶ್ಚಾತ್ಯ ರಾಷ್ಟ್ರಗಳ ಚಿತಾವಣೆಯಿಂದಲೇ ಭಾರತ ಕಾಶ್ಮೀರದಲ್ಲಿ ಪಾಕಿಸ್ತಾನದ ದುರಾಕ್ರಮಣ ಕುರಿತು ದೂರು ಸಲ್ಲಿಸಿದ್ದು. ಇದು ಬ್ರಿಟನ್–ಅಮೆರಿಕಗಳಿಗೆ ಕಾಶ್ಮೀರದ ವಿಷಯದಲ್ಲಿ ತಲೆ ಹಾಕಲು ಅವಕಾಶ ಕಲ್ಪಿಸಿತು. ಭದ್ರತಾಮಂಡಲಿಯಲ್ಲಿ ಆಗ ಸೋವಿಯೆತ್ ಒಕ್ಕೂಟ ವೀಟೋ ಹಕ್ಕು ಚಲಾಯಿಸದೇ ಹೋಗಿದ್ದಲ್ಲಿ ಕಾಶ್ಮೀರ ಎಂದೋ ಭಾರತದ ಕೈಬಿಟ್ಟು ಹೋಗುತ್ತಿತ್ತು. ಎರಡನೇ ಮಹಾಯುದ್ಧಾನಂತರ ಜರುಗಿದ ಕೊರಿಯ ಯುದ್ಧದಲ್ಲಿ ಭಾರತ ಪಶ್ಚಿಮ ರಾಷ್ಟ್ರಗಳ ಜೊತೆಗೆ ಉತ್ತರ ಕೊರಿಯವನ್ನು ಆಕ್ರಮಣಕಾರಿ ಎಂದು ಆರೋಪಿಸಿದರೂ, ಯುದ್ಧವನ್ನು ಅಂತ್ಯಗೊಳಿಸಲು ನಡೆಸಿದ ಪ್ರಯತ್ನ ಹಾಗೂ ಮಧ್ಯವರ್ತಿಯಾಗಿ ವಹಿಸಿದ ಪಾತ್ರ ಶ್ಲಾಘನೀಯವಾಗಿತ್ತು.

೧೯೪೭ರ ಮಾರ್ಚ್‌ನಲ್ಲಿ ಸ್ವಾತಂತ್ರ್ಯಕ್ಕೆ ಐದು ತಿಂಗಳ ಮುಂಚೆ, ದೆಹಲಿಯಲ್ಲಿ ಜರುಗಿದ 'ಏಶಿಯನ್ ರಿಲೇಷನ್ಸ್ ಕಾನ್ಫರೆನ್ಸ್' ಸಮ್ಮೇಳನ, ೧೯೪೯ರಲ್ಲಿ ನಡೆದ ಏಶಿಯ–ಆಫ್ರಿಕ ದೇಶಗಳ ಸಮ್ಮೇಳನ, ೧೯೫೫ರಲ್ಲಿ ಇಂಡೋನೇಶಿಯದ ಬಾಂಡುಂಗ್‌ನಲ್ಲಿ ಜರುಗಿದ ಸಮ್ಮೇಳನ ಇವೆಲ್ಲ ಭಾರತ ಅನುಸರಿಸಿದ್ದ ಅಲಿಪ್ತನೀತಿಗೆ ಪೂರ್ವ ಸಿದ್ಧತೆಯಾಗಿತ್ತು ಎಂದು ಹೇಳಬಹುದು. ಅಲಿಪ್ತನೀತಿಯನ್ನು ಅನೀತಿ ಎಂದು ಮೂದಲಿಸಿದರೂ ಭಾರತ ಅಭಿವೃದ್ಧಿ ಯೋಜನೆಗಳಿಗೆ ಮೊರೆಹೋದದ್ದು ಅಮೆರಿಕ ಮತ್ತು ಪಾಶ್ಚಾತ್ಯ ರಾಷ್ಟ್ರಗಳಿಗೇ. ೧೯೨೭ರಲ್ಲೇ ಸೋವಿಯೆತ್ ರಷ್ಯಾಗೆ ಭೇಟಿ ನೀಡಿದ್ದ ನೆಹರೂ ಮತ್ತೆ ಸೋವಿಯೆತ್ ಒಕ್ಕೂಟಕ್ಕೆ ಭೇಟಿ ನೀಡಿದ್ದು ೧೯೫೫ರಲ್ಲಿ. ಅದೂ ಕೂಡ ೧೯೫೪ರಲ್ಲಿ ಅಂದಿನ ಸೋವಿಯೆತ್ ನಾಯಕರಾದ ಬುಲ್ಗಾನಿನ್ ಮತ್ತು ನಿಕಿತಾ ಕ್ರುಶ್ಚೇವ್ ಭಾರತಕ್ಕೆ ಭೇಟಿ ನೀಡಿದ ನಂತರ. ಪ್ರಧಾನಿಯಾಗಿ ನೆಹರು ಮೊದಲು ಭೇಟಿ ನೀಡಿದ್ದು ಅಮೆರಿಕಕ್ಕೆ. ಆದರೆ ಭಾರತದ ಔದ್ಯೋಗೀಕರಣಕ್ಕೆ ನೆರವು ನೀಡಲು ಮೊದಲು ಮುಂದೆ ಬಂದದ್ದು ಸೋವಿಯೆತ್ ಒಕ್ಕೂಟ. ಮುಂದೆ ಎರಡನೇ ಪಂಚವಾರ್ಷಿಕ ಯೋಜನೆಯ ಔದ್ಯೋಗೀಕರಣ ನೀತಿಗೆ ಪೂರ್ಣ ಬೆಂಬಲ ನೀಡಿದ್ದು ಕೂಡ ಸೋವಿಯೆತ್ ರಷ್ಯ. ಭಾರತ ಅನುಸರಿಸಿದ ವಿದೇಶಾಂಗ ನೀತಿಗೆ, ಅಲಿಪ್ತ ಚಳವಳಿಗೆ ಅಗತ್ಯವಾದ ಒತ್ತಾಸೆ ನೀಡಿದ್ದು ಸೋವಿಯೆತ್ ಒಕ್ಕೂಟ ಮತ್ತು ಸಮಾಜವಾದಿ ರಾಷ್ಟ್ರಗಳೇ. ಪ್ರಾರಂಭದ

ವರ್ಷಗಳಲ್ಲಿ ವಿದೇಶಾಂಗ ನೀತಿಯನ್ನು ಕುರಿತು ಪಾರ್ಲಿಮೆಂಟಿನಲ್ಲಿ ಚರ್ಚಿಸಲು ಪೂರ್ಣ ಅವಕಾಶ ಇರುತ್ತಿತ್ತು. ಅದು ಈಗ ಸಂಪೂರ್ಣವಾಗಿ ಅದೃಶ್ಯ ವಾಗಿದೆ. ಪಾರ್ಲಿಮೆಂಟಿನಲ್ಲಿ ಯಾವುದೇ ಗಹನ ವಿಚಾರವೂ ಚರ್ಚೆಗೆ ಬಾರದೆ ಗಲಾಟೆಗೇ ಹೆಚ್ಚು ಪ್ರಾಮುಖ್ಯತೆ ಬಂದಿರುವುದು ದುರಂತ.

ಭಾರತದ ಸ್ವಾತಂತ್ರ್ಯಾನಂತರದ ಮೊದಲ ಹತ್ತು ವರ್ಷಗಳನ್ನು ಪ್ರಜಾಸತ್ತಾತ್ಮಕ ವ್ಯವಸ್ಥೆಗೆ ಬುನಾದಿ ಕಲ್ಪಿಸಿದ ಕಾಲ ಎನ್ನಬಹುದು. ತೆರಿಗೆ ವಿನಾಯಿತಿ, ವಿಶೇಷ ಸವಲತ್ತುಗಳು, ಅರಮನೆ ಆಸ್ತಿಪಾಸ್ತಿಗಳ ರಕ್ಷಣೆ, ಇದರ ಮೇಲೆ ತೆರಿಗೆ ಹಣದಿಂದ ಪರಿಹಾರ ಧನ (ಪ್ರೀವಿ ಪರ್ಸ್). ಆಗಿನ ಕಾಲದಲ್ಲೇ ಈ ಪರಿಹಾರದ ಧನ ಒಟ್ಟು ೪.೬೬ ಕೋಟಿ ರೂ.ಗಳಾಗಿದ್ದವು. ಈ ಆಮಿಷಗಳನ್ನು ಒಡ್ಡಿ ಆಗ ದೇಶಾದ್ಯಂತ ಹರಡಿ ಕೊಂಡಿದ್ದ, ಬ್ರಿಟಿಷ್ ಸಾಮ್ರಾಜ್ಯಶಾಹಿ ಕೃಪಾಪೋಷಿತ ರಾಜ ಮಹಾರಾಜರುಗಳ ರಾಜ್ಯಗಳನ್ನು ಭಾರತದಲ್ಲೇ ಉಳಿಸಿಕೊಂಡಿದ್ದು ಮೊದಲ ಕಾರ್ಯ. ಈ ಸವಲತ್ತು ಗಳೆಲ್ಲ ಹೋಗಲು ಎರಡು ದಶಕಗಳಿಗೂ ಹೆಚ್ಚು ಕಾಲ ಹಿಡಿಯಿತು. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರಭುತ್ವ ಸರಕಾರದ ಸ್ಥಾಪನೆಗಾಗಿ ದೊಡ್ಡ ಚಳವಳಿಯೇ ನಡೆಯಿತು ಸುಮಾರು ನಲವತ್ತೈದು ದಿನಗಳ ಕಾಲ. ಅದುವರೆಗೆ ಮೈಸೂರು ರಾಜ್ಯದಲ್ಲಿ ಅಧಿಕಾರಿಗಳದ್ದೇ ಕಾರುಬಾರು. ಮಹಾರಾಜರು ಬ್ರಿಟಿಷ್ ರೆಸಿಡೆಂಟರ ಸಮ್ಮತಿ ಮೇರೆಗೆ ದಿವಾನರು ಮತ್ತು ಸಚಿವರುಗಳನ್ನು ನೇಮಕ ಮಾಡುತ್ತಿದ್ದರು. ಪ್ರಜಾಪ್ರತಿನಿಧಿ ಸಭೆ ಎಂಬ ಚುನಾಯಿತ ಸಭೆ ಇದ್ದರೂ ಅದಕ್ಕೆ ಯಾವುದೇ ಅಧಿಕಾರ ಇರಲಿಲ್ಲ, ಚುನಾವಣೆ ಕೂಡ ಸೀಮಿತವಾಗಿತ್ತು. ತೆರಿಗೆದಾರರು, ಪದವೀಧರರು ಮೊದಲಾದವರು ಮಾತ್ರ ಮತದಾರರು.

ಈ ಪದ್ಧತಿ ಹೋಗಿ ವಯಸ್ಕರ ಮತದಾನದ ಮೇರೆಗೆ ಉಭಯ ಸದನಗಳ ವಿಧಾನಮಂಡಲ ಅಸ್ತಿತ್ವಕ್ಕೆ ಬಂದದ್ದು ಮೊದಲ ಸಾರ್ವತ್ರಿಕ ಚುನಾವಣೆಗಳ ನಂತರವೆ. ಆಗೆಲ್ಲ ವಿಧಾನಸಭೆಗೆ ಮತ್ತು ಲೋಕಸಭೆಗೆ ಏಕಕಾಲದಲ್ಲಿ ಚುನಾವಣೆ ನಡೆಯುತ್ತಿತ್ತು. ಈಗಿನಂತೆ ಪ್ರತ್ಯೇಕವಾಗಿ, ಹಂತಹಂತವಾಗಿರಲಿಲ್ಲ. ಚುನಾವಣಾ ವೆಚ್ಚವೂ ಇಂದಿನಷ್ಟು ದುಬಾರಿಯೋ, ವಿಪರೀತ ಖರ್ಚಿನ ಬಾಬತ್ತೋ ಆಗಿರಲಿಲ್ಲ.

ಮೊದಲ ಪಂಚವಾರ್ಷಿಕ ಯೋಜನೆಯು ಕೃಷಿ ಪ್ರಧಾನವಾಗಿದ್ದುದರಿಂದ ನೀರಾವರಿ ಯೋಜನೆಗಳಿಗೆ ಅಧಿಕ ಪ್ರಾಶಸ್ತ್ಯ ನೀಡಲಾಯಿತು. ದೇಶದಲ್ಲಿ ಹಲವು ಅಣೆಕಟ್ಟುಗಳು ನಿರ್ಮಾಣಗೊಂಡವು. ಪ್ರಮುಖ ವಾದುದು ಏಶಿಯಾದಲ್ಲೇ ಅತಿ ದೊಡ್ಡವು ಎನಿಸಿದ್ದ ವಿವಿಧೋದ್ದೇಶ ನದಿ ಕಣಿವೆ ಯೋಜನೆ ಭಾಕ್ರಾನಂಗಲ್ ಮತ್ತು ಪ್ರಪಂಚದಲ್ಲೇ ಅತಿ ಉದ್ದದ ಹಿರಾಕುಡ್ ಅಣೆಕಟ್ಟು. ಪಂಜಾಬ್, ಹರ್‍ಯಾಣ ರಾಜ್ಯಗಳಿಗೆ ನೀರುಣಿಸಿದ ಭಾಕ್ರಾನಂಗಲ್ ೨೨೬ ಮೀಟರು ಎತ್ತರವಿದ್ದು ೩೬ ಲಕ್ಷ ಎಕರೆ ಜಮೀನಿಗೆ ನೀರಾವರಿ ವ್ಯವಸ್ಥೆ ಕಲ್ಪಿಸಿದ್ದು, ಒರಿಸ್ಸಾದ ಮಹಾನದಿ ಪಾತ್ರದಲ್ಲಿ ಸ್ಥಾಪಿತವಾದ ಹಿರಾಕುಡ್ ಅಣೆಕಟ್ಟು ಪ್ರವಾಹವನ್ನು ತಡೆಗಟ್ಟುವುದರ ಜೊತೆಗೆ, ೨೨ ಲಕ್ಷ ಎಕರೆ ಭೂಮಿಗೆ ನೀರೊದಗಿಸಿತು. ಸಂಪೂರ್ಣವಾಗಿ ಭಾರತೀಯ ಇಂಜಿನಿಯರುಗಳೇ ನಿರ್ಮಿಸಿದ ಹಿರಾಕುಡ್ ಅಣೆಕಟ್ಟಿನ ಉದ್ದ ೪೮೦೧.೨ ಮೀಟರು. ಇಲ್ಲಿ ಸರೋವರದ ಉದ್ದ ೪೦೦ ಮೈಲು. ೧೨೩.೨ ಮೆಗಾವಾಟ್ ವಿದ್ಯುತ್ ಉತ್ಪಾದನೆಯಾಗುತ್ತದೆ. ಈ ಎರಡೂ ಯೋಜನೆಗಳಲ್ಲಿ ವಿದ್ಯುತ್ ಉತ್ಪಾದನೆ ಯನ್ನೂ ಕೈಗೊಳ್ಳಲಾಯಿತು. ಕೃಷಿಕ್ಷೇತ್ರದ ಅಭಿವೃದ್ಧಿಗೆ ಯಂತ್ರ ಸಲಕರಣೆಗಳ ಬಳಕೆ, ಟ್ರ್ಯಾಕ್ಟರು, ಕೊಯ್ಲು ಯಂತ್ರ, ದೊಡ್ಡ ಪ್ರಮಾಣದಲ್ಲಿ ರಾಸಾಯನಿಕ ಗೊಬ್ಬರ ತಯಾರಿಕೆ ಪ್ರಾರಂಭವಾದ್ದು ಅರವತ್ತರ ದಶಕದಲ್ಲಿಯೇ.

ದೇಶದ ಕೈಗಾರಿಕೀಕರಣಕ್ಕೆ ಬುನಾದಿ ನಿರ್ಮಿಸಿದ್ದು ಎರಡನೇ ಪಂಚವಾರ್ಷಿಕ ಯೋಜನೆ ಮತ್ತು ತದನಂತರದ ಯೋಜನೆಗಳು. ಔದ್ಯೋಗೀಕರಣ ವಿಲ್ಲದೆ ಪ್ರಗತಿ ಸಾಧ್ಯವಿಲ್ಲ ಎನ್ನುವುದು ಮನದಟ್ಟಾಗಿತ್ತು. ಸ್ವಾತಂತ್ರ್ಯ ಪ್ರಾಪ್ತಿಯಾದಾಗ ದೇಶದಲ್ಲಿ ಪ್ರಮುಖ ವಾಗಿದ್ದುದು ಜವಳಿ ಉದ್ಯಮ. ಮುಂಬಯಿ, ಅಹಮದಾಬಾದ್, ಕೊಯಮತ್ತೂರು, ಚೆನ್ನೈ, ಬೆಂಗಳೂರು, ದಾವಣಗೆರೆ ಮೊದಲಾದವು ಜವಳಿ ಉದ್ಯಮಕ್ಕೆ ಕೇಂದ್ರಗಳಾಗಿದ್ದರೆ, ಪಶ್ಚಿಮ ಬಂಗಾಳದಲ್ಲಿ ಸೆಣಬು ತಯಾರಿಕೆ ಪ್ರಮುಖವಾದ್ದಾಗಿತ್ತು. ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಕೈಗಾರಿಕಾಭಿವೃದ್ಧಿಗೆ ಕಿಂಚಿತ್ತೂ ಗಮನ ನೀಡಿರಲಿಲ್ಲ. ಭಾರತ ಅವರು ತಯಾರಿಸುತ್ತಿದ್ದ ಸರಕುಗಳಿಗೆ ಮಾರುಕಟ್ಟೆಯಾಗಿತ್ತು. ದೇಸೀ ಬಂಡವಾಳ ಗಾರರು ಬೆರಳೆಣಿಕೆಯಷ್ಟು ಮಾತ್ರ ಇದ್ದರು. ಟಾಟಾ, ಬಿರ್ಲಾ, ಗೋಯೆಂಕಾ, ಕಿರ್ಲೋಸ್ಕರ್, ಜೈನ್ ಮುಂತಾದವರು ದೊಡ್ಡ ಪ್ರಮಾಣದಲ್ಲಿ ಬಂಡವಾಳ ಹೂಡಲು ಸಮರ್ಥರಿರಲಿಲ್ಲ. ಅವರ ಆಸಕ್ತಿ ಇದ್ದುದು ಶೀಘ್ರವಾಗಿ ಅಧಿಕ ಲಾಭ ತರುವ ಉದ್ಯಮಗಳಲ್ಲಿ ಮಾತ್ರ. ಇಂಥ ಪರಿಸ್ಥಿತಿಯಲ್ಲಿ ಸರಕಾರವೇ ನೇರವಾಗಿ ಬಂಡವಾಳ ಹೂಡುವುದು ಅನಿವಾರ್ಯವಾಯಿತು. ಹಾಗೆ ಪ್ರಾರಂಭವಾದ ಮೊದಲ ಸಾರ್ವಜನಿಕ


ಲಾಲ್ ಬಹದ್ದೂರ್ ಶಾಸ್ತ್ರಿ

ವಲಯದ ಉದ್ಯಮ ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್. ದೇಶದಲ್ಲಿ ದೂರವಾಣಿ ಸಂಪರ್ಕವನ್ನು ವೃದ್ಧಿಪಡಿಸಲು ಅಗತ್ಯವಾದ ಉಪಕರಣಗಳನ್ನು ತಯಾರು ಮಾಡುವ ಈ ಕಾರ್ಖಾನೆ ಪ್ರಾರಂಭವಾದ್ದು ಬೆಂಗಳೂರಿನಲ್ಲಿ, ೧೯೪೮ರಲ್ಲಿ. ಇದಕ್ಕೂ ಮುನ್ನ ೧೯೪೦ರಲ್ಲಿ ಎರಡನೇ ಮಹಾಯುದ್ಧ ಕಾಲದಲ್ಲಿ ಖಾಸಗಿ ಕ್ಷೇತ್ರದಲ್ಲಿ ಪ್ರಾರಂಭವಾಗಿದ್ದ ಹಿಂದೂಸ್ತಾನ್ ವಿಮಾನ ಕಾರ್ಖಾನೆ ಸ್ವಾತಂತ್ರ್ಯಾನಂತರ ಸರಕಾರದ ರಕ್ಷಣಾ ಇಲಾಖೆಯ ಸುಬರ್ದಿಗೆ ಒಳಪಟ್ಟಿತು. ಕೆಲಕಾಲ ಈ ಕಾರ್ಖಾನೆ ರೈಲ್ವೆ ಬೋಗಿಗಳನ್ನು ತಯಾರಿಸುತ್ತಿತ್ತು ಎಂದರೆ ಇಂದು ಯಾರಾದರೂ ಅಚ್ಚರಿಪಡಬಹುದು. ಮುಂದೆ ೧೯೬೪ರಲ್ಲಿ ವಿಮಾನ ಕಾರ್ಖಾನೆ ಅತಿ ದೊಡ್ಡ ಸಾರ್ವಜನಿಕ ವಲಯದ ಉದ್ಯಮವಾಗಿ ಬೆಳೆಯತೊಡಗಿತು. ಐವತ್ತರ ದಶಕದಲ್ಲಿ ಪ್ರಾರಂಭವಾದ್ದು ಅಗತ್ಯವಾದ ಯಂತ್ರಗಳನ್ನು ತಯಾರು ಮಾಡುವ ಹಿಂದೂಸ್ತಾನ್ ಮೆಷಿನ್ ಟೂಲ್ಸ್ ಕಾರ್ಖಾನೆ ಹಾಗೂ ಇಲೆಕ್ಟ್ರಾನಿಕ್ ಉಪಕರಣ ಗಳನ್ನು ತಯಾರಿಸುವ ಭಾರತ್ ಇಲೆಕ್ಟ್ರಾನಿಕ್ ಕಾರ್ಖಾನೆ. ಈ ಎರಡೂ ಕಾರ್ಖಾನೆಗಳು ಬೆಂಗಳೂರಿನಲ್ಲಿ ಸ್ಥಾಪನೆಗೊಂಡು ಹೆಚ್ಚು ಕಡಿಮೆ ಒಂದೇ ಕಾಲಕ್ಕೆ ಕಾರ್ಯಾರಂಭ ಮಾಡಿದುವು. ಸರಕಾರಿ ಕ್ಷೇತ್ರದಲ್ಲಿ ಈ ಕಾರ್ಖಾನೆಗಳು ಸ್ಥಾಪನೆ ಗೊಂಡಿದ್ದು ಬೆಂಗಳೂರು ನಗರದ ಬೆಳವಣಿಗೆಗೆ ನಾಂದಿಯಾಯಿತು. ದೇಶದಲ್ಲಿ ಮೊಟ್ಟ ಮೊದಲ ಸರಕಾರಿ ಕ್ಷೇತ್ರದ ಉದ್ಯಮಗಳು ಪ್ರಾರಂಭವಾದ್ದು ಕೂಡ ಮೈಸೂರು ಸಂಸ್ಥಾನದಲ್ಲೇ. ಖ್ಯಾತ ಇಂಜಿನಿಯರ್ ವಿಶ್ವೇಶ್ವರಯ್ಯನವರ ಕಾಲದಲ್ಲಿ ಸ್ಥಾಪನೆಗೊಂಡ ನೀರಾವರಿ ಯೋಜನೆ ಕೃಷ್ಣರಾಜ ಸಾಗರ (ಕಾವೇರಿ ನದಿ ಪಾತ್ರದಲ್ಲಿ ನಿರ್ಮಿಸಿದ ಅಣೆಕಟ್ಟು), ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ, ಕಾಗದ ತಯಾರಿಕೆ ಕಾರ್ಖಾನೆ, ಹಾಸನದ ವ್ಯವಸಾಯ ಉಪಕರಣಗಳ ತಯಾರಿಕೆ ಕಾರ್ಖಾನೆ, ಮೈಸೂರು ಸ್ಯಾಂಡಲ್ ಸೋಪು

## ಅಭಿನಂದನೆ

**ಮೊಗ್ಗು ಅರಳುವಾಗ** ಎಂಬ ಕೃತಿಗಾಗಿ ಜನಪ್ರಿಯ ವೈದ್ಯೆ **ಡಾ॥ ವಸುಂಧರಾ ಭೂಪತಿ** ಅವರಿಗೆ ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ, ಇವರು ಕೊಡುವ ೨೦೧೩ನೇ ಸಾಲಿನ **ರತ್ನಮ್ಮ ಹೆಗ್ಗಡೆ ಗ್ರಂಥ ಪ್ರಶಸ್ತಿ**ಯನ್ನು ನೀಡಿ ಗೌರವಿಸ ಲಾಗಿದೆ. ಹೊಸತು ಪತ್ರಿಕೆಗೆ ಲೇಖನಗಳನ್ನೂ ನವಕರ್ನಾಟಕಕ್ಕೆ ಹಲವು ಕೃತಿಗಳನ್ನೂ ಬರೆದಿರುವ ಡಾ॥ ವಸುಂಧರಾ ಭೂಪತಿಯವರನ್ನು ನವಕರ್ನಾಟಕ – ಹೊಸತು ಬಳಗ ಅಭಿನಂದಿಸುತ್ತದೆ.



*ಚಂಡೀಗಢ*

ತಯಾರಿಕೆ ಕಾರ್ಖಾನೆ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು. ಮುಂದೆ ಹಿಂದೂಸ್ತಾನ್ ಮೆಷಿನ್ ಟೂಲ್ಸ್ ಕಾರ್ಖಾನೆ ಕೈಗಡಿಯಾರಗಳ ತಯಾರಿಕೆ ಪ್ರಾರಂಭಿಸಿದರೆ, ಭಾರತ್ ಇಲೆಕ್ಟ್ರಾನಿಕ್ಸ್ ಸಂಸ್ಥೆ ಟೆಲಿವಿಷನ್ ಟ್ಯೂಬ್‌ಗಳನ್ನು ತಯಾರಿಸುತ್ತಿತ್ತು, ಇದೇ ಕಾಲಾವಧಿಯಲ್ಲಿ ಮಧ್ಯಪ್ರದೇಶದ ಭೋಪಾಲ್‌ನಲ್ಲಿ ವಿದ್ಯುದುತ್ಪಾದನೆಗೆ ಅಗತ್ಯವಾದ ಟರ್ಬೈನ್‌ಗಳನ್ನು ತಯಾರಿಸುವ ಕಾರ್ಖಾನೆ ಪ್ರಾರಂಭವಾಯಿತು. ಭಾರತ್ ಹೆವಿ ಇಲೆಕ್ಟ್ರಿಕಲ್ಸ್ ಹೆಸರಿನಲ್ಲಿ ಪ್ರಾರಂಭವಾದ ಇದು ಸಾರ್ವಜನಿಕ ಕ್ಷೇತ್ರದ ಪ್ರಮುಖ ಉದ್ಯಮಗಳಲ್ಲಿ ಒಂದಾಗಿದೆ. ತಿರುಚಿನಾಪಲ್ಲಿ, ಹರಿದ್ವಾರ, ಹೈದರಾಬಾದ್‌ಗಳಲ್ಲಿಯೂ ಈ ಘಟಕದ ಶಾಖೆಗಳು ಪ್ರಾರಂಭವಾಗಿ ದೇಶದಲ್ಲಿ ವಿದ್ಯುದುತ್ಪಾದನೆಗೆ ಅಮೂಲ್ಯವಾದ ಕೊಡುಗೆ ನೀಡಿವೆ. ಇದು ವಿದ್ಯುತ್ ಕ್ಷೇತ್ರದಲ್ಲಿ ಸ್ವಾವಲಂಬನೆಗೆ ಮೊದಲ ಹೆಜ್ಜೆಯಾಗಿತ್ತು.

ಇಷ್ಟೆಲ್ಲ ಯೋಜನೆಗಳು ಕಾರ್ಯಗತವಾಗುತ್ತಿರುವಾಗ ಭ್ರಷ್ಟಾಚಾರದ ಪ್ರಕರಣಗಳಿರಲಿಲ್ಲವೆ ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಇದಕ್ಕೆ ಉತ್ತರ ಇತ್ತು, ಆದರೆ ಈಗಿನ ಪ್ರಮಾಣದಲ್ಲಿರಲಿಲ್ಲ, ಮತ್ತೆ



ಟಿ. ಟಿ. ಕೃಷ್ಣಮಾಚಾರಿ

ನೈತಿಕತೆಯ ಮಟ್ಟವೂ ಅಧೋಗತಿಯಲ್ಲಿರಲಿಲ್ಲ. ಒಂದು ಉದಾಹರಣೆ ೧೯೫೬ರಲ್ಲಿ ರೈಲ್ವೆ ಸಚಿವರಾಗಿದ್ದ ಲಾಲ್ ಬಹದ್ದೂರ್ ಶಾಸ್ತ್ರಿಯವರು ದಕ್ಷಿಣ ಭಾರತದ ಅರಿಯಾಲೂರು ಎಂಬಲ್ಲಿ ಸಂಭವಿಸಿದ ರೈಲ್ವೆ ದುರಂತದ ನೈತಿಕ ಹೊಣೆ ಹೊತ್ತು ತಮ್ಮ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಈಗ ಎಂಥದೇ ಅವಘಡ ಸಂಭವಿಸಿದರೂ ಸಂಬಂಧಪಟ್ಟ ಸಚಿವರುಗಳು ಜಪ್ಪಯ್ಯ ಎಂದರೂ ರಾಜೀನಾಮೆ ನೀಡುವುದಿಲ್ಲ. ಹಾಗೆಯೇ ಹಣಕಾಸಿನ ಸಚಿವರಾಗಿದ್ದ ಟಿ. ಟಿ. ಕೃಷ್ಣಮಾಚಾರಿ ಕೈಗಾರಿಕೋದ್ಯಮಿ ಮುಂದ್ರಾ ಪ್ರಕರಣ ಬಯಲಾದಾಗ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದ್ದರು. ಮೈಸೂರು ಸಂಸ್ಥಾನದಲ್ಲಿ ಬಯಲಾದ ತಾಮ್ರದ ತಂತಿ ಪ್ರಕರಣದಲ್ಲಿ ಅಂದಿನ ವಿದ್ಯುತ್ ಸಚಿವರಾಗಿದ್ದ ಸುಬ್ರಮಣ್ಯ ಅವರು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದ್ದರು. ಬೆಂಗಳೂರು ನಗರದಲ್ಲಿ ನಿರ್ಮಾಣಗೊಂಡ ಸುಮಾರು ಒಂದುನೂರು ಕೋಟಿ ವೆಚ್ಚದ ವಿಧಾನಸೌಧ ನಿರ್ಮಾಣದ ಬಗ್ಗೆ ಕೂಡ ಅವ್ಯವಹಾರದ ಆಪಾದನೆ ಇತ್ತು. ಅದರ ತನಿಖೆಗಾಗಿ ನೇಮಕಗೊಂಡಿದ್ದ ಗೋರ್ವಾಲ ಸಮಿತಿ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯ ಇವರಿಗೆ ಕ್ಲೀನ್ ಚಿಟ್ ನೀಡಿತು. ಅಂದಿನ ಮುಂದ್ರಾ ಪ್ರಕರಣದಲ್ಲಿ ವಿಮಾ ಕಂಪನಿಗಳಿಂದ ಷೇರು ಖರೀದಿಗೆ ಕುಮ್ಮಕ್ಕು ನೀಡಿದರೆಂದು ಸಚಿವರ ಮೇಲೆ ಆಪಾದನೆ ಇತ್ತು. ಈ ಪ್ರಕರಣದಿಂದ ಆದ ಒಂದು ಒಳ್ಳೆಯ ಪ್ರಯೋಜನವೆಂದರೆ ದೇಶದಲ್ಲಿ ವಿಮಾ ಕಂಪನಿಗಳ ರಾಷ್ಟ್ರೀಕರಣ ಮತ್ತು ಒಂದೇ ಜೀವ ವಿಮಾ ಸಂಸ್ಥೆಯ ಸ್ಥಾಪನೆ. ಹಿಂದೆ ದೇಶದಲ್ಲಿ ೨೪೦ ಭಾರತೀಯ ಮತ್ತು ವಿದೇಶೀ ಕಂಪೆನಿಗಳಿದ್ದು ಸಾಕಷ್ಟು ಅವ್ಯವಹಾರಗಳಲ್ಲಿ ತೊಡಗಿದ್ದುವು. ಇದಕ್ಕೂ ಮುನ್ನ ಬ್ರಿಟನ್ನಿನಿಂದ ರಕ್ಷಣಾ ಪಡೆಗೆ ಅಗತ್ಯವಾದ ಜೀಪ್ ವಾಹನಗಳನ್ನು ಖರೀದಿಸುವುದರಲ್ಲಿ ಅವ್ಯವಹಾರ ನಡೆದಿತ್ತು ಎಂಬ ಆರೋಪವಿತ್ತು. ಆಗ ಬ್ರಿಟನ್ನಿನಲ್ಲಿ ಮುಂದೆ ದೇಶದ ರಕ್ಷಣಾ ಸಚಿವರಾದ ವಿ. ಕೆ. ಕೃಷ್ಣ ಮೆನನ್ ಹೈಕಮಿಶನರ್ ಆಗಿದ್ದರು. ಈ ಪ್ರಕರಣ ಕುರಿತು ತನಿಖೆ ನಡೆದು ಅವ್ಯವಹಾರವನ್ನು ಮುಚ್ಚಿಹಾಕಲಾಯಿತು. ಪಂಜಾಬಿನ ರಾಜಧಾನಿ ಚಂಡೀಗಢ ನಿರ್ಮಾಣದಲ್ಲಿ, ನೀರಾವರಿ ಯೋಜನೆಗಳಲ್ಲಿ ಸಾಕಷ್ಟು ಭ್ರಷ್ಟಾಚಾರದ ಆರೋಪ ಆಗ ಪಂಜಾಬಿನ ಮುಖ್ಯಮಂತ್ರಿ ಪ್ರತಾಪ ಸಿಂಗ್ ಕೈರಾನ್ ಮೇಲಿತ್ತು. ಪ್ರಧಾನ ಮಂತ್ರಿ ನೆಹರೂರವರು ಅದನ್ನು ಕಡೆಗಣಿಸಿದರು. ದುಬಾರಿ ವೆಚ್ಚದಲ್ಲಿ ಫ್ರೆಂಚ್ ವಾಸ್ತುಶಿಲ್ಪಿ ಕಾರ್ಬೂಸ್ಯ ಎಂಬಾತನಿಗೆ ಅತ್ಯಧಿಕ ವೇತನ ನೀಡಿ ನಿರ್ಮಿಸಲಾದ ಅತ್ಯಂತ ಆಧುನಿಕ ನಗರ ಚಂಡೀಗಢ. ಪಂಡಿತ ಜವಹರಲಾಲ್ ನೆಹರೂ ಅವರ ಕಲ್ಪನಾ ರಾಜಧಾನಿ. ಹಾಗಾಗಿ ಅದರ ಸಂಬಂಧದ ಭ್ರಷ್ಟಾಚಾರ ಹಾಗೇ ಕೊಚ್ಚಿಹೋಯಿತು. ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ನಡೆದಿರುವ ಹಲವು ಪ್ರಕರಣಗಳ ಕುರಿತು ಆಯೋಗಗಳನ್ನು, ತನಿಖಾ ಸಮಿತಿಗಳನ್ನು ರಚಿಸಿದ್ದಾಗ್ಯೂ ಅವುಗಳ ವರದಿಗಳು ಅನುಷ್ಠಾನದ ಬೆಳಕನ್ನೇ ಕಾಣಲಿಲ್ಲ. ಪ್ರಾಯಶಃ ಭ್ರಷ್ಟಾಚಾರದ ವಿಷಯದಲ್ಲಿ ಹೊಂದಿಕೊಳ್ಳುವ ನಮ್ಮ ಪ್ರವೃತ್ತಿಯೇ ಅದು ಇಂದು ಬೃಹದಾಕಾರವಾಗಿ ಬೆಳೆದಿರುವುದಕ್ಕೆ ಕಾರಣವಿದ್ದೀತು.

ಮೊದಲನೇ ಪಂಚವಾರ್ಷಿಕ ಯೋಜನೆ ಮುಗಿಯುತ್ತಿರುವ ಹಾಗೆಯೇ ಎರಡನೇ ಪಂಚವಾರ್ಷಿಕ ಯೋಜನೆಯ ಕರಡು ಸಿದ್ಧಗೊಂಡು ಸಾಕಷ್ಟು ಚರ್ಚೆಗೆ ಗುರಿಯಾಯಿತು. ದೇಶದ ಔದ್ಯೋಗೀಕರಣಕ್ಕೆ ನಾಂದಿ ಹಾಕಿದ ಈ ಯೋಜನೆಯಲ್ಲಿ ಸರಕಾರವೇ ನೇರವಾಗಿ ಬಂಡವಾಳ ಹೂಡಿ ಉದ್ಯಮಗಳನ್ನು ಸ್ಥಾಪಿಸುವುದಕ್ಕೆ ದೇಶೀ ಬಂಡವಾಳಶಾಹಿ ವರ್ಗದ ಹಾಗೂ ವಿದೇಶೀ ಬಂಡವಾಳಗಾರರ ತೀವ್ರವಾದ ವಿರೋಧವಿತ್ತು. ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳಿಂದ ಭಾರತದ ಈ ಯೋಜನೆಗೆ ಬೆಂಬಲ ಉತ್ತೇಜಿತವಾಗಿರಲಿಲ್ಲ. ಆಗ ನೆರವಿಗೆ ಬಂದದ್ದು ಅಂದಿನ ಸೋವಿಯೆತ್ ಒಕ್ಕೂಟ.

***(ಮುಂದುವರಿಯುವುದು)***

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫







# ಸಾಮಾಜಿಕ ತಾಕಲಾಟಗಳು ಹಾಗೂ ಮಹಿಳೆ

**ಡಾ॥ ಎಚ್. ಶಶಿಕಲಾ**

**ಸ್ವಾ**ತಂತ್ರ್ಯೋತ್ತರ ಭಾರತದಲ್ಲಿ ಮಹಿಳೆಯ ಸ್ಥಿತಿಗತಿಗಳಲ್ಲಿ ಸಾಕಷ್ಟು ಸುಧಾರಣೆಗಳು ನಡೆದಿವೆ. ವಿದ್ಯಾಭ್ಯಾಸ, ಸಾಮಾಜಿಕ ಚಳುವಳಿಗಳು, ಆಧುನಿಕ ತಂತ್ರಜ್ಞಾನ, ಮಹಿಳೆಯರಿಗೆ ತಮ್ಮ ಸ್ಥಾನಮಾನದ ಬಗೆಗಿನ ಎಚ್ಚರ – ಇವು ಹೆಣ್ಣಿಗೆ ತನ್ನ ಸ್ವಂತ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ತಿಳುವಳಿಕೆಯನ್ನು ನೀಡಿವೆ. ಹಾಗೆಯೇ ಆತ್ಮಗೌರವ, ಸ್ವಾಭಿಮಾನ, ತನ್ನ ಪ್ರತಿಭೆಯನ್ನು ಸೂಕ್ತ ರೀತಿಯಲ್ಲಿ ಬೆಳೆಸಿಕೊಳ್ಳುವ, ತನ್ನ ಬಯಕೆಯಂತೆ ಜೀವನವನ್ನು ಕಟ್ಟಿಕೊಳ್ಳುವ, ಜೀವನದ ಸಂಕಷ್ಟಗಳನ್ನು ಧೈರ್ಯದಿಂದ ಎದುರಿಸುವ ಸಾಮರ್ಥ್ಯ – ಇಂತಹ ಶಕ್ತಿಯನ್ನು ಪಡೆಯುವಂತೆ ಮಾಡಿವೆ.

ಇದರಿಂದಾಗಿಯೇ ಮಹಿಳೆ ಇದುವರೆವಿಗೂ ಇದ್ದ ಕೌಟುಂಬಿಕ ಪರಿಧಿಯನ್ನು ದಾಟಿ ರಾಜಕೀಯ, ಆಡಳಿತ, ಸಾಮಾಜಿಕ ಚಳುವಳಿ, ವಿಜ್ಞಾನ ಮತ್ತು ತಂತ್ರಜ್ಞಾನ, ಬೃಹತ್ ಮತ್ತು ಸಣ್ಣ ಉದ್ದಿಮೆ – ಇಂಥ ಹತ್ತು ಹಲವು ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಲು ಸಾಧ್ಯವಾಗಿದೆ. ಆದರೆ ಇಂತಹ ಕ್ಷೇತ್ರಗಳಲ್ಲಿ ತೊಡಗಿಕೊಂಡ ಮಾತ್ರಕ್ಕೆ ಮಹಿಳೆಯರ ಸಮಸ್ಯೆಗಳು ಸಂಪೂರ್ಣವಾಗಿ ಇಲ್ಲವಾಗಿವೆಯೇ ಎಂದರೆ, ಇಲ್ಲ ಎಂಬುದೇ ಉತ್ತರವಾಗುತ್ತದೆ. ಅಲ್ಲದೆ, ಹೊಸ ಹೊಸ ಸವಾಲುಗಳು ಎದುರಾದಂತೆ ಸಮಸ್ಯೆಗಳ ವಿಸ್ತಾರ ಇನ್ನಷ್ಟು ಹೆಚ್ಚಾಗಿದೆ; ಹಾಗೂ ಆಳವಾಗಿದೆ. ಬದುಕಿನ ತೀವ್ರ ಬದಲಾವಣೆಯ ಸ್ಥಿತಿಯಲ್ಲಿ ಇಂತಹ ಸವಾಲುಗಳನ್ನು ಎದುರಿಸಿಯೇ ಮುಂದೆ ಸಾಗಬೇಕಾದದ್ದು ಅನಿವಾರ್ಯ ಎಂಬುದು ನಿಜವಾದರೂ ಸಮಸ್ಯೆ ಮತ್ತು ಸವಾಲುಗಳ ಸ್ವರೂಪ ಎಂತಹದ್ದು ಎಂಬುದನ್ನು ಮೂಲಭೂತವಾಗಿ ಗುರುತಿಸಿಕೊಂಡರೆ ಆಗ ಸವಾಲುಗಳನ್ನು ಎದುರಿಸುವುದಕ್ಕೆ ಭಿನ್ನ ದಾರಿಗಳು ಹೊಳೆಯುತ್ತವೆ.

ಸಮಾಜದಲ್ಲಿ ಹೆಣ್ಣನ್ನು ನೋಡುವ ಕಣ್ಣುಗಳು ಬದಲಾಗಿವೆಯೇ ? ಹೆಣ್ಣಿಗೂ ಒಂದು ಜೀವವಿದೆ; ಅವಳಿಗೂ ಒಂದು ಸ್ವತಂತ್ರ ಅಸ್ತಿತ್ವವಿದೆ; ತನ್ನದೇ ಆದ ನೋವು ನಲಿವುಗಳಿವೆ, ಅವುಗಳನ್ನು ಪೂರೈಸಿಕೊಳ್ಳುವಲ್ಲಿ ಅವಳಿಗೂ ಹಕ್ಕಿದೆ ಎಂಬ ದೃಷ್ಟಿಕೋನ ಬೆಳೆದಿದೆಯೇ ? ಎಂಬ ಪ್ರಶ್ನೆಗೆ ಉತ್ತರ ಪೂರ್ಣವಾಗಿ ಇಲ್ಲ ಎಂಬುದೇ ಆಗಿದೆ.

ಅತ್ಯಾಚಾರದ ಪ್ರಕರಣಗಳು, ಕೊಲೆ, ಆತ್ಮಹತ್ಯೆ, ವರದಕ್ಷಿಣೆ ಸಾವು, ಅವಮಾನ, ಹೆಣ್ಣಿನ ಗೌರವಕ್ಕೆ ಧಕ್ಕೆ ತರುವಂತಹ ನಡವಳಿಕೆಗಳು ಸಾಮಾಜಿಕ ರಂಗದಲ್ಲಿ ದಿನೇದಿನೇ ಹೆಚ್ಚಾಗುತ್ತಿರುವುದು ಅನುಭವಕ್ಕೆ ಬರುತ್ತಿದೆ. ಇವು 'ಆಧುನಿಕತೆ' ನಮ್ಮ ಸಮಾಜದ ಬದುಕಿನ ಆಳಕ್ಕೆ ಇಳಿದಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಿವೆ. ಆಧುನಿಕತೆ ಎಂಬುದು ಕೇವಲ ಎಲೆಕ್ಟ್ರಾನಿಕ್ಸ್ ವಸ್ತುಗಳ ರೂಪದಲ್ಲಿ, ತಂತ್ರಜ್ಞಾನವನ್ನು ಅಳವಡಿಸಿಕೊಂಡು ಜೀವನದ ಸೌಲಭ್ಯವನ್ನು ಹೆಚ್ಚುಮಾಡಿಕೊಳ್ಳುವ ರೂಪದಲ್ಲಿ, ಆರ್ಥಿಕತೆಯನ್ನೇ ಅಭಿವೃದ್ಧಿ ಮಂತ್ರವಾಗಿಸಿಕೊಂಡ ಬಗೆಯಲ್ಲಿ ಮಾತ್ರ ಬಂದಿದೆ. ಆರ್ಥಿಕ ಚಿಂತಕ, ಅಮರ್ತ್ಯ ಸೇನ್ ಅವರ ದೃಷ್ಟಿಯಲ್ಲಿ ಅಭಿವೃದ್ಧಿ ಎಂದರೆ, ಕೇವಲ ಆರ್ಥಿಕ ಉನ್ನತೀಕರಣವೇ ಎಂಬುದಾಗಿಲ್ಲ. ಅಭಿವೃದ್ಧಿಯ ವ್ಯಾಖ್ಯೆಯಲ್ಲಿ ಆರೋಗ್ಯ, ವಿದ್ಯಾಭ್ಯಾಸ, ಆರ್ಥಿಕತೆ, ಆಯಸ್ಸಿನ ಪ್ರಮಾಣ – ಈ ಎಲ್ಲ ಅಂಶಗಳು ಸೇರುತ್ತವೆ. ಹೆಣ್ಣಿನ ಬದುಕಿನಲ್ಲಿ ಇಂತಹ ಸಮಗ್ರ ಬದಲಾವಣೆ ಉಂಟಾಗುತ್ತಿಲ್ಲವಾದರೂ ಈ ದಿಕ್ಕಿನ ಕಡೆಗೆ ಚಲಿಸುವಲ್ಲಿ ಎಚ್ಚರ ಮೂಡುತ್ತಿದೆ.

ಇಂತಹ ಸಂದರ್ಭದಲ್ಲಿ ಹೆಣ್ಣು ಸಾಮಾಜಿಕ ರಂಗದಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ನೋಡಬೇಕಾಗುತ್ತದೆ. ಹೆಣ್ಣಿನ ಮೇಲಿನ ಹಿಂಸೆಗೆ ಈಗ ನಾನಾ ಮುಖಗಳಿವೆ. ಧಾರ್ಮಿಕತೆ ಹಾಗೂ ಸಾಮಾಜಿಕತೆಯ ಹಿಡಿತ ಬಲವಾಗಿರುವ ಭಾರತದಲ್ಲಿ ತನ್ನ ಮೇಲಾಗುವ ಆಕ್ರಮಣವನ್ನು ಸಹಿಸಿಕೊಳ್ಳುವುದೇ









ಹೆಣ್ಣಿನ ಜೀವನದ ಸಾರ್ಥಕ ಬದುಕಿನ ಕ್ಷಣ ಎಂಬಂತೆ ಬಿಂಬಿಸಲಾಗಿದೆ; ಹಾಗೂ ಇಂತಹ ಆಕ್ರಮಣಕ್ಕೆ ಪ್ರತಿಭಟನೆಯನ್ನು ವ್ಯಕ್ತಪಡಿಸಿದ ಹೆಣ್ಣನ್ನು ಸಾಮಾಜಿಕ ನೆಲೆಯಲ್ಲಿ ಹತ್ತಿಕ್ಕಲಾಗುತ್ತದೆ. ಗಂಡುಬೀರಿ, ಅಹಂಕಾರಿ ಎಂಬ ಹಣೆಪಟ್ಟಿಯನ್ನು ಕಟ್ಟಿ ಅವಳನ್ನು ಬಹಿಷ್ಕರಿಸಲಾಗುತ್ತದೆ.

ವರದಕ್ಷಿಣೆ ಸಮಸ್ಯೆಯು ಭಾರತೀಯ ಪರಂಪರೆಯ ಭಾಗವೇ ಆಗಿದೆ. ಈ ಪಿಡುಗಿನ ಬಗ್ಗೆ ಅರಿವಿದೆ ಎಂದರೂ, ಒಟ್ಟು ಜನಸಂಖ್ಯೆಯ ದಾಖಲೆಯನ್ನು ತೆಗೆದು ಕೊಂಡಾಗ ಇನ್ನೂ ಅದು ದೊಡ್ಡ ಪ್ರಮಾಣದಲ್ಲಿ ದಿನದಿನಕ್ಕೂ ಬೆಳೆಯುತ್ತಿರುವುದೇ ಆಗಿದೆ. ಪುರುಷ ಲೋಕಕ್ಕೆ ತಮ್ಮ ಆಸೆ ಆಕಾಂಕ್ಷೆಗಳ ಸುಲಭ ಪೂರೈಕೆಯ ದಾರಿಯಾಗಿ ಒಂದು ಮುಖ್ಯ ಪರಿಹಾರದ ದಾರಿಯಾಗಿ ವರದಕ್ಷಿಣೆ ಎಂಬುದು ಇದೆ. ಇದರ ಮೂಲಕ ಆಧುನಿಕತೆಯು ಪರಂಪರೆಯಲ್ಲಿ ಉರಿಯುತ್ತಿರುವ ಕ್ರೌರ್ಯಕ್ಕೆ ಮತ್ತಷ್ಟು ತುಪ್ಪ ಸುರಿಯುತ್ತಿದೆ. ಇದರಲ್ಲಿ ವಿದ್ಯಾವಂತ, ಅವಿದ್ಯಾವಂತ ಎಂಬ ವ್ಯತ್ಯಾಸವಿಲ್ಲದೆ ವರದಕ್ಷಿಣೆಯ ಕಿರುಕುಳವೆಂಬುದೂ ಇದೆ. ಹೆಣ್ಣಿನ ಮೇಲಿನ ಹಿಂಸೆಯಲ್ಲಿ, ಉಳಿದ ಎಲ್ಲಾ ಹಿಂಸೆಗಿಂತ ಅತಿ ಹೆಚ್ಚಿನ ಸಂಖ್ಯೆಯಲ್ಲಿ ವರದಿಯಾಗಿರುವ ಅಪರಾಧಗಳಲ್ಲಿ ಗಂಡನ ಮನೆಯವರು ನೀಡುವ ಕಿರುಕುಳದ ಸಂಖ್ಯೆಯೇ ಹೆಚ್ಚಾಗಿದೆ. ಕರ್ನಾಟಕದಲ್ಲಿ ೨೦೧೨ರಲ್ಲಿ ವರದಿಯಾಗಿರುವ ದಾಖಲೆಗಳ ಪ್ರಕಾರ, ಹೆಣ್ಣಿನ ವಿರುದ್ಧದ ಅಪರಾಧದಲ್ಲಿ ವರದಕ್ಷಿಣೆ ಪ್ರಕರಣ ೨೧೮, ಹೆಣ್ಣಿನ ಅಪಹರಣದ ದಾಖಲೆ ೧೦೭೦, ಅತ್ಯಾಚಾರ ಪ್ರಕರಣಗಳು ೬೨೧, ಗಂಡನ ಹಾಗೂ ಅವನ ಸಂಬಂಧಿಗಳ ಕಿರುಕುಳಗಳು ೩೬೮೪ ಇವೆ. ಇವಲ್ಲದೆ ಮರ್ಯಾದೆಗೆ ಅಂಜಿ ವರದಿಯಾಗದೆ ಇರುವ ಪ್ರಕರಣಗಳು ಸಾಕಷ್ಟಿವೆ.

ಅತ್ಯಾಚಾರದ ಪ್ರಕರಣಗಳ ಸಂಖ್ಯೆಯೂ ದಿನೇ ದಿನೇ ಹೆಚ್ಚುತ್ತಿವೆ. ದಿಲ್ಲಿಯ ನಿರ್ಭಯಳ ಕೇಸು ಇನ್ನೂ ಹಸಿರಾಗಿರುವಾಗಲೇ ಇದರ ಬೆನ್ನಿನಲ್ಲೇ ಇಂತಹ ಸಾಕಷ್ಟು ಘಟನೆಗಳು ಪುನರಾವರ್ತನೆಯಾಗುತ್ತಿವೆ. ಹೆಣ್ಣನ್ನು ಲೈಂಗಿಕವಾಗಿ ಶೋಷಣೆ ಮಾಡುವುದು ಎಂಬುದು ಕಣ್ಣಿಗೆ ಕಾಣುತ್ತಿರುವ ಒಂದು ಮುಖ ಅಷ್ಟೆ. ಹೆಚ್ಚಾಗಿ ಅತ್ಯಾಚಾರದ ವಿಚಾರದಲ್ಲಿ ಗಾಬರಿ ಹುಟ್ಟಿಸುತ್ತಿರುವ ಸಂಗತಿ ಎಂದರೆ, ಪರಿಚಿತರಿಂದಲೇ ನಡೆಯುತ್ತಿರುವ ಅತ್ಯಾಚಾರಗಳು. ೨೦೧೨ರ ಅಪರಾಧ ದಾಖಲೆಗಳ ಪ್ರಕಾರ ಹೆಣ್ಣಿನ ವಿರುದ್ಧ ನಡೆದಿರುವ ಅತ್ಯಾಚಾರದ ಪ್ರಕರಣಗಳಲ್ಲಿ ಅಪರಾಧಿಗಳು ಪತ್ತೆಯಾಗಿರುವ ೫೨೬ ಪ್ರಕರಣಗಳಿವೆ. ಇದರಲ್ಲಿ ಅತ್ಯಾಚಾರ ಎಸಗಿರುವವರಲ್ಲಿ ಸಂಬಂಧಿಕರು ೪೨ ಜನರಾದರೆ, ನೆರೆಹೊರೆಯವರು ೧೪೨ ಜನರಾಗಿದ್ದಾರೆ. ಪರಿಚಿತ ವ್ಯಕ್ತಿಗಳು ೩೪೦ ಜನರಾಗಿದ್ದಾರೆ. ಸಮಾಜದಲ್ಲಿ ಪರಸ್ಪರ ನಂಬಿಕೆ, ವಿಶ್ವಾಸದ ಮೂಲಕ ಏರ್ಪಡುವ ಸಂಬಂಧಗಳ ಆಳದಲ್ಲಿ ಸುಲಭದಲ್ಲಿ ತುತ್ತಾಗುವ ಪರಿಚಿತ ಮಹಿಳೆಯರನ್ನು ಬಲಿಪಶುವನ್ನಾಗಿಸಲಾಗುತ್ತಿದೆ. ಮನುಷ್ಯ ಸಂಬಂಧಗಳನ್ನು ನಂಬಲಾರದ ಸ್ಥಿತಿಯಲ್ಲಿ ಮಹಿಳೆ ಇದ್ದಾಳೆ. ಇಂತಹ ಸಂದರ್ಭದಲ್ಲಿ ಹೆಣ್ಣು ನಿರಂತರವಾಗಿ ಎಲ್ಲ ಸಂಬಂಧಗಳಲ್ಲಿಯೂ ಎಚ್ಚರದಲ್ಲಿರ ಬೇಕಾದ ಅನಿವಾರ್ಯತೆಗೆ ಸಿಲುಕಿದ್ದಾಳೆ. ಇದರಿಂದ ಹೆಣ್ಣಿಗೆ ಸಿಗುತ್ತಿರುವ ಸ್ವಾತಂತ್ರ್ಯದ ಮಿತಿಯ ಅರಿವೂ ಉಂಟಾಗುತ್ತದೆ.

ವಿದ್ಯಾಭ್ಯಾಸದಿಂದ ಹೆಣ್ಣಿಗೆ ತನ್ನ ಅರಿವಿನ ಎಚ್ಚರ, ಸಮಾಜದಲ್ಲಿ ತನ್ನ ಸ್ಥಾನಮಾನದ ಬಗೆಗಿನ ಜಾಗೃತಿ ಮೂಡಿರುವುದು ನಿಜ. ಆದರೆ, ವಿದ್ಯಾಭ್ಯಾಸದ ಕಾರಣದಿಂದ ಮನೆಯಿಂದ ಹೊರಬರುವ ಹೆಣ್ಣುಮಕ್ಕಳ ಪ್ರಪಂಚಜ್ಞಾನವೂ ವಿಸ್ತಾರವಾದುದಲ್ಲ ಎಂಬುದೂ ಅಷ್ಟೇ ಸತ್ಯ. ಇದರಿಂದ ಸುಲಭವಾಗಿ ಮೋಸ ಹೋಗುವ ಹೆಣ್ಣುಮಕ್ಕಳ ಸ್ಥಿತಿ ದಾರುಣವಾದುದು. ಪ್ರೀತಿ, ಪ್ರೇಮದ ಹೆಸರಿನಲ್ಲಿ ನಡೆಯುವ ವಂಚನೆ, ಅತ್ಯಾಚಾರಕ್ಕೆ ಬಲಿಪಶುವಾಗುವ ಮೊದಲೇ ಹೆಣ್ಣು ಮಕ್ಕಳು ತಮ್ಮ ಭಾವನೆಗಳ ತಾಕಲಾಟವನ್ನು ಬಹಳ ಜಾಗರೂಕತೆಯಿಂದ ನಿರ್ವಹಿಸ ಬೇಕಾಗುತ್ತದೆ. ದಾಖಲೆಗಳ ಪ್ರಕಾರ ೧೮ರಿಂದ ೩೦ ವರ್ಷದ ಹೆಣ್ಣುಮಕ್ಕಳ ಮೇಲೆ ನಡೆಯುವ ಅತ್ಯಾಚಾರ ಪ್ರಕರಣಗಳು ಅತಿ ಹೆಚ್ಚಾಗಿವೆ. ಇದರ ಮೂಲಕ ಸೂಚಿತ ವಾಗುವುದೆಂದರೆ ವಂಚನೆಯ ಪ್ರಕರಣಗಳು ಇದರ ಹಿಂದೆ ಸಾಕಷ್ಟು ಇವೆ ಎಂಬುದು. ಇದರಿಂದ ದೇಹ ಮತ್ತು ಭಾವನೆಗಳು ಸೂಕ್ತ ರೀತಿಯಲ್ಲಿ, ಸೂಕ್ತ ವ್ಯಕ್ತಿಗಳೊಡನೆ ವ್ಯಕ್ತವಾಗಬೇಕಾದ ಎಚ್ಚರ ಹೆಣ್ಣಿಗೆ ಅನಿವಾರ್ಯವಾಗಿದೆ. ಹೆಣ್ಣಿಗೆ ಸ್ವಾತಂತ್ರ್ಯ ಇರುವುದು ನಿಜವಾದರೂ ಅದನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳ ಬೇಕಾದ ತಿಳುವಳಿಕೆ ಮತ್ತು ಎಚ್ಚರವನ್ನು ಹೆಣ್ಣುಮಕ್ಕಳಿಗೆ ಸಾಕಷ್ಟು ರೀತಿಯಲ್ಲಿ ನೀಡಬೇಕಾದ ಅಗತ್ಯವೂ ಇದೆ. ಪ್ರೀತಿ, ಪ್ರೇಮದ ಹೆಸರಿನಲ್ಲಿ ವಂಚನೆಗೊಳಗಾದ ಹೆಣ್ಣುಮಕ್ಕಳು ಮನೆಗೆ ಹಿಂದಿರುಗಲಾರದೆ, ಅಪಹರಣಕ್ಕೆ ಒಳಗಾಗಿ ಅವರು ತಲುಪುವ ಸ್ಥಳವೆಂದರೆ 'ಕೆಂಪು ದೀಪ'ವೇ ಆಗಿರುತ್ತದೆ.

ಬಡ ಮತ್ತು ಕೆಳಜಾತಿಯಲ್ಲಿ ಬಾಲ್ಯವಿವಾಹವೆಂಬುದು ಇಂದಿಗೂ ಜೀವಂತವಾಗಿರುವ ಪಿಡುಗಾಗಿದೆ. ಬಾಲ್ಯವಿವಾಹ ಹೆಣ್ಣುಮಕ್ಕಳ ತಂದೆ ತಾಯಿಗಳಿಗೆ ಬಡತನದಿಂದ ಬಿಡುಗಡೆಯನ್ನು ಪಡೆಯುವ ದಾರಿಯಾದರೆ, ಇದೇ ಪದ್ಧತಿ ದೇಹ ಮಾರಾಟದ ಬಂಡವಾಳವಾಗಿದೆ. ಇದಕ್ಕೆ ತಕ್ಕಂತೆ ಧಾರ್ಮಿಕ ಚೌಕಟ್ಟುಗಳನ್ನು ರೂಪಿಸಿಕೊಳ್ಳಲಾಗಿದೆ. ದೇವದಾಸಿ ಪದ್ಧತಿ, ಬಾಲ್ಯವಿವಾಹದ ಹೆಸರಿನಲ್ಲಿ ನಡೆಯುತ್ತಿರುವುದು ಇದೇ ದಂಧೆ. ಇಂತಹ ಪದ್ಧತಿಗಳ ನಿರ್ಮೂಲನಕ್ಕಾಗಿ ಗ್ರಾಮೀಣ ಪ್ರದೇಶಗಳಲ್ಲಿ ಸರ್ಕಾರವು ಅನೇಕ ಮಹಿಳಾ ಯೋಜನೆಗಳ ಮೂಲಕ ಹೆಣ್ಣಿನ ಬದುಕನ್ನು ಬಡತನದಿಂದ ಹೊರಬರಲು ವ್ಯವಸ್ಥೆ ಮಾಡಿದೆ. ಸ್ತ್ರೀಶಕ್ತಿ ಯೋಜನೆ, ಸ್ವ ಸಹಾಯ ಕೇಂದ್ರ, ಇಂದಿರಾ ಮಹಿಳಾ ಯೋಜನೆ, ಬಾಲಿಕಾ ಸಮೃದ್ಧಿ ಯೋಜನೆ, ಮಹಿಳಾ ಸಮೃದ್ಧಿ ಯೋಜನೆ ಮುಂತಾದವು. ಆದರೆ ಹೆಣ್ಣಿನ ಬದುಕು ಈ ಎಲ್ಲಾ ಶೋಷಣೆಗಳಿಂದ ಹೊರಬರಲು ಇರುವ ದೊಡ್ಡ ಕಂದಕವೆಂದರೆ, ಯೋಜನೆಗಳ ಜಾರಿಗೆ ಮತ್ತು ಫಲಾನುಭವಿಗಳ ನಡುವೆ ಇರುವ ಅಗಾಧವಾದ ಅಂತರ. ಇದರಿಂದ ವೇಶ್ಯಾವಾಟಿಕೆಗಳು ದಿನದಿನಕ್ಕೂ ಹೆಚ್ಚುತ್ತಿವೆಯೇ ಹೊರತು ಕಡಿಮೆಯಾಗುತ್ತಿಲ್ಲ; ಮತ್ತು ಹೆಣ್ಣಿನ ದೇಹದ ಬೇಟೆಯೂ ತಗ್ಗುತ್ತಿಲ್ಲ.

ನಗರಗಳಲ್ಲಿ ಅಕ್ಷರಸ್ಥ ಹಾಗೂ ಅನಕ್ಷರಸ್ಥ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಉದ್ಯೋಗದಲ್ಲಿದ್ದಾರೆ. ಉದ್ಯೋಗಸ್ಥರಾಗಿರುವ ಮಹಿಳೆಯರು ಎಲ್ಲರೂ ನೇರವಾಗಿ ಲೈಂಗಿಕ ಆಕ್ರಮಣಕ್ಕೆ ಒಳಗಾಗದಿರಬಹುದು. ಆದರೆ ಹೆಣ್ಣನ್ನು ಲೈಂಗಿಕ ಪ್ರಚೋದನೆಗಾಗಿ ನಡೆಸುವ ಹುನ್ನಾರುಗಳು ಲೈಂಗಿಕ ಆಕ್ರಮಣದ ಪರಿಧಿಯಲ್ಲಿಯೇ ಬರುತ್ತವೆ. ಹೆಣ್ಣನ್ನು ಅವಮಾನಕರವಾಗಿ ನಡೆಸಿಕೊಳ್ಳುವ ವಿಚಿತ್ರ ನಡವಳಿಕೆಗಳು, ಪದೇ ಪದೇ ಹೆಣ್ಣು ಎಂಬುದನ್ನು ನೆನಪು ಮಾಡಿಕೊಡುವ ಪ್ರಯತ್ನ, ಹೆಣ್ಣಿನ ಸಾಧನೆಯನ್ನು ಹೀಯಾಳಿಸುವ, ಆ ಮೂಲಕ ಅವಳ ಪ್ರತಿಭೆಯನ್ನು ಹೀಗಳೆಯುವ ಪ್ರಯತ್ನ, ಹೆಣ್ಣಿನ ಸಾಧನೆಯನ್ನು ಕುರಿತು ಹೇಳುವಾಗ, ಅದರ ಹಿಂದೆ ಅವಳು ತನ್ನ ದೇಹವನ್ನು ಒಡ್ಡಿಯೇ ಸಾಧನೆಯನ್ನು ಮಾಡಿರುತ್ತಾಳೆಂಬ ಅವಮಾನಕರವಾದ ಮಾತುಗಳು, ಹೆಣ್ಣಿನ ಸಾಧನೆಯನ್ನು ಕಂಡೂ ಕಾಣದಂತೆ ತೋರಿಸುವ ತಿರಸ್ಕಾರ, ಅತಾರ್ಕಿಕ ಮಾತುಗಳ ಮೂಲಕ ಹಿಂಸಿಸುವುದು – ಇವು ಸಮಾಜದ ಯಾವುದೇ ಸ್ಥಾನದಲ್ಲಿರುವ ಮಹಿಳೆ ಎದುರಿಸುತ್ತಿರುವ ಸವಾಲಾಗಿದೆ.

ನಗರಗಳಲ್ಲಿ ನಡೆಯುತ್ತಿರುವ ಅಪರಾಧ ಪ್ರಕರಣಗಳನ್ನು ನೋಡಿದರೆ, ಲಭ್ಯವಿರುವ ದಾಖಲೆಗಳ ಪ್ರಕಾರ ಭಾರತದಲ್ಲಿ ಹೆಣ್ಣಿನ ವಿರುದ್ಧ ನಡೆಯುತ್ತಿರುವ ಅಪರಾಧಗಳಲ್ಲಿ ದೆಹಲಿ ಮೊದಲ ಸ್ಥಾನದಲ್ಲಿದ್ದರೆ, ಬೆಂಗಳೂರು ಎರಡನೇ ಸ್ಥಾನದಲ್ಲಿದೆ. ವೇಗವಾಗಿ ಬೆಳೆಯುತ್ತಿರುವ ಬೆಂಗಳೂರು ತನ್ನ ಒಡಲಿನಲ್ಲಿ ಹೆಣ್ಣಿನ ಮೇಲಿನ ದಬ್ಬಾಳಿಕೆಯನ್ನೂ ಸೇರಿಸಿಕೊಂಡೇ ಬೆಳೆಯುತ್ತಿದೆ. ಇದರಿಂದ ಆಧುನಿಕತೆ ಒಂದೆಡೆ ಹೆಣ್ಣಿಗೆ ಬಿಡುಗಡೆಯ ದಾರಿಯನ್ನು ತೋರಿಸುತ್ತಿದೆಯೋ ಅಥವಾ ಬಿಡುಗಡೆ ಎಂಬ ಮರೀಚಿಕೆಯ ಬೆನ್ನು ಹತ್ತಿದೆಯೋ ಎಂಬುದು ಇನ್ನೂ ಗೊಂದಲವನ್ನು ಉಂಟುಮಾಡಿದೆ. ಹಾಗೆ ನೋಡಿದರೆ ಸಮಸ್ಯೆಗಳಿಂದ ಸಂಪೂರ್ಣ ಬಿಡುಗಡೆ ಎಂಬುದು ಇರುವುದಿಲ್ಲ; ಒಂದು ಸ್ಥಿತಿಯಿಂದ ಅದಕ್ಕಿಂತ ಉತ್ತಮ ಸ್ಥಿತಿಯ ಕಡೆಗೆ ಸಾಗುವ ಚಲನೆಯೇ ಮುಖ್ಯವಾದುದು.

ಈ ನಿಟ್ಟಿನಲ್ಲಿ ನಗರಗಳಲ್ಲಿ ತಂತ್ರಜ್ಞಾನವು ಜೀವನದ ಮಟ್ಟವನ್ನು ಉತ್ತಮ ಗೊಳಿಸುವಲ್ಲಿ ಬಹಳಷ್ಟು ಸೌಲಭ್ಯಗಳನ್ನು ಒದಗಿಸಿದೆ. ಅದರಲ್ಲಿ ಕಂಪ್ಯೂಟರ್ ತಂತ್ರಜ್ಞಾನವು ಸಾಕಷ್ಟು ಉದ್ಯೋಗವನ್ನೂ ಆರ್ಥಿಕ ಬದುಕಿನ ಸುಧಾರಣೆಯನ್ನೂ ತಂದುಕೊಟ್ಟಿದೆ. ಇದು ಮಹಿಳೆಯರ ಬದುಕಿನಲ್ಲಿ ಸಾಕಷ್ಟು ಬದಲಾವಣೆಗಳನ್ನು ತರಲು ಕಾರಣವಾಗಿದೆ. ಹೆಣ್ಣು ಮತ್ತು ಗಂಡಿನ ಸಂಬಂಧವನ್ನು ಹೊಸ ಭಾಷ್ಯದಲ್ಲಿ ಬರೆಯುವಂತೆ ಮಾಡಿದೆ. 'ಲಿವಿಂಗ್ ಟುಗೆದರ್' ಹೆಸರಿನಲ್ಲಿನ ಬದುಕುತ್ತಿರುವ ಗಂಡು ಮತ್ತು ಹೆಣ್ಣಿನ ಸಂಬಂಧವು ಸಾಂಪ್ರದಾಯಿಕ ನೈತಿಕತೆಯ ಚೌಕಟ್ಟಿನಿಂದ ಹೊರಬಂದಿದೆ. ಈ ಸಹಬಾಳ್ವೆಯು ಪರಂಪರೆಯಲ್ಲಿ ಇದ್ದ ಕೆಲವು ಮಿತಿಗಳನ್ನು ದಾಟುವಲ್ಲಿ ಹೆಣ್ಣಿಗೆ ಹೆಚ್ಚಿನ ಸ್ವಾತಂತ್ರ್ಯವನ್ನು ಒದಗಿಸಿದೆ. ಗಂಡಿನ ಆಯ್ಕೆಯ ಸ್ವಾತಂತ್ರ್ಯ, ಅದಕ್ಕಿಂತಲೂ ಹೆಚ್ಚಾಗಿ ಸಂಬಂಧವು ಸರಿಹೊಂದುವಷ್ಟು ದಿನ ಒಟ್ಟಿಗೆ

ಇರಬಹುದಾದ ಸ್ವಾತಂತ್ರ್ಯ, ಯಾವುದೇ ಒತ್ತಾಯವಿಲ್ಲದೆ ಮತ್ತು ಒತ್ತಡವಿಲ್ಲದೆ ಇರಬಹುದಾದ ಸ್ವಾತಂತ್ರ್ಯ ಸಿಕ್ಕಿದೆ. ಕುಟುಂಬ ವ್ಯವಸ್ಥೆಯಲ್ಲಿನ ದೌರ್ಜನ್ಯಗಳೇ ಇಂತಹದ್ದೊಂದು ಆಯ್ಕೆಯ ಕಡೆಗೆ ಮುಖ ಮಾಡಿದೆಯೇನೋ ಎಂಬ ಭಾವನೆಯನ್ನು ತರುತ್ತಿದೆ. ಇದರಿಂದ ಸಾಂಪ್ರದಾಯಿಕ ಕೌಟುಂಬಿಕ ಪದ್ಧತಿಯು ಬಿರುಕು ಬಿಟ್ಟಿರುವಂತೆ ಕಂಡುಬಂದರೂ ವ್ಯಕ್ತಿಯ, ಅದರಲ್ಲಿಯೂ ಹೆಣ್ಣಿನ ಜೀವನದಲ್ಲಿನ ಸ್ವಾತಂತ್ರ್ಯಕ್ಕೆ ಒಂದು ಅವಕಾಶದ ಬಾಗಿಲು ತೆರೆದಿದೆ.

ಇದರಲ್ಲಿ ಅನಿಶ್ಚಿತತೆ ಮತ್ತು ಅಭದ್ರತೆಯ ಪ್ರಶ್ನೆ ಇರುವುದು ನಿಜವಾದರೂ ಇಂತಹ ಸವಾಲುಗಳ ಮಧ್ಯದಲ್ಲಿಯೇ ಹೊಸ ಸಂಬಂಧಗಳ, ಅದರಲ್ಲಿಯೂ ಎಂದೂ ಹೆಣ್ಣೇ ಹೊಂದಾಣಿಕೆ ಮಾಡಿಕೊಂಡು ಬದುಕಬೇಕಾದ ಸಂಬಂಧಕ್ಕಿಂತ, ನಿಜವಾದ ಪ್ರಾಮಾಣಿಕ ಸಂಬಂಧಗಳ ಹುಡುಕಾಟಕ್ಕೆ ಅವಕಾಶ ಒದಗಿಸಿದೆ. ಇಲ್ಲಿಯೂ ಕಾನೂನಿನ ಕೈಗಳು ಹೆಣ್ಣಿನ ಜೀವನವನ್ನು, ಅದರಲ್ಲಿಯೂ ಮುಂದಿನ ಸಂತಾನದ ಹೊಣೆ ಹೊರುವ ಜವಾಬ್ದಾರಿ ಇರುವ ಜೀವಕ್ಕೆ ರಕ್ಷಣೆ ಒದಗಿಸುವ ದಿಸೆಯಲ್ಲಿ ಕಾಲಕಾಲಕ್ಕೆ ಹೆಚ್ಚಿನ ನೆರವನ್ನು ಒದಗಿಸಬೇಕಾಗಿದೆ.

ಇದರಂತೆಯೇ ಸಿಂಗಲ್ ಮದರ್/ಸಿಂಗಲ್ ಪೇರೆಂಟ್‌ಗಳ ಸಂಖ್ಯೆ ಹೆಚ್ಚಾಗುತ್ತಿರುವುದು ಇನ್ನೊಂದು ಬೆಳವಣಿಗೆ. ವಿವಾಹ ವಿಚ್ಛೇದನದಿಂದ ಬೇರೆಯಾದ ತಾಯಿಯರು ಅಥವಾ ವೈವಾಹಿಕ ಸಂಬಂಧಗಳ ಹಂಗಿಲ್ಲದೆಯೇ ತಾಯಿಯಾಗಲು ಬಯಸುವವರು, ಇದರ ಮೂಲಕ ಜೈವಿಕವಾಗಿ ಪಡೆಯಬಹುದಾದ ತಾಯ್ತನವನ್ನು ಅನುಭವಿಸುತ್ತಲೇ ಕೌಟುಂಬಿಕ ಸಂಬಂಧಗಳ ಹಂಗು ತೊರೆದ ಮಹಿಳೆಯರು ಇನ್ನೊಂದು ಬಗೆಯ ಜೀವನದ ಹುಡುಕಾಟದಲ್ಲಿದ್ದಾರೆ. ಲಿವಿಂಗ್ ಟುಗೆದರ್ ಆಗಲಿ, ಸಿಂಗಲ್ ಪೇರೆಂಟ್ ಆಗಲಿ ಮಹಿಳೆಯರಿಗೆ ಬದುಕುವ ಆಯ್ಕೆಯ ಹಕ್ಕನ್ನು ಒದಗಿಸುತ್ತಿವೆ. ಇನ್ನೊಂದೆಡೆ ಗಂಡಿನ ನೆಲೆಯಿಂದಲೇ ಹೆಣ್ಣಿನ ಬದುಕಿನ ವ್ಯಾಖ್ಯೆಯನ್ನು ಮಾಡುತ್ತಿದ್ದ ಸಮಾಜವು, ಇಂತಹ ಯೋಚನೆಗಳಿಂದ ಹೊರಬರುವಂತೆ ಆಗುತ್ತಿದೆ.

ಆದರೆ ಇದರಲ್ಲಿ ಅನೇಕ ಭಾವನಾತ್ಮಕ ಹಾಗೂ ಸಾಮಾಜಿಕವಾದ ತಾಕಲಾಟಗಳೂ ಇವೆ. ಮೊದಲನೆಯದಾಗಿ, ಸಮಾಜವನ್ನು ಒಂಟಿಯಾಗಿ ಎದುರಿಸಬೇಕಾದ ಸಮಸ್ಯೆ. ಪರಿಚಿತರೇ ಹೆಚ್ಚು ಆಕ್ರಮಣಗಳನ್ನು ಮಾಡುತ್ತಿರುವ ಅಪರಾಧದ ದಾಖಲೆಗಳಿರುವ ಸಂದರ್ಭದಲ್ಲಿ ಭಾವನಾತ್ಮಕವಾಗಿ ಸಂಬಂಧಗಳನ್ನು ನಿರ್ವಹಿಸುವ ಹೆಚ್ಚಿನ ಜವಾಬ್ದಾರಿಯ ಬಗ್ಗೆ ಎಚ್ಚರ ಬೇಕಾಗುತ್ತದೆ. ಇಲ್ಲದಿದ್ದರೆ, ಒಂಟಿ ಮಹಿಳೆಯರು ಕೊಲೆ ಅಥವಾ ಆತ್ಮಹತ್ಯೆಯ ಪ್ರಕರಣಗಳಿಗೆ ತುತ್ತಾಗುತ್ತಾರೆ. ಸಮೂಹ ಮಾಧ್ಯಮಗಳ ವರದಿಗಳನ್ನು ನೋಡಿದರೆ, ಇವುಗಳ ಸಂಖ್ಯೆ ಹೆಚ್ಚುತ್ತಿರುವುದು ಆತಂಕಕ್ಕೆ ಕಾರಣವಾಗುತ್ತಿದೆ. ಒಂಟಿ ಬದುಕಿನ ಅಭದ್ರತೆಯು ನಿರಂತರ ಭಯದ ವಾತಾವರಣಕ್ಕೆ ದೂಡಿ ಆತ್ಮಹತ್ಯೆಯಂತಹ ಕೃತ್ಯದ ಕಡೆಗೆ ಎಳೆಯುತ್ತದೆ. ಹೊಸ ಬದುಕಿನ ಸಾಧ್ಯತೆಗಳು ಅದರ ಒಡಲಲ್ಲೇ ಹುದುಗಿಸಿ ಕೊಂಡಿರುವ ಇಂತಹ ದುರಂತವನ್ನೂ ಧೈರ್ಯದಿಂದ ಎದುರಿಸಿ, ಸಮಾಜವು ಭಾವನಾತ್ಮಕ ಸಂಬಂಧಗಳನ್ನು ಶೋಷಣೆಯ ಸಾಧನ ಮಾಡಿಕೊಳ್ಳದಂತೆ ಇರುವ ಎಚ್ಚರವನ್ನು ಹೆಣ್ಣು ಬೆಳೆಸಿಕೊಳ್ಳಬೇಕಾಗಿದೆ.

ಇನ್ನೊಂದು ನೆಲೆಯಿಂದ ನೋಡುವುದಾದರೆ ಗಂಡಿನ ದೃಷ್ಟಿಕೋನದಲ್ಲಿಯೂ ಬದಲಾವಣೆಗಳು ಅಗತ್ಯವಾಗಿ ಉಂಟಾಗಬೇಕಾಗಿದೆ. ಸೃಷ್ಟಿಯಲ್ಲಿ ಹೆಣ್ಣು ಮತ್ತು ಗಂಡಿನ ಸಂಬಂಧಗಳು ಅನಿವಾರ್ಯ. ಸಾಮಾಜಿಕ ನೆಲೆಯಲ್ಲಿ ಮಾಡಿಕೊಂಡಿರುವ ವ್ಯತ್ಯಾಸಗಳಿಂದ ಉಂಟಾಗಿರುವ ಸಮಸ್ಯೆಗಳಿಂದ ಹೊರ ಬರಬೇಕಾದಲ್ಲಿ ಗಂಡು ಹೆಣ್ಣಿನ ಸ್ಥಾನವನ್ನು ಗೌರವಿಸುವ, ಅವಳಿಗೂ ತನ್ನಂತೆಯೇ ಬದುಕುವ ಹಕ್ಕಿದೆ ಎಂಬುದನ್ನು ಮಾನಸಿಕವಾಗಿ ಒಪ್ಪಿ ನಡೆಯಬೇಕಾಗಿದೆ. ಗಂಡಿನ ನೆಲೆಯಿಂದಲೂ ಈ ಬದಲಾವಣೆ ಅನಿವಾರ್ಯವಾಗುತ್ತಿರುವ ಸ್ಥಿತಿ ಸಮಾಜದಲ್ಲಿ ನಿರ್ಮಾಣವಾಗುತ್ತಿದೆ. ಇಂತಹ ಬದಲಾವಣೆಗೆ ಪುರುಷ ಸಮಾಜ ಒಪ್ಪಿ ನಡೆದಾಗ ಮಾತ್ರವೇ ಹೆಣ್ಣಿನ ಸ್ಥಿತಿಯಲ್ಲಿಯೂ ವ್ಯತ್ಯಾಸ ಉಂಟಾಗಲು ಸಾಧ್ಯವಾಗುತ್ತದೆ. ಆಗ ಮಾತ್ರ ಆರೋಗ್ಯಕರವಾದ ಸಮಾಜದ ನಿರ್ಮಾಣದಲ್ಲಿ ಇಬ್ಬರೂ ಜೊತೆಯಾಗಿ ನಡೆಯಬಲ್ಲರು.

**ಡಾ॥ ಎಚ್. ಶಶಿಕಲಾ**
ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು – ೫೬೦೦೫೬

# ಹಂಗಿಲ್ಲದ ಹಾಡ ನೆನೆದು

**ಹಾ**ಡೆಂದವರಾರು ಇದಕೆ
ಒಡಲ ನೋವಿನ ಜೇಡ ಕಟ್ಟುವುದಕ್ಕೆ
ಪಟ್ಟ ಪಾಡಿಗೆ ಶಬ್ದದ ರೂಪ
ಒಡಮೂಡಿ ಪದವಾದದ್ದಕ್ಕೆ

ಹಾಡು ಇದ್ದಿರಲಿಲ್ಲ ಆಗ
ಅಜ್ಜನ ಬೆವರಿನೊಳಗೆ

ಕಳೆದ ಅಂಗಿಯೊಳಗಿಂದ ಹೊರಬರುತ್ತಿದ್ದ
ಬೆವರ ವಾಸನೆಯಿತ್ತು
ಧಣಿಗೆ ಮುಜುರೆ ಹೊಡೆದು ಹೊಡೆದು
ಬಾಗಿದ ಬೆನ್ನಿತ್ತು
ಹೊರೆಯ ಹೊತ್ತು ಹೊತ್ತು
ಕುಸಿದ ನಡುವಿತ್ತು

ಹಾಡೆಲ್ಲಿತ್ತು ಅಜ್ಜಿಯ
ಹರಿದ ಸೀರೆಯೊಳಗೆ
ಅವ್ವನ ಹಾಲಿಲ್ಲದ ಬೊಚ್ಚ ಮೊಲೆಯೊಳಗೆ
ಸಾಲದ ಹೊರೆ ಹೊತ್ತ

ಅಪ್ಪನ ನಿಟ್ಟುಸಿರೊಳಗೆ
ಯಾರಿಗಿತ್ತು ಹಾಡಿನ ಹಂಗು
ತುತ್ತು ಕೂಳಿಗೂ ತತ್ವಾರ ಪಡುತ್ತಿದ್ದಾಗ

ಈಗ...
ಗಾಳಿಯಲ್ಲಿ ಅಂಕೆಯಿಲ್ಲದೇ
ತಿರುಗಿದ ಗಾಳಿಪಟ ಎಲ್ಲ
ಕಳೆದುಕೊಂಡಿರುವಾಗ
ಅನಾಯಾಸ ಪದಗಳಲ್ಲಿ
ಮೂಡಿ ಹಾಡಾಗುವ
ಪದವಿ ಪಡೆಯುವ
ಹುನ್ನಾರದ
ಈ ಹಾಡಿಗೆ ಧಿಕ್ಕಾರ !

**ಡಾ॥ ವಾಯ್. ಎಂ. ಯಾಕೊಳ್ಳಿ**
ಉಪನ್ಯಾಸಕ, ಶ್ರೀ ಜಿ. ಜಿ. ಚೋಪ್ರಾ ಸರಕಾರಿ
ಪದವಿ ಪೂರ್ವ ಕಾಲೇಜು, ಸವದತ್ತಿ



# ಕ್ಷ - ಕಿರಣ

ಪ್ರಕಾಶ್ ಎಸ್.

## ಲೋಕಸಭಾ ಚುನಾವಣೆ : ಕನಸುಗಳು












# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ

ಜಿ. ರಾಮಕೃಷ್ಣ

**ಕಾಡುಮೇಡುಗಳಲ್ಲಿ ದೊರೆಯುವ ಮೂಲಿಕೆಗಳು ವೈದ್ಯಕೀಯಕ್ಕೆ ಮೂಲ ಸಾಮಗ್ರಿ. ಅವು ವೈದ್ಯನಿಗೆ ಎಷ್ಟು ಆದರಣೀಯವೋ ಋಗ್ವೇದದ ಕವಿಗೂ ಅಷ್ಟೇ ಆದರಣೀಯ. ಅವುಗಳ ಲಕ್ಷಣಗಳನ್ನು ತಿಳಿದು ಪ್ರಯೋಗ ಮಾಡುವುದು ಪ್ರಾಜ್ಞತ್ವ ಎನಿಸಿಕೊಳ್ಳುತ್ತದೆ. ಶರೀರದಲ್ಲಿ ಉಂಟಾಗಬಹುದಾದ ಅಸಮತೋಲನದ ನಿವಾರಣೆಗೆ ಮೂಲಿಕೆಗಳ ಜ್ಞಾನದಿಂದ ಮಧ್ಯಪ್ರವೇಶ ಮಾಡುವುದು ವೈದ್ಯಕೀಯ ಎನಿಸಿಕೊಳ್ಳುತ್ತದೆ. ಪ್ರಾಜ್ಞನ ವಿವೇಕವು ಎಷ್ಟೇ ಹೆಚ್ಚಿನ ಮಟ್ಟದ್ದಾದರೂ ಅವನ ಮಧ್ಯಪ್ರವೇಶಕ್ಕೆ ಮೂಲಿಕೆಯೇ ಸಾಧನ. ಆದ್ದರಿಂದ ಋಗ್ವೇದದ ಕವಿಗಳಿಗೆ 'ಓಷಧಿಗಳು' ಎಂದರೆ ಪೂಜ್ಯ ಭಾವ. ಅದನ್ನು ಋಗ್ವೇದದ ಒಂದು ಸೂಕ್ತದ ಅಧ್ಯಯನ ಮತ್ತು ಪರಾಮರ್ಶೆಯಿಂದ ತಿಳಿಯಬಹುದು. ಇದು ಪ್ರಸ್ತುತ ಮಾಲಿಕೆಯ ಒಂಭತ್ತನೆಯ ಕಂತು.**

ಋಗ್ವೇದದ ಹತ್ತನೆಯ ಮಂಡಲದಲ್ಲಿರುವ ೯೭ನೆಯ ಸೂಕ್ತಕ್ಕೆ 'ಓಷಧಿ ಸೂಕ್ತ' ಎಂಬ ಹೆಸರಿದೆ. ಸಂಸ್ಕೃತದ 'ಓಷ' ಎಂಬುದರ ಅರ್ಥ ಸುಡುವುದು, ಉರಿತ, ಸೀದುಹೋಗುವುದು ಎಂದು. ಫಲ ಬಿಟ್ಟಮೇಲೆ ಒಣಗುವ ಗಿಡ, ಬಳ್ಳಿ, ಮೊದಲಾದವು 'ಓಷಧಿಗಳು' (ಜಿ. ಎನ್. ಚಕ್ರವರ್ತಿಯವರ ನಿಘಂಟು, ಪು. ೨೧೨-೩). ಚಂದ್ರ ಮತ್ತು ಸೂರ್ಯರಿಗೆ 'ಓಷಧಿಗರ್ಭ' ಎಂಬ ಹೆಸರಿದೆ. ಚಂದ್ರಕಿರಣ ಸಂಪರ್ಕದಿಂದ ಓಷಧಿಗಳು ಉತ್ಪನ್ನವಾಗುತ್ತವೆಂಬ ನಂಬಿಕೆಯಿಂದಾಗಿ ಆ ಹೆಸರು; ಅಂತೆಯೇ, ಸೂರ್ಯನ ಕಿರಣ ಪ್ರವೇಶದಿಂದ ಮಳೆಯ ಮೂಲಕ ಅವು ಉತ್ಪನ್ನವಾಗುತ್ತವೆಂಬ ನಂಬಿಕೆಯಿಂದಾಗಿ ಸೂರ್ಯನೆಂಬ ಅರ್ಥವಿದೆ. ವೈದ್ಯನನ್ನು 'ಓಷಧಿಪತಿ' ಎಂದೂ, ಹಿಮಾಲಯ ಪರ್ವತವನ್ನು 'ಓಷಧಿಪ್ರಸ್ಥ' ಎಂದೂ ಕರೆಯುವುದುಂಟು. ಓಷಧಿ ಸೂಕ್ತದ ಕರ್ತೃ 'ಭಿಷಕ್' ಎಂದು ಅನುಕ್ರಮಣಿಯು ಹೇಳಿದೆ; ಅಂದರೆ, ವೈದ್ಯನು ರಚಿಸಿದ್ದು. ಹಾಗೆಂದು ಹೇಳುವುದೂ ಒಂದೇ, ಕರ್ತೃವು ಯಾರೆಂದು ತಿಳಿಯದು ಎಂದು ಹೇಳುವುದೂ ಒಂದೇ. ಋಗ್ವೇದದ ಅನೇಕ ಸೂಕ್ತಗಳ ಬಗ್ಗೆ ಈ ಮಾತು ನಿಜ. ಬೇರೆ ಹೆಸರುಗಳಿದ್ದಾಗಲೂ ಆ ಹೆಸರಿನವರ ಬಗ್ಗೆ ನಮಗೇನೂ ತಿಳಿಯದು. ವಸಿಷ್ಠ, ವಿಶ್ವಾಮಿತ್ರ, ಅತ್ರಿ, ಭರದ್ವಾಜ, ವಾಮದೇವ, ಮುಂತಾದ ಹೆಸರುಗಳು ಉಕ್ತವಾದಾಗ ಅವರೆಲ್ಲಾ ನಂತರದ ಪುರಾಣಗಳಲ್ಲಿ ಪ್ರಸಿದ್ಧರಾಗಿರುವವರೇ ಎಂದು ನಿರ್ಣಾಯಕವಾಗಿ ಹೇಳಲಾಗುವುದಿಲ್ಲ. ಈ ಅರ್ಥದಲ್ಲಿ ಋಗ್ವೇದ ಸೂಕ್ತಗಳು ಜಾನಪದ ಗೀತೆಗಳಿದ್ದಂತೆಯೇ ಎನ್ನಬಹುದು. ಯಜ್ಞ ಮಾಡಲು ಹೊರಟವನು 'ದೀಕ್ಷೆ' ಪಡೆಯುತ್ತಾನೆ, ಆದ್ದರಿಂದ ಅವನು ದೀಕ್ಷಿತ. ಆ ದೀಕ್ಷಿತನಿಗೆ ಯಜ್ಞದ ಅವಧಿಯಲ್ಲಿ ಜ್ವರವೋ ಇನ್ನೊಂದೋ ಕಾಣಿಸಿಕೊಂಡರೆ ಪ್ರಸ್ತುತ ಸೂಕ್ತದಿಂದ ಅದನ್ನು ನಿವಾರಿಸಿಕೊಳ್ಳಬಹುದಂತೆ. ಈ 'ಅಂತೆ'ಗೆ ಆಧಾರವೆಂದರೆ ಆಶ್ವಲಾಯನ ಶ್ರೌತ ಸೂತ್ರ (೬.೯). ಸೂಕ್ತವು ತಾಪದ ನಿವಾರಣೆ ಮಾಡುತ್ತದೋ, ಅಥವಾ ಪ್ರಯೋಗಿಸಲಾದ ಓಷಧಿಗಳು ನಿವಾರಿಸುತ್ತವೋ ಎಂಬುದು ಸಂಶಯದ ವಿಷಯವಲ್ಲ. ವೈದ್ಯಕೀಯದಲ್ಲಿ ರೋಗಿಯನ್ನು ಗುಣಪಡಿಸಲು ತಿಳಿವಳಿಕಸ್ಥ ವೈದ್ಯನು ಮಧ್ಯಪ್ರವೇಶ ಮಾಡುವುದು ಓಷಧಿಗಳ ಪ್ರಯೋಗದ ಮೂಲಕವೇ.

ಋಗ್ವೇದದ ಕವಿಗೆ ಓಷಧಿಗಳು (ವನಸ್ಪತಿ ಅಥವಾ ಮೂಲಿಕೆಗಳು) ಅತಿಪುರಾತನವಾದವು, ದೇವತೆಗಳಿಂದ ಮೂರು ಯುಗಗಳ ಹಿಂದೆಯೇ ಸೃಷ್ಟಿಸಲ್ಪಟ್ಟವು. ನಾಲ್ಕನೆಯ ಕಲಿಯುಗದಲ್ಲಿ ಏನೂ ಸೃಷ್ಟಿಯಾಗಲಿಲ್ಲವೇ, ಎಂಬ ಪ್ರಶ್ನೆಯನ್ನು ಹಾಕಿಕೊಂಡು ಸಾಯಣನು 'ಅದಿನ್ನೂ ಈಚಿನದ್ದಾದ್ದರಿಂದ ಅದನ್ನು ಎತ್ತಿ ಹೇಳಿಲ್ಲ' ಎಂಬ ಸಮಾಧಾನ ಹೇಳಿಕೊಳ್ಳುತ್ತಾನೆ; ಪರ್ಯಾಯವಾಗಿ 'ಅವು ವಸಂತ, ವರ್ಷ ಮತ್ತು ಶರದೃತುಗಳಲ್ಲಿ ಅಸ್ತಿತ್ವಕ್ಕೆ ಬರುತ್ತವೆ' ಎನ್ನುತ್ತಾನೆ. ಓಷಧಿಗಳು ೧೦೭ ಸ್ಥಾನಗಳಲ್ಲಿ ಬಣ್ಣಗಳಿಂದ ತುಂಬಿರುತ್ತವೆ; ಅವನ್ನು ಕವಿಯು







ಧ್ಯಾನಿಸುತ್ತಾನೆ. ನಾವು ‘ನೂರಾರು’ ಎನ್ನುವ ಹಾಗೆ ಇಲ್ಲಿ ೧೦೭ ಎನ್ನಲಾಗಿದೆ; ಅಂದರೆ, ಅಸಂಖ್ಯ ಸ್ಥಾನಗಳಲ್ಲಿ ಅವು ಇರುತ್ತವೆ. (೧೦.೯೭.೧ : ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಃ ತ್ರಿಯುಗಂ ಪುರಾ। ಮನ್ಯೈ ನು ಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ॥). ಎರಡನೆಯ ಮಂತ್ರದಲ್ಲಿ ಮತ್ತೆ ಇದನ್ನು ಒತ್ತಿ ಹೇಳುತ್ತಾ ಓಷಧಿಗಳನ್ನು ಕವಿಯು ಸಂಬೋಧಿಸುತ್ತಾನೆ : “ಹೇ ತಾಯೆ, ನಿಮ್ಮ ಸ್ಥಾನಗಳು ನೂರು; ನೀನು ಹುಟ್ಟುವ ಜಾಗಗಳು ಸಾವಿರಾರು (ಅಂದರೆ, ಅಪರಿಮಿತ). ನಿನ್ನ ಕ್ರಿಯೆ ಅಥವಾ ಪರಿಮಾಣ ಶಕ್ತಿಯೂ ಅಷ್ಟೇ ಅಪರಿಮಿತ. ನೀವು ನನ್ನನ್ನು ಅ–ರೋಗಿಯನ್ನಾಗಿ ಮಾಡಿ” (೨ : ಶತಂ ವೋ ಅಂಬ ಧಾಮಾನಿ ಸಹಸ್ರಮುತ ವೋ ರುಹಃ। ಅಧಾ ಶತಕ್ರತ್ವೋ ಯೂಯಮಿಮಂ ಮೇ ಅಗದಂ ಕೃತ॥). ತಾಯಿ ಸಮಾನವಾದ ರೋಗನಿವಾರಕ ಓಷಧಿಗಳು ರೋಗಿಯ ಬಗ್ಗೆ ಎಷ್ಟು ಕಾಳಜಿ ವಹಿಸಬೇಕೆಂದರೆ, ಆಶ್ಚರ್ಯವೆನಿಸುವಷ್ಟರ ಮಟ್ಟಿಗೆ ಅವು ರೋಗಿಯನ್ನು ಕಂಡರೆ ಹರ್ಷಿಸಬೇಕು; ರೋಗಿಗೆ ಉಪಯುಕ್ತನಾಗಬಲ್ಲೆನಲ್ಲಾ, ಗುಣಪಡಿಸಬಹುದಲ್ಲಾ, ಎಂದು. ಓಷಧಿಗಳು ಫಲಪುಷ್ಪಗಳನ್ನು ಹೊಂದಿರುತ್ತವೆ. ಅವು ಕುದುರೆಗಳಿದ್ದಂತೆ, ಏಕೆಂದರೆ ರೋಗವನ್ನು ಜಯಿಸಿ ಓಡುತ್ತವೆ. ಅಂದರೆ, ರೋಗನಿವಾರಣೆಯ ನಂತರ ಅವಕ್ಕೆ ಕೆಲಸವಿಲ್ಲ (೩ : ಓಷಧೀಃ ಪ್ರತಿ ಮೋದಧ್ವಂ ಪುಷ್ಪವತೀಃ ಪ್ರಸೂವರೀಃ। ಅಶ್ವಾಇವ ಸಜಿತ್ವರೀಃ ವೀರುಧಃ ಪಾರಯಿಷ್ಣ್ವಃ॥). ಋಗ್ವೇದದ ಈ ಮಂತ್ರಕ್ಕೆ ಸಂಬಂಧಿಸದ ಒಂದು ಪ್ರಸ್ತಾಪವು ಅಸಂಗತವೆನಿಸದು : ನಮ್ಮಲ್ಲಿ ಒಂದು ಮಾತನ್ನು ಆಗಾಗ್ಗೆ ಉದ್ಧರಿಸುವುದುಂಟು : ಉಪಾಧ್ಯಾಯರು ಮತ್ತು ವೈದ್ಯರು ಅವರ ಕೆಲಸವು ಮುಕ್ತಾಯವಾದ ನಂತರ ಶುದ್ಧ ಅಪ್ರಯೋಜಕರು, ಎಂದು (ಉಪಾಧ್ಯಾಯಾಶ್ಚ ವೈದ್ಯಾಶ್ಚ ಕಾರ್ಯಾಂತೇ ಅಪ್ರಯೋಜಕಾಃ). ಅಂದರೆ, ರೋಗ ಗುಣವಾದನಂತರ ವೈದ್ಯನ ಬಳಿ ಏನು ಕೆಲಸ ಅಥವಾ ಕಲಿತಾದ ಮೇಲೆ ಮೇಷ್ಟರ ಬಳಿ ಏನು ಕೆಲಸ, ಎಂದರ್ಥ. ಇದನ್ನು ತಪ್ಪಾಗಿ ವ್ಯಾಖ್ಯಾನಿಸುತ್ತಾರೆ, ವೈದ್ಯರು ಮತ್ತು ಉಪಾಧ್ಯಾಯರು ವ್ಯವಹಾರ ಚತುರರಲ್ಲ, ಎಂದು! ಅವರ ಪರಿಣತಿಯನ್ನುಳಿದು ಅವರಿಗೆ ಬೇರೇನೂ ತಿಳಿಯದು, ಎಂದು ಇದರರ್ಥ. ಸ್ಟಾಕ್ ಮಾರ್ಕೆಟ್‌ನಲ್ಲಿ ಹಣ ತೊಡಗಿಸುವುದರಲ್ಲೂ ಇವರಿಗೆ ನೈಪುಣ್ಯವಿದೆಯೆಂಬುದು ಆಧುನಿಕ ಸನ್ನಿವೇಶವು ತಿಳಿಸುತ್ತದೆಯಲ್ಲವೆ?

ಓಷಧಿಗಳು ತಾಯಿ ಇದ್ದಂತೆ ಎಂಬುದನ್ನು ಮತ್ತೆ ಉಚ್ಚರಿಸುತ್ತಾ ೪ನೆಯ ಮಂತ್ರವು ಓಷಧಿಗಳನ್ನು ಬಳಸಿ ರೋಗಿಯನ್ನು ಗುಣಮುಖ ಮಾಡುವ ವೈದ್ಯನಿಗೆ ಏನು ಕೊಟ್ಟರೂ ಕಡಿಮೆಯೇ ಎಂಬ ಭಾವವನ್ನು ಪ್ರಕಟಿಸುತ್ತದೆ; ಕುದುರೆ, ಹಸು, ಬಟ್ಟೆ, ಅಷ್ಟೇ ಏಕೆ, ಕಡೆಗೆ ತನ್ನನ್ನು ತಾನೆ ಕೊಟ್ಟುಕೊಳ್ಳುವುದು ಸಹ ಯೋಗ್ಯವಾಗಿರುತ್ತದೆ (೪ : ಓಷಧೀರಿತಿ ಮಾತರಸ್ತದ್ವೋ ದೇವೀರುಪ ಬ್ರುವೇ। ಸನೇಯಮಶ್ವಂ ಗಾಂ ವಾಸ ಆತ್ಮಾನಂ ತವ ಪೂರುಷ॥). ಅಂದರೆ, ವೈದ್ಯಕೀಯವು ಅಷ್ಟು ಪ್ರಶಸ್ತವಾದುದು ಮತ್ತು ಅಗತ್ಯವಾದುದು. ಅದರಲ್ಲಿ ನಿಷ್ಣಾತನಾದವನು ಬಹು ಆದರಣೀಯ. ಮುಂದಿನ ಮಂತ್ರದಲ್ಲಿ ಓಷಧಿಗಳು ಎಲ್ಲೆಲ್ಲಿ ಲಭ್ಯವೆಂಬುದನ್ನು ಪ್ರಸ್ತಾಪಿಸಲಾಗಿದೆ. ಚರಕ ಸಂಹಿತೆಯ ಹೇಳಿಕೆಯಂತೆ ಔಷಧವಾಗಿ ಉಪಯೋಗಕ್ಕೆ ಬಾರದಂತಹದ್ದೇನೂ ಲೋಕದಲ್ಲಿಲ್ಲ (೧.೨೭.೩೩೦ : ನ ಅನೌಷಧಂ ಕಿಂಚಿತ್). ಋಗ್ವೇದ ಸೂಕ್ತದ ನಿಲುವೂ ಅದೇ : ಓಷಧಿಗಳು ಅಶ್ವತ್ಥ ವೃಕ್ಷದಲ್ಲಿವೆ, ಬೇರೆ ಬೇರೆ ಎಲೆಗಳಲ್ಲಿವೆ ಮತ್ತು ಗೋವುಗಳಲ್ಲಿವೆ. ಸಸ್ಯದ ಎಲ್ಲ ಭಾಗಗಳೂ ವೈದ್ಯನಿಗೆ ಉಪಯುಕ್ತ ಮತ್ತು ಪ್ರಾಣಿಗಳು ಸಹ ಓಷಧಿಗಳನ್ನು ನೀಡುತ್ತವೆ (೫ : ಅಶ್ವತ್ಥೇ ವೋ ವಿಷದನಂ ಪರ್ಣೇ ವೋ ವಸತಿಷ್ಕೃತಾ। ಗೋಭಾಜ ಇತ್ಕಿಲ ಅಸಥ ಯತ್ ಸನವಥ ಪೂರುಷಂ॥).

ಇಷ್ಟನ್ನು ಹೇಳಿದ ನಂತರ ಬರುವ ಮಂತ್ರ (೧೦.೯೭.೬) ಹೀಗಿದೆ : ಯತ್ರೌಷಧೀಃ ಸಮಗ್ಮತ ರಾಜಾನಃ ಸಮಿತೌ ಇವ। ವಿಪ್ರಃ ಸ ಉಚ್ಯತೇ ಭಿಷಕ್ ರಕ್ಷೋಹಾ ಅಮೀವಚಾತನಃ॥ ಇದರ ಸ್ಥೂಲಾರ್ಥ ಇದು : ಸಮುದಾಯದ ನಾಯಕರು ಸಭೆ–ಸಂಗ್ರಾಮಗಳಲ್ಲಿ ಒಟ್ಟಾಗಿರುವಂತೆ “ಎಲ್ಲಿ ಓಷಧಿಗಳು ತುಂಬಿಕೊಂಡಿರುತ್ತವೋ ಅಲ್ಲಿ ವಾಸಿಸುವ ಪ್ರಾಜ್ಞನು ವೈದ್ಯನೆನಿಸಿಕೊಳ್ಳುತ್ತಾನೆ. ಅವನು ದುಷ್ಟವಾದುದನ್ನು ನಾಶಗೊಳಿಸುತ್ತಾನೆ, ರೋಗವನ್ನು ನಾಶಗೊಳಿಸುತ್ತಾನೆ.” ವೈದಿಕ ಸಮಾಜವು ಗಣ ಸಮಾಜ; ಆದ್ದರಿಂದ ಅಲ್ಲಿ ರಾಮಾಯಣ–ಮಹಾಭಾರತಗಳಲ್ಲಿರುವಂತೆ ‘ರಾಜ’ ಎನಿಸಿಕೊಂಡವನು ಯಾರೂ ಇರುವುದಿಲ್ಲ. ಅಲ್ಲಿ ರಾಜನೆಂದರೆ ಬುಡಕಟ್ಟು ಸಮುದಾಯದಲ್ಲಿ ಆಯ್ಕೆಗೊಂಡಿರುವ ನಾಯಕ, ಅಷ್ಟೆ. ಪಂಗಡದ ಆಗುಹೋಗುಗಳೆಲ್ಲಾ ಸದಸ್ಯರ ಸಮಿತಿಯಲ್ಲೇ ತೀರ್ಮಾನವಾಗುವಂಥ ವ್ಯವಸ್ಥೆ ಅದು. ಗಣಸಮಿತಿಯಲ್ಲಿ ಗಣದ ನಾಯಕರು ಕೂಡಿಕೊಳ್ಳುವಂತೆ ಓಷಧಿಗಳು ಒಂದು ಪ್ರದೇಶದಲ್ಲಿ ಕೂಡಿಕೊಳ್ಳುತ್ತವೆ. ನಾಯಕರಿಲ್ಲದ ಸಮಿತಿ ಇಲ್ಲ; ಅಂತೆಯೇ ಓಷಧಿಗಳಿಲ್ಲದ ಪ್ರದೇಶವಿಲ್ಲ. ತನ್ನ ಕಸುಬಿಗೆ ಮೂಲಾಧಾರವಾದ ಓಷಧಿಗಳಿರುವೆಡೆ ವೈದ್ಯನಿರುತ್ತಾನೆ, ಅದೇ ಅವನ ತಾಣ. ಮಂತ್ರದಲ್ಲಿ ‘ವಿಪ್ರಃ’ ಎಂಬ ಪದ ಇದೆ. ಅದಕ್ಕೆ ಈಗಿನ ರೂಢಿಯಲ್ಲಿ ‘ಬ್ರಾಹ್ಮಣ’ (ವರ್ಣದವನು ಅಥವಾ ಜಾತಿಯವನು) ಎಂಬರ್ಥವಿದೆ. ಸಾಯಣನ ಕಾಲಕ್ಕಾಗಲೆ ಆ ಅರ್ಥವು ಬಂದಿದ್ದಿತು, ಆದರೆ ಋಗ್ವೇದದಲ್ಲಿ ಅದಕ್ಕೆ ‘ತಿಳಿದವನು’ ಅಥವಾ ಪ್ರಾಜ್ಞ ಎಂಬರ್ಥವಿದೆ. ಧರ್ಮಶಾಸ್ತ್ರಗಳು ವೈದ್ಯನನ್ನು ನಿಂದಿಸುವುದು ಮತ್ತು ಋಗ್ವೇದವು ಅವನನ್ನು ಪ್ರಾಜ್ಞನೆನ್ನುವುದು, ಇವೆರಡನ್ನೂ ಅಕ್ಕಪಕ್ಕದಲ್ಲಿಟ್ಟು ನೋಡಿದರೆ ಧರ್ಮಶಾಸ್ತ್ರವು ವೇದದ ಇಂಗಿತವನ್ನು ಬುಡಮೇಲು ಮಾಡಿರುವುದು ಸ್ಪಷ್ಟವಾಗಿ ತಿಳಿಯುತ್ತದೆ.

ಏಳನೆಯ ಮಂತ್ರದಲ್ಲಿ ಓಷಧಿಗಳ ನಾಲ್ಕು ವಿಧಗಳನ್ನು ಹೆಸರಿಸಲಾಗಿದೆ : ಅಶ್ವವತೀ, ಸೋಮವತೀ, ಊರ್ಜಯಂತೀ ಮತ್ತು ಓಜಸ್. ಅವುಗಳ ಪ್ರತ್ಯೇಕ ಲಕ್ಷಣಗಳನ್ನೇನೂ ಅಲ್ಲಿ ನಮೂದಿಸಿಲ್ಲ; ಆದರೆ ಪ್ರಾಬಲ್ಯ, ಸ್ತಿಮಿತತೆ, ಶಕ್ತಿವರ್ಧನ ಮತ್ತು ಕಾಂತಿ ವರ್ಧನ ಲಕ್ಷಣಗಳಿರಬಹುದೆಂದು ಊಹಿಸಬಹುದು. ಅವನ್ನು ರೋಗನಿವಾರಣೆಗಾಗಿ (ಅರಿಷ್ಟತಾತಯೇ) ಸ್ಮರಿಸುವುದಾಗಿ ಕವಿಯು ಹೇಳುತ್ತಾನೆ. ಓಷಧಿಗಳು ಹೇಗೆ ಪ್ರಕಟಗೊಳ್ಳುತ್ತವೆಂಬುದು ಮುಂದಿನ ಮಂತ್ರದ ವಿಚಾರ : ಹಸುಗಳು ಕೊಟ್ಟಿಗೆಯಿಂದ ಹೊರ ಬರುವಂತೆ ಓಷಧಿಯ ಬಲವು ಹೊರಬಂದು ರೋಗವನ್ನು ಶಮನಗೊಳಿಸುತ್ತದೆ; ತನ್ನ ಶಕ್ತಿಯನ್ನು ಒಳಗೇ ಅದುಮಿಟ್ಟುಕೊಳ್ಳದೆ ಅದನ್ನು ರೋಗಿಗಾಗಿ ಹೊರಬಿಡುತ್ತದೆ (೮ : ಉಚ್ಛುಷ್ಮಾ ಓಷಧೀನಾಂ

ಗಾವೋ ಗೋಷ್ಠಾದಿವ ಈರತೇ। ಧನಂ ಸನಿಷ್ಯಂತೀನಾಂ ಆತ್ಮಾನಂ ತವ ಪೂರುಷ॥). ಕವಿಗೆ ಸಹಜವಾಗಿಯೇ ಇದೊಂದು ಕುತೂಹಲವನ್ನು ಕೆರಳಿಸುವ ಸಂಗತಿ. ಒಂದೊಂದು ಓಷಧಿಗೂ ಪ್ರತ್ಯೇಕವಾದ ಶಕ್ತಿಗಳಿರುವುದೇಕೆ? ಆ ಶಕ್ತಿ ಹೇಗೆ ಅವುಗಳಲ್ಲಿ ಪ್ರತಿಷ್ಠಿತಗೊಂಡಿದೆ? ಜೀವರಸಾಯನಶಾಸ್ತ್ರದಲ್ಲಿ ಪರಿಣತರಾಗಿರುವವರಿಗೆ ಇಂದಿಗೂ ಈ ಪ್ರಶ್ನೆಯು ಕಾಡುತ್ತಿದ್ದರೆ ಆಶ್ಚರ್ಯವಿಲ್ಲ. ಪದಾರ್ಥಗಳು ತಮಗೆ ವಿಶಿಷ್ಟವಾದ ಲಕ್ಷಣಗಳನ್ನು ಹೊಂದಿರುತ್ತವೆಂಬ ಕಾರಣಕ್ಕೆ ವೈಶೇಷಿಕ ದರ್ಶನವು 'ವಿಶೇಷ' ಎಂಬುದನ್ನು ಒಂದು ಪ್ರತ್ಯೇಕ ಪದಾರ್ಥವೆಂದು ಪರಿಗಣಿಸಿದೆ. ಚರಕ ಸಂಹಿತೆಯು ಅದಕ್ಕೆ ಒತ್ತುಕೊಟ್ಟು ವೈದ್ಯಕೀಯದಲ್ಲಿ ಪ್ರತಿಯೊಂದು ಪದಾರ್ಥದ 'ವಿಶೇಷ'ವನ್ನು ಗುರುತಿಸುವುದು ಮೂಲಭೂತ ಅಂಶವೆಂದು ಪ್ರತಿಪಾದಿಸಿದೆ. ಓಷಧಿ ಸೂಕ್ತದ ಒಂಭತ್ತನೆಯ ಮಂತ್ರವು ಇದನ್ನೇ ಸ್ಥೂಲವಾಗಿ ನಿರೂಪಿಸುತ್ತದೆ. ಓಷಧಿಗಳ ತಾಯಿ ಯಾವುದು? 'ಇಷ್ಕೃತಿ' ಎಂಬುದು ಉತ್ತರ. ಓಷಧಿಯ ಯಾವ ವಿಶೇಷ ಗುಣವು ಯಾವ ವಿಶಿಷ್ಟ ರೋಗಕ್ಕೆ ಶಮನವೋ ಅದೇ ಓಷಧಿಯ ಮಾತೆ; ಅಂದರೆ, ರೋಗನಿವಾರಕ ಲಕ್ಷಣವು ಓಷಧಿಯ ಮಾತೆ. 'ಇಷ್ಕೃತಿ' ಎಂದರೆ ಇಲ್ಲದಂತೆ ಮಾಡುವುದು, ನಿಷ್ಕರಣ (ಇಷ್ಕೃತಿಃ ನಾಮ ವೋ ಮಾತಾ). ಓಷಧಿಯು ವಸ್ತುನಿಷ್ಠವಾಗಿ ತನ್ನ ಕ್ರಿಯೆಯನ್ನು ಪೂರೈಸುವುದು ಅದರ 'ವಿಶೇಷ' ಲಕ್ಷಣದಿಂದ. ಪೂರ್ಣಾರ್ಥದಲ್ಲಿ ಇದು ವೈಜ್ಞಾನಿಕ ಪ್ರಕ್ರಿಯೆಯಲ್ಲಿನ ಕಾರ್ಯ–ಕಾರಣ ಭಾವವನ್ನು ಒಳಗೊಂಡಿಲ್ಲದಿದ್ದರೂ ಅದರ ಛಾಯೆಯನ್ನು ಹೊಂದಿದೆ. 'ಇಷ್ಕೃತಿ'ಯನ್ನು ಮಾತೆಯನ್ನಾಗಿ ಹೊಂದಿರುವ ಓಷಧಿಗಳು 'ನಿಷ್ಕೃತಿ'ಯ ಲಕ್ಷಣವನ್ನು ಹೊಂದಿವೆ, ಅಂದರೆ ಅವು ರೋಗವನ್ನು ಇಲ್ಲದಂತೆ ಮಾಡುತ್ತವೆ (ಅತೋ ಯೂಯಂ ಸ್ಥ ನಿಷ್ಕೃತೀಃ॥). ಹಕ್ಕಿಯಂತೆ ಹಾರಿಬಂದು ಅವು ರೋಗಿಯನ್ನು ನಿರೋಗಿಯನ್ನಾಗಿ ಮಾಡುತ್ತವೆ (ಸೀರಾಃ ಪತತ್ರಿಣೀಃ ಸ್ಥನ ಯದಾಮಯತಿ ನಿಷ್ಕೃಥ). ಇಡೀ ಮಂತ್ರದಲ್ಲಿ ರೂಪಕಗಳ ಮಾಲೆಯನ್ನೇ ನಾವು ಕಾಣುತ್ತೇವೆ; ಕವಿಯು ಪದ್ಯವನ್ನು ಹಾಗೆ ಹೆಣೆದಿದ್ದಾನೆ.

ಒಬ್ಬ ಕಳ್ಳನು ಗುಂಪೊಂದನ್ನು ಸುತ್ತುವರಿದು ಅದರ ಆಕ್ರಮಣ ನಡೆಸುತ್ತಾನೆ; ಹಾಗೆಯೇ ಓಷಧಿಗಳು ಎಲ್ಲೆಲ್ಲೂ ವ್ಯಾಪಿಸಿದ್ದು ರೋಗಗಳನ್ನೆಲ್ಲಾ ಆಕ್ರಮಿಸುತ್ತವೆ. (ವೈದಿಕ ಸಮಾಜದ ಜೂಜುಗಾರನೊಬ್ಬನನ್ನು ಈ ಹಿಂದೆಯೇ ನೋಡಿದ್ದೇವೆ. ಈಗ ಆ ಸಮಾಜವನ್ನು ಆಕ್ರಮಿಸುವಂತಹ ಕಳ್ಳನನ್ನು ನೋಡುತ್ತಿದ್ದೇವೆ.) ಇದು ಹತ್ತನೆಯ ಮಂತ್ರದ ಭಾವ. ಔಷಧವಲ್ಲದ ಪದಾರ್ಥವಾವುದೂ ಇಲ್ಲವೆಂಬ ಚರಕ ಸಂಹಿತೆಯ ಮಾತಿನ ಪೂರ್ವರಂಗವಿದೆಂದು ಭಾಸವಾಗುತ್ತದೆ. ಮುಂದಿನ ಮಂತ್ರವು ಅದಕ್ಕೊಂದು ಉಪಮೆಯನ್ನು ಕಟ್ಟಿಕೊಟ್ಟಿದೆ. ಬುಡಕಟ್ಟು ಜೀವನದ ಅನುಭವದಿಂದ ದೊರೆತ ಹೋಲಿಕೆ ಅದು. ಬೇಟೆಗಾರನ ಬಾಣಕ್ಕೆ ಸಿಲುಕಿ ಪಕ್ಷಿಯು ಪ್ರಾಣ ಕಳೆದುಕೊಳ್ಳುವಂತೆ ಪ್ರಬಲವಾದ ಓಷಧಿಯ ಪ್ರಭಾವದಿಂದಾಗಿ ರೋಗವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ ಮತ್ತು ರೋಗಿಯನ್ನು ಶಕ್ತಿಯುತನನ್ನಾಗಿ ಮಾಡುತ್ತದೆ. ಮೃತ್ಯುವು ಜೀವವನ್ನು ಅಪಹರಿಸುವಂತೆ (ಬೇಟೆ–ಹಕ್ಕಿ) ಓಷಧಿಯು ರೋಗವನ್ನು ಅಪಹರಿಸುತ್ತದೆ. ಇಲ್ಲಿಯ ಕಲ್ಪನೆ ಸೊಗಸಾಗಿದೆ: ಜೀವವನ್ನು ಸಾಯಿಸುವ ರೋಗವು ತಾನೇ ಸಾಯುತ್ತದೆ (೧೧: ಯದಿಮಾ ವಾಜಯನ್ ಅಹಂ ಓಷಧೀಃ ಹಸ್ತೇ ಆದಧೇ। ಆತ್ಮಾ ಯಕ್ಷ್ಮಸ್ಯ ನಶ್ಯತಿ ಪುರಾ ಜೀವಗೃಭೋ ಯಥಾ॥). ಓಷಧಿಗಳ ಪರಿಣಾಮವು ಸಂಭವಿಸುವುದು ಹೇಗೆ? ಅಂದರೆ, ರೋಗವನ್ನು ಗುರುತಿಸಿ ಓಷಧಿಯು ಅದನ್ನು ಹಿಮ್ಮೆಟ್ಟಿಸುವುದು ಹೇಗೆ? ಶರೀರದ ಯಾವುದೋ ಒಂದು ಭಾಗವನ್ನು ಕೇಂದ್ರೀಕರಿಸಿ ಅದು ಪರಿಣಾಮವನ್ನುಂಟು ಮಾಡುತ್ತದೆಯೆ? ಸೂಕ್ತದ ೧೨ನೆಯ ಮಂತ್ರವು ಅದನ್ನು ಕುರಿತು ವ್ಯಾಖ್ಯಾನಿಸಿದೆ: ಓಷಧಿಗಳು ಒಂದೊಂದು ಅಂಗವನ್ನೂ, ಒಂದೊಂದು ಮಣಿಕಟ್ಟನ್ನೂ ಪ್ರವೇಶಿಸಿ ರೋಗವನ್ನು ಹಿಂಡಬೇಕು, ಆಗಲೇ ರೋಗದ ಉಪಶಮನವು ಸಾಧ್ಯ; ಉಪದ್ರವ ಉಂಟುಮಾಡುವವರನ್ನು ಸಮುದಾಯದ ನಾಯಕನು ಪದೇ ಪದೇ ಹಿಮ್ಮೆಟ್ಟಿಸುವಂತೆ ಓಷಧಿಗಳು ಪ್ರತಿ ಅಂಗವನ್ನೂ ಪ್ರವೇಶಿಸಿ ರೋಗವನ್ನು ದೂರಮಾಡಬೇಕು (೧೨: ಯಸ್ಯೌಷಧೀಃ ಪ್ರಸರ್ಪಥ ಅಂಗಮಂಗಂ ಪರುಷ್ಪರುಃ। ತತೋ ಯಕ್ಷ್ಮಂ ವಿ ಬಾಧಧ್ವ ಉಗ್ರೋ ಮಧ್ಯಮಶೀರಿವ॥). ಓಷಧಿಗಳು ಹೀಗೆ ಮಾಡಿದಾಗ ಚಾಷ ಮತ್ತು ಕಿಕಿದೀವಿ (ಕಿಕೀದಿವಿ) ಪಕ್ಷಿಗಳು ಬೇಗನೆ ಕೆಳಕ್ಕುರುಳಿ ಬೀಳುವಂತೆ ರೋಗವು ಉರುಳಿ ಬೀಳಬೇಕು; ಅದೂ ವೇಗವಾಗಿ ಬೀಸುವ ಗಾಳಿಯ ರಭಸದಷ್ಟು ಶೀಘ್ರವಾಗಿ ಬೀಳಬೇಕು (ಇವು ಶಕುನದ ಹಕ್ಕಿಗಳೆಂದು ಪ್ರಸಿದ್ಧವಾದ ಹಂಗನ ಹಕ್ಕಿಗಳು). ಇದು ೧೩ನೆಯ ಮಂತ್ರದ ಸಾರಾಂಶ. ಮುಂದಿನ ಮಂತ್ರದಲ್ಲಿ ವಿವಿಧ ಓಷಧಿಗಳು ಪರಸ್ಪರ ಒಗ್ಗೂಡಿ, ತಮ್ಮ ಶಕ್ತಿಯನ್ನು ಒಟ್ಟಾಗಿಸಿ, ರೋಗವನ್ನು ನಾಶಪಡಿಸಬೇಕೆಂಬ ಆಶಯವಿದೆ. ಬೇರೆ ಬೇರೆ ಮೂಲಿಕೆಗಳ 'ವಿಶೇಷ' ಲಕ್ಷಣಗಳ ಬಗ್ಗೆ ಋಗ್ವೇದದ ಕವಿಗೆ ತಿಳಿವಿದೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಹೀಗೆ ಒಗ್ಗೂಡಿ ತನ್ನನ್ನು ಓಷಧಿಗಳು ರಕ್ಷಿಸಬೇಕೆಂಬುದು ರೋಗಿಯ ಪ್ರಾರ್ಥನೆ (೧೪: ಅನ್ಯಾ ವೋ ಅನ್ಯಾಂ ಅವತು ಅನ್ಯಾ ಅನ್ಯಸ್ಯಾಃ ಉಪಾವತ। ತಾಃ ಸರ್ವಾಃ ಸಂವಿಧಾನಾ ಇದಂ ಮೇ ಪ್ರಾವತಾ ವಚಃ॥). ಓಷಧಿ ಸೂಕ್ತವು ಭಾರತದ ಪ್ರಾಚೀನ ವೈದ್ಯಕೀಯ ಶಾಸ್ತ್ರದ ಆರಂಭಿಕ ಮೆಟ್ಟಿಲು ಎಂದರೆ ತಪ್ಪಾಗುವುದಿಲ್ಲ. ಮುಂದಿನ ಮಂತ್ರವು ಇಂದಿನ ಪುರೋಹಿತರ ಬಾಯಲ್ಲಿ ಆಗಾಗ್ಗೆ ಬರುತ್ತದೆ: ಉದಾಹರಣೆಗೆ, ಯಾವುದೋ ಆಚರಣೆಯಲ್ಲಿ ತೆಂಗಿನಕಾಯಿಯನ್ನಿಟ್ಟು ಪೂಜಿಸುವಾಗ. ಋಗ್ವೇದದ ಕವಿಯ ದೃಷ್ಟಿಯಲ್ಲಿ ಹಾಗೆ ನಿರ್ದಿಷ್ಟವಾಗಿ ಯಾವೊಂದು ಕಾಯಿ ಅಥವಾ ಹಣ್ಣೂ ಇಲ್ಲ. ಸಸ್ಯಪ್ರಪಂಚದಲ್ಲಿ ಯಾವೆಲ್ಲಾ ಫಲಪುಷ್ಪಗಳನ್ನು ಉಳ್ಳವೋ ಮತ್ತು ಯಾವೆಲ್ಲಾ ಫಲಪುಷ್ಪಗಳಿಲ್ಲದವು ಇವೆಯೋ, ಅವೆಲ್ಲಾ ಬೃಹಸ್ಪತಿಯ ಉತ್ಪನ್ನಗಳೆಂಬುದು ಕವಿಯ ಕಾಣ್ಕೆ. ಅಂದರೆ, ಯಾವ ಸಸ್ಯವೂ ನಿಕೃಷ್ಟವಾದುದಲ್ಲ, ಯಾವುದೂ ಓಷಧಿಯಾಗಲಾರದಂತಹ ಲಕ್ಷಣವನ್ನು ಹೊಂದಿಲ್ಲ. ಅವೆಲ್ಲವೂ ರೋಗವನ್ನು ಪರಿಹರಿಸಬಲ್ಲಂಥವೇ (೧೫: ಯಾಃ ಫಲಿನೀಃ ಯಾಃ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ। ಬೃಹಸ್ಪತಿ ಪ್ರಸೂತಾಃ ತಾಃ ನಃ ಮುಂಚಂತು ಅಂಹಸಃ). ಋಗ್ವೇದದ ವರುಣನು ಸಮಷ್ಟಿಯ ನೈತಿಕತೆಯನ್ನು ಕಾಯುವಂಥವನೆಂದು ಈಗಾಗಲೆ ನೋಡಿದ್ದೇವೆ. ಅವನ ಹಾಗೂ ಯಮ ಮುಂತಾದ ಇತರ ದೇವತೆಗಳ ಪಾಶದಿಂದ ಮತ್ತು ಆಗಾಗ್ಗೆ ಉಂಟಾಗಿರಬಹುದಾದ ಬೇರೆಲ್ಲ ದೋಷಗಳಿಂದ ಓಷಧಿಗಳು ವ್ಯಕ್ತಿಯನ್ನು ಮುಕ್ತಗೊಳಿಸಬೇಕು. ಇದು ೧೬ನೆಯ ಮಂತ್ರದ ಆಶಯ. ದೇವತೆಗಳು ಮುನಿಸಿಕೊಂಡು ಮಾನವನಿಗೆ ರೋಗ ಬರಿಸಬಹುದೆಂಬ ಭಾವನೆ ಮತ್ತು ಭಯ ಋಗ್ವೇದದಷ್ಟು ಹಳೆಯದು ಎಂದಾಯಿತು. ವಿಶೇಷವೆಂದರೆ, ಈವರೆಗೆ ದೈಹಿಕ ರೋಗಗಳನ್ನು ಪ್ರಸ್ತಾಪಿಸುತ್ತಾ ಬಂದ ಕವಿಯು ಈ ಮಂತ್ರದಲ್ಲಿ ನೈತಿಕ ರೋಗಕ್ಕೂ ಪರಿಹಾರ ಬೇಕೆಂಬ ಆಶಯವನ್ನು ಪ್ರಕಟಿಸಿದ್ದಾನೆ. ಇಲ್ಲಿ "ಕಿಲ್ಬಿಷ" ಎಂಬ ಪದವನ್ನು ಪ್ರಯೋಗಿಸಲಾಗಿದೆ. ಭಗವದ್ಗೀತೆಯಲ್ಲಿ ಅರ್ಜುನನನ್ನು ಬಾಧಿಸಿದ್ದು ಸಹ 'ಕಿಲ್ಬಿಷ'ವೇ. ಅದನ್ನು ಮೀರಿ ನಿಲ್ಲಬೇಕೆಂದು ಶ್ರೀ ಭಗವಾನ್ ಅಲ್ಲಿ ಉಪದೇಶಿಸಿದ್ದಾನೆ. ಅದು ಕೇವಲ ದೈಹಿಕವೂ ಅಲ್ಲ, ಕೇವಲ ಮಾನಸಿಕವೂ ಅಲ್ಲ. ಒಂದರ ಪರಿಹಾರವಾದರೆ ಇನ್ನೊಂದೂ ಸಹಜವಾಗಿ ನಷ್ಟವಾಗುವುದೆಂದು ಋಗ್ವೇದದ ಕವಿಯು ಭಾವಿಸಿಲ್ಲ. ಎರಡಕ್ಕೂ ಪ್ರತ್ಯೇಕವಾದ ಮದ್ದು ಅಗತ್ಯ. ಈ ಮಂತ್ರದ ವ್ಯಾಪ್ತಿಗೆ ನೇರವಾಗಿ ಸಂಬಂಧಿಸಿರದ ಒಂದು ಪ್ರಸಂಗದಲ್ಲಿ ಯೋಗವಾಸಿಷ್ಠ ಎಂಬ ಗ್ರಂಥವು ದೈಹಿಕ ಮತ್ತು ಮಾನಸಿಕ ವ್ಯಾಧಿಗಳನ್ನು ಒಟ್ಟಾಗಿಯೇ ಪರಿಹರಿಸಿಕೊಳ್ಳಬಹುದೆಂಬ ನಿಲುವನ್ನು ತಾಳಿದೆ. ದ್ವಂದ್ವಾತ್ಮಕವಾದ ಎರಡು ಭಾವನೆಗಳ ತಾಕಲಾಟದಲ್ಲಿ ಒಂದು ನಷ್ಟವಾದರೆ ಇನ್ನೊಂದೂ ತಾನಾಗಿಯೇ ನಷ್ಟವಾಗುತ್ತದೆಂದು ಅಲ್ಲಿ ಹೇಳಿದೆ (ಏಕಸ್ಮಿನ್ ತಯೋರ್ನಷ್ಟೇ ನೂನಂ ದ್ವಾವಪಿ ನಶ್ಯತಃ).

ಓಷಧಿಗಳು ದ್ಯುಲೋಕದಿಂದ ಪೃಥ್ವಿಗೆ ಬಂದಿವೆಯೆಂಬುದು ಋಗ್ವೇದದ ಕವಿಯ ಇಂಗಿತ. ಎಲ್ಲ ಶ್ರೇಷ್ಠ ಸಾಮಗ್ರಿಗಳೂ ಅಲ್ಲಿಂದಲೇ ಬರಬೇಕಲ್ಲ! ಅದಕ್ಕೇ ಶ್ರೀ ಭಗವಾನ್ ಗೀತೆಯಲ್ಲಿ ಹೇಳುವುದು, "ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ। ತತ್ತದವಗಚ್ಛ ತ್ವಂ ಮಮ ತೇಜೋಂಶಸಂಭವಂ" ಎಂದು (೧೦.೪೧). ಅಂದರೆ, ಯಾವುವೆಲ್ಲಾ ಘನತೆ, ಸೌಂದರ್ಯ, ಸತ್ತ್ವ, ಔನ್ನತ್ಯ ಹೊಂದಿವೆಯೋ ಅವೆಲ್ಲಾ ಭಗವಾನನಿಂದ ಬಂದವೇ ಆಗಿರುತ್ತವೆ. ಓಷಧಿಗಳಿಗೆ ಅಂತಹ ಹಮ್ಮು ಇದೆಯೆಂದು ಋಗ್ವೇದದ ಕವಿ ಭಾವಿಸಲಾರ. ವಿಸ್ಮಯವನ್ನುಂಟು ಮಾಡುವ ಶಕ್ತಿಯುಳ್ಳ ಪ್ರತಿಯೊಂದು ಪದಾರ್ಥವೂ ತನಗೆ ತಿಳಿಯದ ಎಲ್ಲಿಂದಲೋ ಬಂದಿರಬೇಕೆಂಬುದು ಅವನ ಗ್ರಹಿಕೆ; ಅಗ್ನಿಯನ್ನು (ಅಂದರೆ ಬೆಂಕಿಯನ್ನು) ಮಾತರಿಶ್ವನ್ ಎಂಬುವನು ದ್ಯುಲೋಕದಿಂದ ತಂದಂತೆ. ಓಷಧಿಗಳು ದ್ಯುಲೋಕದಿಂದ ಬಂದು ಮಾನವನಿಗೆ ಆಶ್ವಾಸನೆಯೊಂದನ್ನು ಘೋಷಿಸಿವೆ ಯೆಂಬುದು ಕವಿಯ ಅಭಿವ್ಯಕ್ತಿ. ಏನದು ಘೋಷಣೆ? "ನಾವು ಯಾರ ಜೀವವನ್ನು ವ್ಯಾಪಿಸುತ್ತೇವೋ ಅವರು ವಿನಾಶವನ್ನೈದುವುದಿಲ್ಲ" ಎಂದು. ಓಷಧಿಯು ವಸ್ತುನಿಷ್ಠವಾಗಿ ತನ್ನ ಶಕ್ತಿ ಪ್ರದರ್ಶಿಸಿದಾಗ ಅದೃಷ್ಟ, ಕರ್ಮ, ಇತ್ಯಾದಿಗಳು

ಅಪ್ರಸ್ತುತವೆಂಬ ಚರಕ ಸಂಹಿತೆಯ ಮಾತಿಗೆ ಇಂತಹ ಮಂತ್ರಗಳು ಪ್ರೇರಣೆ ನೀಡುತ್ತವೆ. ಓಷಧಿಯ ಮಹತ್ವವನ್ನು ಈ ರೀತಿ ಗ್ರಹಿಸಿರುವ ಋಗ್ವೇದದ ಕವಿಯು ನಿಜಕ್ಕೂ ತನ್ನ ಕಾಲದಿಂದ ಬಹಳ ಮುಂದೆ ಬಂದು ನಿಲ್ಲುತ್ತಾನೆಂಬುದು ಮನೋಜ್ಞವಾಗಿದೆ. (೧೭: ಅವಪಂತೀಃ ಅವದನ್ ದಿವ ಓಷಧಯಸ್ಪರಿ। ಯಂ ಜೀವಂ ಅಶ್ನವಾಮಹೈ ನ ಸ ರಿಷ್ಯಾತಿ ಪೂರುಷಃ॥). ಮುಂದಿನ ಮಂತ್ರದಲ್ಲಿ ಕವಿಯು ಕಾಂತ–ಕಾಂತೆಯರ ಸಂಬಂಧವನ್ನು ಓಷಧಿಗಳ ಸಂಬಂಧದಲ್ಲಿ ನೆನೆಸಿದ್ದಾನೆ. ಓಷಧಿಗಳೆಲ್ಲಾ ಸೋಮನಿಗೆ ರಾಣಿಯರಿದ್ದಂತೆ; ಅವು ಅಸಂಖ್ಯಾತ. ಸೋಮವೂ ಓಷಧಿಯೇ, ಅದು ಬೇರೆಲ್ಲವುಗಳಿಗಿಂತಲೂ ನೂರುಪಟ್ಟು ವಿಚಕ್ಷಣೆ ಹೊಂದಿದೆ. ಅದು ತನ್ನ ಕಾಂತೆಯರ ಹೃದಯವನ್ನು ಸುಖದಿಂದ ತುಂಬುತ್ತದೆ (೧೮: ಯಾ ಓಷಧೀಃ ಸೋಮರಾಜ್ಞೀಃ ಬಹ್ವೀಃ ಶತವಿಚಕ್ಷಣಾಃ। ತಾಸಾಂ ತ್ವಮಸಿ ಉತ್ತಮಾ ಅರಂ ಕಾಮಾಯ ಶಂ ಹೃದೇ॥). ಓಷಧಿಗಳ ವೈಭವವನ್ನು ಕವಿಯು ಇಲ್ಲಿ ವಿಹಂಗಮವಾಗಿ ಚಿತ್ರಿಸಿದ್ದಾನೆ. ಮುಂದಿನ ಮಂತ್ರದಲ್ಲಿ ಓಷಧಿಗಳು ಬೃಹಸ್ಪತಿಯಿಂದ ಉತ್ಪನ್ನವಾದುವೆಂಬುದನ್ನು ಮತ್ತೆ ಉಚ್ಚರಿಸಲಾಗಿದೆ. ಅವು ಭೂಮಿಯನ್ನೆಲ್ಲಾ ಪಸರಿಸಿವೆ ಮತ್ತು ರೋಗದಿಂದ ಆವೃತವಾದ ದೇಹಕ್ಕೆ ಶಕ್ತಿಯನ್ನು ನೀಡುತ್ತವೆಂದೂ ಹೇಳಲಾಗಿದೆ. ಸೂಕ್ತದ ೨೦ನೆಯ ಮಂತ್ರವು ಬಹ್ವರ್ಥಗಳ ಖನಿಯಾಗಿದೆ, ಎಷ್ಟೋ ಜಿಜ್ಞಾಸೆಗಳಿಗೆ ಸಾಮಗ್ರಿಯನ್ನೊದಗಿಸುತ್ತದೆ. ಆಧುನಿಕ ಪರಿಸರವಾದಿಗಳಿಗೆ ಕೂಡ ಒಂದು ಸಂದೇಶ ನೀಡುತ್ತಿದೆಯೋ ಎಂಬಂತಿದೆ ಅದು. ಭಾವಗಳ ಪ್ರವಾಹಕ್ಕೆ ಈ ಮಂತ್ರದ ಅನನ್ಯ ಅಭಿವ್ಯಕ್ತಿಯು ಇಂಬು ನೀಡುತ್ತದೆ. "ಕವಿತ್ವವೆಂದರೆ ಹೀಗಿರಬೇಕು" ಎಂದು ಆನಂದವರ್ಧನನಂತಹ ಅಲಂಕಾರ ಶಾಸ್ತ್ರಜ್ಞರು ಸಹ ಈ ಮಂತ್ರವನ್ನು ಬೊಟ್ಟು ಮಾಡಿ ತೋರಿಸಲಡ್ಡಿಯಿಲ್ಲ. ಕವಿಯ ಮನಸ್ಸಿನಲ್ಲಿ ಒಂದು ದ್ವಂದ್ವವು ಏರ್ಪಟ್ಟಿದೆ: ಓಷಧಿಗಳು ದಿವ್ಯವಾದುವು ಮತ್ತು ಉಪಯುಕ್ತವಾದುವು. ಅದೇ ದ್ವಂದ್ವಕ್ಕೆ ಕಾರಣ. ಏಕೆಂದರೆ, ಅವುಗಳ ಪ್ರಯೋಜನವನ್ನು ದಕ್ಕಿಸಿಕೊಳ್ಳಬೇಕಾದರೆ ಅವನ್ನು ಭೂಮಿಯಿಂದ ಅಥವಾ ಗಿಡದಿಂದ ಕೀಳಬೇಕು. ಅಷ್ಟು ದಿವ್ಯವಾದುದನ್ನು ಉತ್ಪಾಟಿಸುವುದುಂಟೆ! ಆದರೆ ಉತ್ಪಾಟಿಸದೆ ಗತ್ಯಂತರವಿಲ್ಲ. ಓಷಧಿಗಳನ್ನು ಹಾಗೆ ಕಿತ್ತರೆ ಅವು ಮುನಿಸಿಕೊಳ್ಳುವುದಿಲ್ಲವೆ? ಕಿತ್ತರೆ ಓಷಧಿಯ ಭಂಗ; ಕೀಳದಿದ್ದರೆ ರೋಗಿಯ ನಾಶ. ಯಾವುದನ್ನು ಆಯ್ಕೆ ಮಾಡಿಕೊಂಡರೂ ಅಸಂತೃಪ್ತಿ ತಪ್ಪಿದ್ದಲ್ಲ. ಕೀಳುವುದು ಕೇವಲ ರೋಗಿಯೊಬ್ಬನ ಹಿತಕ್ಕಾಗಿ ಎಂಬ ಕಾರಣದಿಂದ ಓಷಧಿಯು ಕೋಪಗೊಳ್ಳಬಾರದೆಂದು ಕವಿಯು ವಿನಂತಿಸಿಕೊಳ್ಳುತ್ತಾನೆ. ಓಷಧಿಯ ನೆರವಿನಿಂದಲ್ಲವೆ ಪುತ್ರಾದಿ ಬಾಂಧವರು ಮತ್ತು ಹಸುಕರುಗಳೂ ಅರೋಗಿಗಳಾಗಿರುತ್ತವೆ! (೨೦: ಮಾ ವೋ ರಿಷತ್ ಖನಿತಾ ಯಸ್ಮೈ ಚಾಹಂ ಖನಾಮಿ ವಃ। ದ್ವಿಪತ್ ಚತುಷ್ಪತ್ ಅಸ್ಮಾಕಂ ಸರ್ವಮಸ್ತು ಅನಾತುರಂ॥). ಮೊಂಡುವಾದ ಹೂಡುವವರಿದ್ದಾರೆ: ಪರಿಸರದ ಹಾನಿಯಾಗಕೂಡದು, ಆಹಾರದಲ್ಲಿ ಏನೇನನ್ನೋ ವರ್ಜಿಸಬೇಕು, ನದಿಗೆ ಕಟ್ಟೆ ಕಟ್ಟಕೂಡದು, ಇತ್ಯಾದಿ. ಋಗ್ವೇದದ ಕವಿಗೆ ಅದೆಲ್ಲದರ ಬಗ್ಗೆ ಕಾಳಜಿ ಇದೆ, ಆದರೆ ವ್ಯಾವಹಾರಿಕ ಅನಿವಾರ್ಯತೆಗಳ ಪ್ರಜ್ಞೆಯೂ ಇದೆ. ಡೋಲಾಯಮಾನವಾದ ಮನಸ್ಸಿನ ಚಿತ್ರಣವೊಂದರ ವ್ಯಾಪ್ತಿ ಎಷ್ಟು ಅಸಾಧಾರಣವಾಗಿರಬಹುದೆಂಬುದಕ್ಕೆ ಈ ಮಂತ್ರವು ಒಂದು ಉತ್ತಮ ಉದಾಹರಣೆ. ಇಂತಹ ಕಾವ್ಯವನ್ನು ಸವಿಯದೆ ಋಗ್ವೇದದ ಮಂತ್ರಗಳಿಗೆ ಎಂಥದೋ ನಿಗೂಢತೆಯನ್ನು ಆರೋಪಿಸುವ ವೇದ ವಿದ್ವಾಂಸರು ಕವಿಹೃದಯದಿಂದ ಬಹುದೂರ ಉಳಿದುಬಿಡುತ್ತಾರೆ!

ಸೂಕ್ತದಲ್ಲಿ ಮಿಕ್ಕ ಮೂರು ಮಂತ್ರಗಳನ್ನು ಸಂಕ್ಷಿಪ್ತವಾಗಿ ಅವಲೋಕಿಸೋಣ: ಮಂತ್ರ ೨೧: ಓಷಧಿಗಳು ಹತ್ತಿರದಲ್ಲಿದ್ದು ನಮ್ಮ ಮೊರೆಯನ್ನು ಕೇಳಿಸಿಕೊಂಡಿರಲಿ ಅಥವಾ ದೂರವಿದ್ದು ಕೇಳಿಸಿಕೊಂಡಿರದಿರಲಿ, ಎಲ್ಲ ಓಷಧಿಗಳೂ ಸುಸಂಗತವಾಗಿ ಒಟ್ಟು ಸೇರಿ ರೋಗಿಗೆ ಆರೋಗ್ಯ ಮತ್ತು ಬಲವನ್ನು ತಂದುಕೊಡಬೇಕು. ಮಂತ್ರ ೨೨: ಸೋಮನೊಡನೆ ಸಂವಾದಿಸುತ್ತಾ ಓಷಧಿಗಳು ಹೇಳುತ್ತವೆ: 'ಯಾವ ರೋಗಿಗಾಗಿ ಓಷಧಿಗಳನ್ನು ಸಮರ್ಥವಾಗಿ ತಿಳಿದು ಒಬ್ಬ ವೈದ್ಯನು (ರೋಗಿಯನ್ನು) ಉಪಚರಿಸುತ್ತಾನೋ ಆ ರೋಗಿಯನ್ನು ಪಾರುಮಾಡೋಣ,' ಎಂದು (ಓಷಧಯಃ ಸಂ ವದಂತೇ ಸೋಮೇನ ಸಹ ರಾಜ್ಞಾ। ಯಸ್ಮೈ ಕೃಣೋತಿ ಬ್ರಾಹ್ಮಣಸ್ತಂ ರಾಜನ್ ಪಾರಯಾಮಸಿ) "ತಿಳಿದು ಉಪಚರಿಸುವುದು" ಮುಖ್ಯ. ವೈದ್ಯಕೀಯವು ಕಾರ್ಯ–ಕಾರಣ ಭಾವವನ್ನು ಆಧರಿಸಿದೆಯೇ ವಿನಾ ಯದೃಚ್ಛಾ ಫಲವನ್ನಲ್ಲ. "ಅಡ್ಡೇಟಿಗೊಂದು ಗುಡ್ಡೇಟು" ಎಂಬ ಮಾತಿನಂತೆ ಅಕಸ್ಮಾತ್ತಾಗಿ ರೋಗಿಯು ಯಾವುದೋ ಔಷಧದಿಂದ ಪ್ರಯೋಜನ ಪಡೆದರೆ ಅದರಲ್ಲಿ ವೈದ್ಯನ ನೈಪುಣ್ಯವೇನೂ ಇಲ್ಲ; ಆದ್ದರಿಂದ ಅದು ವೈದ್ಯಶಾಸ್ತ್ರ ಎನಿಸಿಕೊಳ್ಳುವುದಿಲ್ಲ. ನಿಷ್ಕೃಷ್ಟವಾಗಿ 'ಇಂತಹ ಲಕ್ಷಣದ ಈ ಮೂಲಿಕೆಯು ಈ ತಾಪಕ್ಕೆ ಮದ್ದು' ಎಂದು ಸೂತ್ರೀಕರಿಸಲು ಸಾಧ್ಯವಾದಾಗ ಮಾತ್ರ ಅದು ವೈದ್ಯಕೀಯ ಎನಿಸಿಕೊಳ್ಳುತ್ತದೆ. ಚರಕ ಸಂಹಿತೆಯ ಮಾತಿನಲ್ಲಿ ಹೇಳುವುದಾದರೆ "ತರ್ಕದ ಆಧಾರವಿಲ್ಲದ ವೈದ್ಯಕೀಯದ ಸಾಧನೆಯು ಯದೃಚ್ಛಾ ಸಾಧನ, ಅಷ್ಟೆ" (ವಿನಾ ತರ್ಕೇಣ ಯಾ ಸಿದ್ಧಿಃ ಯದೃಚ್ಛಾ ಸಿದ್ಧಿರೇವ ಸಾ). ಓಷಧಿ ಸೂಕ್ತವು ಚರಕ ಸಂಹಿತೆಗೆ ಒಂದು ಪೂರ್ವ ಪೀಠಿಕೆಯಂತಿದೆ ಎನ್ನುವುದು ಇಂತಹ ನಿರೂಪಣೆಗಳಿಂದಾಗಿ. ಹಿಂದಿನ ಒಂದು ಮಂತ್ರದಲ್ಲಿ 'ಪ್ರಾಜ್ಞ' ಎಂಬರ್ಥದಲ್ಲಿ 'ವಿಪ್ರ' ಶಬ್ದವು ಪ್ರಯೋಗವಾಗಿದ್ದುದನ್ನು ಗಮನಿಸಿದ್ದೆವು. ಪ್ರಸ್ತುತ ಮಂತ್ರದಲ್ಲಿ "ಬ್ರಾಹ್ಮಣಃ" ಎಂಬ ಪದ ಬಂದಿದೆ. ಅದು ಬ್ರಾಹ್ಮಣ ವರ್ಣದ ವೈದ್ಯನನ್ನು ಸೂಚಿಸುವುದಿಲ್ಲ. ಏಕೆಂದರೆ, ಈ ಸೂಕ್ತದ ವೇಳೆಗೆ ಆಗಿನ್ನೂ ವರ್ಣ ವಿಭಜನೆಯು ದಟ್ಟವಾಗಿ ಮೂಡಿರಲಿಲ್ಲ. ಉತ್ತರೋತ್ತರ, ಬ್ರಾಹ್ಮಣ ವರ್ಣದವರು ವೈದ್ಯರಾಗಲೇ ಕೂಡದೆಂಬ ಕಟ್ಟುನಿಟ್ಟು ನಿಯಮವು ಜಾರಿಗೆ ಬಂದಿತ್ತು. ಅದೇನೇ ಇರಲಿ, ಇಲ್ಲಿ 'ಬ್ರಾಹ್ಮಣ' ಎಂದರೆ ವೈದ್ಯಕೀಯದಲ್ಲಿ ನಿಷ್ಣಾತನಾಗಿರುವ ಪ್ರಾಜ್ಞ ಎಂಬರ್ಥವನ್ನೇ ಸ್ವೀಕರಿಸಬೇಕು. ಓಷಧಿಗಳ ಸಾಮರ್ಥ್ಯ, ಅಂದರೆ ವಿಶೇಷ ಲಕ್ಷಣ, ತಿಳಿದಿರುವವನು ಪ್ರಾಜ್ಞ ಅಥವಾ ಬ್ರಾಹ್ಮಣ; ಅವನು ರೋಗಿಯನ್ನು ಉಪಚರಿಸುತ್ತಾನೆ. ವೈದ್ಯರ ಬಗೆಗಿನ ಧರ್ಮಶಾಸ್ತ್ರಕಾರರ ಅನಾದರವು ವೇದಮಂತ್ರಗಳ ನಿಲುವಿಗೆ ವಿರುದ್ಧವಾದದ್ದೆಂದು ಈ ಮಂತ್ರದಿಂದಲೂ ತಿಳಿಯುತ್ತದೆ. ಕಡೆಯ ಮಂತ್ರ (೨೩) ಹೀಗಿದೆ: ತ್ವಂ ಉತ್ತಮಾ ಅಸಿ ಓಷಧೇ ತವ ವೃಕ್ಷಾ ಉಪಸ್ತಯಃ। ಉಪಸ್ತಿರಸ್ತು ಸೋಽಸ್ಮಾಕಂ ಯೋ ಅಸ್ಮಾನ್ ಅಭಿದಾಸತಿ॥). ಹಿಂದಿನ ಒಂದು ಮಂತ್ರವು ಹೇಳಿದ್ದಂತೆ, 'ಸೋಮ' ಎಂಬ ಹೆಸರಿನ ಓಷಧಿಯು ಬೇರೆಲ್ಲವುಗಳಿಗಿಂತಲೂ ಉತ್ತಮವಾದ್ದು. ಅದರ ಬೆಳವಣಿಗೆಯೆಲ್ಲಾ ನೆಲದಲ್ಲಿ ಹರಡಿಕೊಳ್ಳುವ ರೂಪದಲ್ಲೇ ಇದೆ. ಅಂದರೆ, ಅದು ಲತೆಯೇ ವಿನಾ ಗಿಡವಲ್ಲ. ಅದು ನಮ್ಮನ್ನು ರಕ್ಷಿಸುತ್ತದೆಯಾದ್ದರಿಂದ ಯಾವನು ನಮ್ಮನ್ನು ಬಗ್ಗುಬಡಿಯಲು ಮುಂದಾಗುತ್ತಾನೋ ಅವನು ಸ್ವತಃ ನೆಲ ಕಚ್ಚುವಂತಾಗುತ್ತದೆ. ಅಂದರೆ, ಓಷಧಿಗಳಿಂದಾಗಿ ನಾವು ಅಜೇಯರಾಗಿ ಉಳಿಯುತ್ತೇವೆ. ನಮ್ಮ ರಕ್ಷಕನಾದ ಓಷಧಿಯು 'ಉಪಸ್ತಿ', ಅಂದರೆ ನೆಲದ ಮೇಲೆ ಹಬ್ಬಿಕೊಂಡಿರುವಂಥದು; ಆದ್ದರಿಂದ ನಮ್ಮ ಶತ್ರುವು, ಅಂದರೆ ರೋಗವು, 'ಉಪಸ್ತಿ'ಯಾಗುತ್ತದೆ; ಅಂದರೆ, ನೆಲದ ಮೇಲೆ ಒರಗಬೇಕಾಗುತ್ತದೆ, ನಶಿಸಿಹೋಗಬೇಕಾಗುತ್ತದೆ. ಒಂದು ಪದವನ್ನು (ಉಪಸ್ತಿ) ಒಂದೇ ಪದ್ಯದಲ್ಲಿ ಬೇರೆ ಬೇರೆ ಅರ್ಥವ್ಯಾಪ್ತಿ ಹೊಂದಿರುವಂತೆ ಬಳಸಿರುವುದು ಇಲ್ಲಿಯ ವೈಶಿಷ್ಟ್ಯ.

ವೈದ್ಯಕೀಯ ಪದ್ಧತಿಯು ಪ್ರಾಚೀನ ಭಾರತದಲ್ಲಿ ಬೆಳೆದಿದ್ದು ಇಂತಹ ಮೂಲಗಳಿಂದ. ಬೇರೆಡೆಗಳಲ್ಲೂ ಇಂಥದೇ ಪ್ರಕ್ರಿಯೆಯು ಅನಿವಾರ್ಯ. ಪ್ರಾರಂಭಕ್ಕೇ ಪ್ರಯೋಗಶೀಲತೆಯು ಯಾವ ವೈಜ್ಞಾನಿಕ ಪದ್ಧತಿಯಲ್ಲೂ ಹಾಸುಹೊಕ್ಕಾಗಿ ಬೆರೆತಿರುವುದಿಲ್ಲ. ಒಂದು ಪದಾರ್ಥದ 'ವಿಶೇಷ' ಲಕ್ಷಣ ತಿಳಿದ ನಂತರ ಮಾತ್ರ ಪ್ರಯೋಗವು ಸಾಧ್ಯ. ಆದ್ದರಿಂದ ಪ್ರಯೋಗವೊಂದೇ ವಿಜ್ಞಾನದ ಪರಿಧಿಗೆ ಸೇರ್ಪಡೆ ಹೊಂದಲು ಅರ್ಹವಾದುದೆಂದು ಭಾವಿಸಲಾಗದು. ಆದಿಮ ಹಂತದ ಮಾಂತ್ರಿಕತೆ, ನಂತರದ ಸರಳ ವಿಧಾನ, ಆಮೇಲೆ ಅನುಭವಜನ್ಯ ಜ್ಞಾನದಿಂದ ಕಾರ್ಯ–ಕಾರಣ ಸಂಶೋಧನೆ, ಪ್ರಯೋಗ, ಇತ್ಯಾದಿಗಳು ಪ್ರತಿಯೊಂದೂ ಪ್ರತ್ಯೇಕವಾದ ವೈಶಿಷ್ಟ್ಯಗಳನ್ನು ಹೊಂದಿವೆ ಮತ್ತು ಅವೆಲ್ಲಾ ತಮ್ಮದೇ ಆದ ರೀತಿಯಲ್ಲಿ ವೈಜ್ಞಾನಿಕ ಪದ್ಧತಿಯ ಬೆಳವಣಿಗೆಗೆ ಕಾರಣವಾಗಿವೆ. ಈ ಹಿನ್ನೆಲೆಯಲ್ಲಿ ಋಗ್ವೇದದ ಓಷಧಿ ಸೂಕ್ತಕ್ಕೆ ಚಾರಿತ್ರಿಕ ಮಹತ್ವವಿದೆ. ಅಂತೆಯೇ, ಒಂದು ಕವನ ಎಂಬ ನೆಲೆಯಲ್ಲಿ ಅದಕ್ಕೆ ಮಾನ್ಯತೆ ದಕ್ಕುತ್ತದೆ.

'ಋತ' ಮತ್ತು 'ಓಷಧಿ' ಇವೆರಡೂ ಋಗ್ವೇದದಲ್ಲಿ ವೈಜ್ಞಾನಿಕ ಚಿಂತನೆಯ ಮೂಲ ಬೇರುಗಳು ಎನ್ನಬಹುದು. ಇನ್ನು ನಾವು ಅಶ್ವಿನಿ ದೇವತೆಗಳ ಪಾತ್ರದ ಕಡೆಗೆ ಹೊರಳೋಣ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೫ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

**ಡಾ|| ವಿಜಯಕುಮಾರ್ ಎಂ. ಬೋರಟ್ಟಿ**

# ದಿ "ಮಿಸ್ಟೇಕ್"

"ಅಕ್ಕಾ, ಈ ಕಥೆ ಓದಿದ್ದೀಯಾ ?"

ತಲೆ ಎತ್ತದೆ ಪುಸ್ತಕ ಓದುವುದರಲ್ಲಿ ಮಗ್ನಳಾಗಿದ್ದ ಮೈತ್ರೇಯಿ ೧೦ ವರ್ಷದ ತಮ್ಮ ಅನಿಕೇತ್ ಕೇಳಿದ ಪ್ರಶ್ನೆಗೆ ಉದಾಸೀನತೆಯಿಂದ,

"ಯಾವ್ದು ?"

"ಅದೇ ಕಣೆ. ಪಂಚತಂತ್ರದ ಕಥೆ. ಸಿಂಹ ಮತ್ತು ಮೂರು ಬ್ರಾಹ್ಮಣರು !"

"ಹೂಃ. ಓದಿದ್ದೀನಿ". ಏನು ಹೇಳಿದನೆಂದು ಸರಿಯಾಗಿ ಕೇಳಿಸಿಕೊಳ್ಳದೆ ಅವನು ಹೇಳಿದಕ್ಕೆಲ್ಲಾ ಹೂಃ, ಹೂಃ ಅನ್ನುತ್ತಿದ್ದಳು.

"ಆ ಬ್ರಾಹ್ಮಣರಿಗೆ ಬುದ್ಧೀನೇ ಇಲ್ಲ. ತಾವೇ ದೊಡ್ಡ ಪಂಡಿತರು ಅಂದುಕೊಂಡು ಸಿಂಹಕ್ಕೆ ಜೀವ ತರಿಸಿ, ಅದರ ಬಾಯಿಗೆ ಸಿಕ್ಕಿ ಹಾಕೊಂಡ್ರು" ಎಂದು ಮುಸಿ, ಮುಸಿ ನಗುತ್ತಾ ಹೇಳಿದ. ಇವನು ರೂಮಿನಲ್ಲಿ ಇದ್ರೆ ಇನ್ನೂ ಏನೇನೋ ಕೇಳಿ ನನಗೆ ಓದೋದಕ್ಕೆ ಬಿಡೋದಿಲ್ಲ ಅಂತ ಅನಿಕೇತ್‌ನನ್ನು ಹೊರಗೆ ಕಳುಹಿಸಿ, ರೂಮಿನ ಚಿಲಕ ಹಾಕಿದಳು.

ಮೈತ್ರೇಯಿ ಓದ್ತಾ ಇದ್ದದ್ದು ಸಾದತ್ ಹಸನ್ ಮಾಂಟೋನ ಒಂದು ಕಥೆಯನ್ನ. ಮರುದಿನ ಬೆಳಗ್ಗೆ ಯೊಳಗೆ ಕಥೆಯನ್ನು ಓದಿ ಮುಗಿಸಿ, ಇಕ್ಬಾಲ್ ಮತ್ತು ಶಶಿಕಾಂತನ ಜೊತೆ ಇದರ ಬಗ್ಗೆ ಚರ್ಚೆ ಮಾಡಬೇಕೆಂದು ಲಗುಬಗೆಯಿಂದ ನೋಟ್ಸ್‌ಗಳನ್ನು ಬರೆದುಕೊಳ್ಳುತ್ತಿದ್ದಳು. ಅದೇ ಅವಳ ಕೊನೆಯ ನೋಟ್ಸ್‌ಗಳು ಎಂಬ ಅರಿವಿಲ್ಲದೆ !

೧

ಮೈತ್ರೇಯಿ, ಶಶಿಕಾಂತ್ ಮತ್ತು ಅಬ್ಬಾಸ್ ಮಂಗಳೂರಿನವರು. ಮೂವರು ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗ ಕ್ಕಾಗಿ ಹೋದಾಗ ಸ್ನೇಹಿತರಾದರು. ಮೈತ್ರೇಯಿ, ಶಶಿಕಾಂತ್ ಸಾಹಿತ್ಯದಲ್ಲಿ, ಇಕ್ಬಾಲ್ ಸಮಾಜಶಾಸ್ತ್ರದಲ್ಲಿ ಸಂಶೋಧನೆ ಮಾಡಿದವರು. ಸರಿ ಸುಮಾರು ಐದು ವರ್ಷಗಳಷ್ಟು ಕಾಲ ಹೈದರಾಬಾದ್‌ನಲ್ಲಿದ್ದ ಈ ಮೂವರು ಆತ್ಮೀಯ ಗೆಳೆಯರು ಅಲ್ಲಿ ಇದ್ದಷ್ಟು ಕಾಲ ಸಂಶೋಧನೆಯ ಜೊತೆಗೆ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿದ್ದ ವಿದ್ಯಾರ್ಥಿ ಚಳುವಳಿಗಳಲ್ಲಿ ಭಾಗವಹಿಸಿ, ಸಕ್ರಿಯರಾಗಿದ್ದರು. ಆ ವಿ.ವಿ. ಕೂಡ ಹಾಗೆ. ಯಾರಾದ್ರು ಸ್ವಲ್ಪ ಮುಕ್ತಮನಸ್ಸಿನವರಾಗಿದ್ದರೆ ಸಾಕು, ಅದು ಅವರನ್ನು ವಿದ್ಯಾರ್ಥಿ ಚಳುವಳಿಗಳಿಗೆ ಸೆಳೆದು ಕೊಂಡು ಬಿಡುತ್ತದೆ. ಇದಕ್ಕೆ ಈ ಮೂವರೂ ಹೊರತೇನಲ್ಲ. ದಲಿತ – ವಿದ್ಯಾರ್ಥಿಗಳ ಚಳುವಳಿಗಳಲ್ಲಿ, ಹೋರಾಟಗಳಲ್ಲಿ ಭಾಗವಹಿಸಿದವರು. ತಾವು ಕೆಳ ವರ್ಗದ ಸಾಮಾಜಿಕ ಹಿನ್ನೆಲೆಯನ್ನು ಹೊಂದಿಲ್ಲದಿದ್ದರೂ ವಿ.ವಿ.ಯ ವಾತಾವರಣ ಅವರನ್ನು ಬದಲಾಯಿಸಿತ್ತು. ಹೀಗಾಗಿ ಹಕ್ಕು, ಹೋರಾಟ, ಸಮಾನತೆ, ಬದ್ಧತೆ, ಇತ್ಯಾದಿಗಳು ಈ ಮೂವರ ತಲೆಯನ್ನು ಸುತ್ತಿ ಕೊಂಡಿದ್ದವು. ವ್ಯಾಸಂಗ ಮುಗಿಸಿ ಇವರೆಲ್ಲರೂ ಮಂಗಳೂರಿಗೆ ಹೋದಾಗ ತಮ್ಮ ಸಂಶೋಧನೆಯನ್ನು ಸಮಾಜಕ್ಕಾಗಿ ಉಪಯೋಗಿಸಿಕೊಳ್ಳುವ ಬಿಸಿ ರಕ್ತದ



ಉಪಾಯ ಹೊಳೆದದ್ದು ಶಶಿಕಾಂತ್‌ಗೆ. ಇದನ್ನು ಉಳಿದಿಬ್ಬರು ಉತ್ಸಾಹದಿಂದ ಸಮ್ಮತಿಸಿದರು. ಈ ದಿಕ್ಕಿನಲ್ಲಿ ಸಮಾಜಮುಖಿಯಾದ, ಪ್ರಗತಿಪರವಾದ ಮತ್ತು ಜನರ ಮನಸ್ಸನ್ನು ಪರಿವರ್ತಿಸುವ ನಾಟಕವನ್ನು ಪ್ರದರ್ಶಿಸಬೇಕೆಂದು ಅವರು ನಿರ್ಧರಿಸಿದರು. ಮೂವರೂ ತಾವು ಮಾಡಬೇಕಾದ ಕೆಲಸವನ್ನು ಹಂಚಿಕೊಂಡರು. ಮೈತ್ರೇಯಿ ನಾಟಕಕ್ಕೆ ಬೇಕಾದ ಕಥೆಯನ್ನು ಆರಿಸುವುದು; ಶಶಿಕಾಂತ್ ಅದನ್ನು ನಾಟಕ ಪ್ರದರ್ಶನಕ್ಕೆ ಬೇಕಾದ ಹಾಗೆ ಮಾರ್ಪಡಿಸುವುದು; ಮತ್ತು ಅಬ್ಬಾಸ್ ಅದಕ್ಕೆ ರಂಗರೂಪ ನೀಡಿ ಜೀವ ಕೊಡುವುದು ಎಂದು ಮೂವರೂ ನಿರ್ಧಾರ ಮಾಡಿದರು. ಎಲ್ಲಾ ಕೆಲಸಕ್ಕೆ ಒಬ್ಬರಿಗೊಬ್ಬರು ಸಹಾಯ ಮಾಡುವುದಾಗಿ ಪರಸ್ಪರ ಒಪ್ಪಿಕೊಂಡರು.

**ಮೊದಲನೇ "ಮಿಸ್ಟೇಕ್"**

ಮೈತ್ರೇಯಿ ಅನೇಕ ನಾಟಕಗಳನ್ನು ತಿರುವಿ ಹಾಕಿದಳು. ಯಾವುದೂ ಇಷ್ಟವಾಗಲಿಲ್ಲ. ಅವಳಿಗೆ ಬೇಕಾಗಿದ್ದು ಕೋಮು ಗಲಭೆಯನ್ನು ಅಣಕಿಸುವ, ಅದರ ನಿಷ್ಪ್ರಯೋಜಕತೆಯನ್ನು ತೋರಿಸುವ ಮತ್ತು ಅದರ ವಿವೇಚನಾರಹಿತ ಮುಖವನ್ನು ಪ್ರದರ್ಶಿಸುವ ನಾಟಕ. ಇದಕ್ಕಾಗಿ ಒಂದು ಸೂಕ್ತವಾದ ನಾಟಕ ಹುಡುಕೋದು ಎಷ್ಟು ಕಷ್ಟ ಅಂತ ಅವಳಿಗೆ ಗೊತ್ತಿತ್ತು. ಈಗ ಮತ್ತದೇ ಸಮಸ್ಯೆ. ಹುಡುಕಿ, ಹುಡುಕಿ ಸಾಕಾಗಿ, ಯಾವುದೂ ಇಷ್ಟವಾಗದೇ ಇದ್ದಾಗ ಅವಳಿಗೆ ಜ್ಞಾಪಕ

ಬಂದದ್ದು ಪ್ರೊ॥ ನಿಖಿಲಾ ಮೇಡಮ್‌ನ ಪಾರ್ಟಿಷನ್ ಕಥೆಗಳು. ಶೀಲಾ ತನ್ನ ಪಿಎಚ್.ಡಿ.ಗಾಗಿ ನಡೆಸುವ ಕಂಪಲ್ಸರಿ ಕೋರ್ಸ್‌ನಲ್ಲಿ ನಿಖಿಲಾರ 'ಪಾರ್ಟೀಷನ್ ನ್ಯಾರಟಿವ್ಸ್ ಆ್ಯಂಡ್ ದಿ ನೇಷನ್' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡಿದ್ದಳು. ನಿಖಿಲಾರ ವಿದ್ವತ್ತಿಗೆ, ಅವರಲ್ಲಿ ಈ ವಿಷಯದ ಬಗ್ಗೆ ಇದ್ದ ಜ್ಞಾನಸಂಪತ್ತಿಗೆ ಮೈತ್ರೇಯಿ ಮಾರುಹೋಗಿದ್ದಳು. ಭಾರತ – ಪಾಕಿಸ್ತಾನದ ವಿಭಜನೆಯಾದಾಗ ಆದಂತಹ ಕೋಮುದಳ್ಳುರಿ ಯಾರನ್ನಾದರು ವಿಚಲಿತಗೊಳಿಸುವಂಥದ್ದು. ಜೊತೆಗೆ ಆ ದಿನಗಳಲ್ಲಿ ಈ ವಿಷಯದ ಬಗ್ಗೆ ಬಂದ ಕಥೆಗಳು ನೂರಾರು ಮತ್ತು ವೈವಿಧ್ಯಮಯವೂ ಕೂಡ. ಅವು ಮೈತ್ರೇಯಿಯ ಮನಸ್ಸನ್ನು ಬಹಳಷ್ಟು ಕಲಕಿದ್ದವು. ಈ ಕೋರ್ಸಿನ ದೆಸೆಯಿಂದ ಮೈತ್ರೇಯಿಗೆ ಈ ಕಥೆಗಳ ಪರಿಚಯವಾಯಿತು. ಇತ್ತೀಚೆಗೆ ಕೋಮುವಾದದ ದಳ್ಳುರಿಗೆ ಸಿಲುಕಿದ ಭಾರತದಲ್ಲಿ ಅದರ ಪ್ರಮಾಣ ಮತ್ತು ದುಷ್ಪರಿಣಾಮಗಳನ್ನು ಜ್ಞಾಪಿಸುವ, ಆದರೆ ಕಾಲಾಂತರದಲ್ಲಿ ಮರೆತುಹೋದ ಪಾರ್ಟೀಷನ್ ಕಥೆಗಳು ಹೇಗೆ ನಮಗೆ ಪ್ರಸ್ತುತವಾಗುತ್ತವೆಯೆಂದು ನಿಖಿಲಾರು ಹೇಳಿದ್ದು ಮೈತ್ರೇಯಿ ಬಹು ಆಸಕ್ತಿಯಿಂದ ಕೇಳಿ ಅರ್ಥಮಾಡಿ ಕೊಂಡಿದ್ದಳು. ಅವರ ಜೊತೆ ಇದರ ಬಗ್ಗೆ ಅನೇಕ ಸಲ ದೀರ್ಘವಾದ ಚರ್ಚೆಗಳನ್ನೂ ಮಾಡಿದ್ದಳು. ಪಾರ್ಟೀಷನ್ ಕಥೆಗಳಲ್ಲಿ ಮೈತ್ರೇಯಿಗೆ ಅತಿ ಪ್ರಿಯವಾದ ಕಥೆ ಸಾದತ್ ಹಸನ್ ಮಾಂಟೋನ 'ಮಿಸ್ಟೇಕ್'. ಬಹಳ ಹೊತ್ತು ತಲೆ ಕೆಡಿಸಿಕೊಂಡ ಮೇಲೆ ಅದನ್ನೆ ಆಯ್ಕೆ ಮಾಡಿಕೊಂಡಳು.

ಇದನ್ನು ಶಶಿಕಾಂತ್ ಮತ್ತು ಇಕ್ಬಾಲ್‌ರ ಹತ್ತಿರ ಚರ್ಚೆ ಮಾಡೋದಕ್ಕೆ ತೆಗೆದು ಕೊಂಡು ಹೋದಳು. ಆಯ್ಕೆ ಮಾಡಲ್ಪಟ್ಟ ಕಥೆಗೆ ನಾಟಕದ ರೂಪ ಕೊಡೋ ಜವಾಬ್ದಾರಿ ಶಶಿಕಾಂತ್‌ನದಾಗಿದ್ದರಿಂದ, ಈ ಕಥೆಯನ್ನು ಓದಿ ಅವನಿಗೆ ಆಶ್ಚರ್ಯವಾಯಿತು.

"ಇದೇನಿದು, ಇಷ್ಟು ಸಣ್ಣದು ? ಇದನ್ನು ನಾಟಕ ಮಾಡೋದಕ್ಕಾಗುತ್ತಾ ?"

"ಅದು ನಿನ್ನ ಸಾಮರ್ಥ್ಯದ ಮೇಲೆ ನಿರ್ಧಾರವಾಗುತ್ತೆ" ಎಂದು ನಿರ್ಭಾವದಿಂದ ಮತ್ತು ದೃಢನಂಬಿಕೆಯಿಂದ ಮೈತ್ರೇಯಿ ಮರು ಉತ್ತರ ನೀಡಿದಳು.

ಶಶಿಕಾಂತ್ ಕಥೆಯನ್ನು ಒಮ್ಮೆ ಗಟ್ಟಿಯಾಗಿ ಓದಲು ಶುರು ಮಾಡಿದ.

ಹೊಟ್ಟೆಯನ್ನು ಬಗೆದು ಸೀಳಿದ ಚೂರಿ ಅದೇ ನೇರ ರೇಖೆಯಲ್ಲಿ ಕೆಳಗಿಳಿದು ಆ ಮನುಷ್ಯನ ಪೈಜಾಮದ ಲಾಡಿಯನ್ನು ಕತ್ತರಿಸಿ ಹಾಕಿತು. ಚೂರಿ ಹಾಕಿದವನು ಆ ಕಡೆ ಒಂದು ಸಲ ನೋಡಿ "ಛೆ, ಛೆ, ಎಂಥಾ ಮಿಸ್ಟೇಕಾಗಿ ಹೋಯಿತು" ಎಂದ ವಿಷಾದದಿಂದ.

ಇಕ್ಬಾಲ್‌ಗೂ ಕೂಡ ಅಷ್ಟು ಸಣ್ಣ ಕಥೆಯನ್ನು ಹೇಗೆ ನಾಟಕ ಮಾಡೋದು ಅಂತ ಯೋಚನೆಯಾಯಿತು. ಆದರೆ ಶಶಿಕಾಂತ್ ಅದಕ್ಕೆ ನಾಟಕದ ರೂಪ ಕೊಟ್ಟಾದ ಮೇಲೆ ತಾನೆ ತಾನು ತಲೆ ಕೆಡಿಸಿಕೊಳ್ಳಬೇಕಾಗಿರುವುದು ಎಂದು ಸುಮ್ಮನಾದ. ಜೊತೆಗೆ ಶಶಿಕಾಂತ್‌ನ ಸಾಮರ್ಥ್ಯದ ಬಗ್ಗೆ ಅವನಿಗೆ ಎಳ್ಳಷ್ಟು ಸಂಶಯವಿರಲಿಲ್ಲ.

"ಅದೆಲ್ಲಾ ಸರಿ. ಈ ಕಥೆಯನ್ನೇ ಯಾಕೆ ಆಯ್ಕೆ ಮಾಡಿದ್ದು? ಹುಡುಕಿದರೆ ನಮಗೆ ನೂರಾರು ನಾಟಕಗಳು ಸಿಗುತ್ತವೆ. ಪ್ರಾಯಶಃ ನೀನು ಸರಿಯಾಗಿ ಹುಡುಕಿಲ್ಲ ಅನಿಸುತ್ತೆ" ಎಂದು ಸ್ವಲ್ಪ ಮೂದಲಿಸುವ ಧಾಟಿಯಲ್ಲಿ ಶಶಿಕಾಂತ್ ಕೇಳಿದ.

"ನೋಡು, ಇದು ನಮ್ಮ ಉದ್ದೇಶಕ್ಕೆ ಸರಿಯಾದ ಕಥೆ. ನಮ್ಮ ಉದ್ದೇಶಕ್ಕೆ ಅನುಗುಣವಾಗಿ ಎಲ್ಲೆಲ್ಲಿ ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕು ಎಂದು ನಾನು ನೋಟ್ಸ್ ಮಾಡಿದ್ದೀನಿ. ಇಲ್ಲಿ ನೋಡು, ಕಥೆಗೆ ಒಂದು ಔಟ್‌ಲೈನ್ ಕೂಡ ಹಾಕಿದ್ದೀನಿ. ಎಲ್ಲೆಲ್ಲಿ ಏನೇನು ವಿಷಯಗಳು ಬರಬೇಕು, ಯಾವ ಅಂಶಗಳನ್ನು ಸೇರಿಸ ಬೇಕು ಎಂದು ಸ್ಕೆಲಿಟನ್ ತಯಾರಿಸಿದ್ದೀನಿ. ನೀನು ಇದಕ್ಕೆ ರಕ್ತ ಮಾಂಸಖಂಡಗಳನ್ನು ತುಂಬಿ ಒಂದು ಆಕಾರವನ್ನು ಕೊಡು" ಎಂದು ಬಿಡಿಸಿ ಬಿಡಿಸಿ ಹೇಳಿದಾಗ ಶಶಿಕಾಂತನಿಗೆ ತಾನು ನಿರ್ವಹಿಸುವ ಕೆಲಸದ ಬಗ್ಗೆ ಸ್ಪಷ್ಟತೆ ಬಂತು. ಮೈತ್ರೇಯಿಗೆ ತನ್ನ ಉದ್ದೇಶದ ಬಗ್ಗೆ ಶಶಿಕಾಂತ್ ಅರ್ಥಮಾಡಿಕೊಳ್ಳುವಷ್ಟು ಬೇರೆಯವರು ಅರ್ಥಮಾಡಿಕೊಳ್ಳಲಾರರು ಎಂಬ ಭರವಸೆ ಇತ್ತು. ಹಾಗಾಗಿ ಈಗ ಕೆಲಸ ಹಗುರಾಯಿತು. ಶಶಿಕಾಂತ್ ತನ್ನ ಜವಾಬ್ದಾರಿಯನ್ನು ನಿಭಾಯಿಸಲು ಶುರು ಮಾಡಿದ.

**ಎರಡನೇ "ಮಿಸ್ಟೇಕ್"**

ಶಶಿಕಾಂತ್ ಸಾಹಿತ್ಯದ ಜೊತೆಗೆ ಕ್ರೆಡಿಟ್ ಪದ್ಧತಿಯಡಿಯಲ್ಲಿ ನಾಟಕದ ಕೋರ್ಸನ್ನು ಮುಗಿಸಿದ್ದ. ಈಗಾಗಲೇ ಸಂಗೀತವನ್ನು ಕಲಿತಿದ್ದರಿಂದ ಅವನ ನಾಟಕದ ಗೀಳಿಗೆ ಎಕ್ಸ್ಟ್ರಾ ಅರ್ಹತೆಯೆನ್ನುವಂತೆ ಅದು ಪೂರಕವಾಗಿತ್ತು. ಪ್ರೊ॥ ತಾರಕನಾಥ್‌ರ ಮಾರ್ಗದರ್ಶನದಲ್ಲಿ ನಾಟಕದ ಕೋರ್ಸಿನ ಅಂಗವಾಗಿ ಒಂದೆರಡು ಕಥೆಯನ್ನು ನಾಟಕಕ್ಕೆ ಪರಿವರ್ತಿಸಿ, ಅದರಲ್ಲಿ ಪರಿಣತಿಯನ್ನು ಸಂಪಾದಿಸಿದ್ದ. ಕಥೆಯನ್ನು ಪರಿವರ್ತಿಸಬೇಕಾದಾಗ ಯಾವ ಯಾವ ಅಂಶಗಳನ್ನು ಉಳಿಸಿಕೊಳ್ಳಬೇಕು, ಯಾವುದನ್ನು ತೆಗೆಯಬೇಕು ಅಥವಾ ಯಾವುದನ್ನು ಹೊಸದಾಗಿ ಸೇರಿಸಬೇಕು ಎಂಬ ವಿಷಯದ ಬಗ್ಗೆ ಪ್ರೊ॥ ತಾರಕನಾಥ್‌ರು ನೀಡಿದ ಉಪನ್ಯಾಸವನ್ನು ಅವನು ಬಹಳ ಮೆಚ್ಚಿಕೊಂಡಿದ್ದ. ಹಾಗಾಗಿ ಕಥೆಯನ್ನು ರಂಗರೂಪವನ್ನಾಗಿ ಪರಿವರ್ತಿಸುವುದು ಅವನಿಗೆ ಅಷ್ಟೊಂದು ಕಷ್ಟವೆನಿಸಲಿಲ್ಲ. ಆದಾಗ್ಯೂ ಮಾಂಟೋನ ಕಥೆಯನ್ನು ಓದಿದಾಗ ಶಶಿಕಾಂತನಿಗೆ ಹೊಸ ಸವಾಲನ್ನು ಎದುರಿಸುತ್ತಿದ್ದೇನೆಂದು ಅನಿಸಿತು. ಅಷ್ಟೊಂದು ಸಣ್ಣ ಕಥೆಯನ್ನು ರಂಗರೂಪಕ್ಕೆ ಹೇಗೆ ತರುವುದು ಎಂದು ಚಿಂತಿಸಿದ. ಆದರೂ ಧೃತಿಗೆಡಲಿಲ್ಲ. ತಾನು ಕಲಿತಿದ್ದನ್ನು ಈಗ ಒರೆಗೆ ಹಚ್ಚುವ ಅವಕಾಶ ಒದಗಿದೆ ಎಂದುಕೊಂಡ. ಕಥೆಯನ್ನು ಎಲ್ಲಾ ದೃಷ್ಟಿಕೋನಗಳಿಂದಲೂ ಓದಿದ. ಪಾತ್ರಗಳಿಗೆ ಹೆಸರಿಲ್ಲ. ಘಟನೆಗೆ ಸಂಬಂಧಪಟ್ಟ ಸಂದರ್ಭವಿಲ್ಲ. ಮಾಂಟೋರವರು ಕಥೆ ಬರೆದ ಕಾಲವನ್ನು ಅರ್ಥ ಮಾಡಿಕೊಂಡಾಗ ಮಾತ್ರ ಈ ಕಥೆಯ ಸಂದರ್ಭ/ಅರ್ಥ ನಮಗೆ ಗೊತ್ತಾಗೋದು. ಕೇವಲ ನಾಲ್ಕೈದು ವಾಕ್ಯಗಳಿದ್ದರೂ ಅದಕ್ಕಿರುವ ಅರ್ಥದ ಆಳ ಮತ್ತು ಗಂಭೀರತೆ ಶಶಿಕಾಂತನ ಮನಸ್ಸನ್ನು ನಿಧಾನವಾಗಿ ಹೊಕ್ಕಿತು. ಮೈತ್ರೇಯಿಯ ಆಯ್ಕೆಯ ಬಗ್ಗೆ ಮೆಚ್ಚುಗೆ ಸೂಚಿಸಿದ. ಪದೇ ಪದೇ ಓದಿದಾಗ ಈ ಕಥೆಗೆ ಕಾಲಾತೀತವಾದ ಗುಣವಿದೆ ಎಂದು ಶಶಿಕಾಂತ್‌ಗೆ ಅರಿವಾಯಿತು. ಜೊತೆಗೆ ಸ್ವಲ್ಪ ಖುಷಿಯೂ ಕೂಡ ಆಯಿತು. ಏಕೆಂದರೆ ಈ ಕಥೆಗಿದ್ದ ಮುಕ್ತತೆ. ಈ ಕಥೆಗೆ ಅನೇಕ ವಿಷಯಗಳು, ಪಾತ್ರಗಳು ಮತ್ತು ಸಂದರ್ಭಗಳನ್ನು ಹೊಂದಿಸಬಹುದೆಂದು, ತನ್ನ ಲೇಖನಿಗೆ ಸ್ವಾತಂತ್ರ್ಯ ಸಿಕ್ಕಿತೆಂದು ಒಳಗೊಳಗೆ ಖುಷಿಪಟ್ಟ. ಈ ಕಥೆಯನ್ನು ನಮ್ಮ ಈಗಿನ ಉದ್ದೇಶಗಳಿಗನುಗುಣವಾಗಿ ವ್ಯಾಖ್ಯಾನಿಸಬಹುದೆಂದು ಅವನು ಖಾತ್ರಿಪಡಿಸಿಕೊಂಡು ಪುಳಕಗೊಂಡ.

ಬಹಳಷ್ಟು ಯೋಚಿಸಿದ ನಂತರ ಮೊದಲಿಗೆ ಶಶಿಕಾಂತ್ ನಾಟಕಕ್ಕೆ ಬೇಕಾಗುವ ಸಂದರ್ಭವನ್ನು ಸೃಷ್ಟಿಸಿಕೊಂಡ. ಇತ್ತೀಚೆಗೆ ನಡೆದ ಪೋಸ್ಟ್–ಗೋಧ್ರಾ ನರಹತ್ಯೆಯನ್ನು ವಿರೋಧಿಸುವ ಅಂಶವನ್ನು ಈ ನಾಟಕದಲ್ಲಿ ತಂದರೆ ಹೇಗೆ ಎಂದು ಮೈತ್ರೇಯಿ ಮತ್ತು ಇಕ್ಬಾಲ್ ಜೊತೆ ಚರ್ಚಿಸಿದಾಗ ಅವರು ತಕ್ಷಣ ತಮ್ಮ ಸಮ್ಮತಿಯನ್ನು ಸೂಚಿಸಿದರು. ಸತತವಾಗಿ ಕೆಲಸ ಮಾಡಿ ನಾಲ್ಕು ದಿನಗಳ ನಂತರ ಶಶಿಕಾಂತ್ ಕಥೆಯನ್ನು ಒಂದು ಘಂಟೆಗಾಗುವಷ್ಟು ನಾಟಕವನ್ನಾಗಿ ಪರಿವರ್ತಿಸಿದ. ನಾಟಕವನ್ನು ಓದುವ ಮೊದಲು, ಅವನು ಇಬ್ಬರಿಗೆ ನಾಟಕದ ಸಾರಾಂಶವನ್ನು ತಿಳಿಸಿ ಹೇಳಿದ.

ಗೋಧ್ರಾ ಪಟ್ಟಣದಲ್ಲಿ ಉಂಟಾದ ಟ್ರೈನ್ ಬೆಂಕಿ ಅನಾಹುತಕ್ಕೆ ಪ್ರತಿಕ್ರಿಯೆಯಾಗಿ ಗುಜರಾತ್‌ನ ಅನೇಕ ಸ್ಥಳಗಳಲ್ಲಿ ಹಿಂದು ತೀವ್ರವಾದಿಗಳು ಮುಸ್ಲಿಂರ ವಿರುದ್ಧ ದಂಗೆ ಏಳುತ್ತಾರೆ. ನೂರಾರು ಮುಸ್ಲಿಂರನ್ನು ಕೊಚ್ಚಿ ಹಾಕುತ್ತಾರೆ. ಎಲ್ಲೆಲ್ಲೂ ಇದೇ ವಿಷಯ ಪತ್ರಿಕೆಗಳಲ್ಲಿ ದೊಡ್ಡ ಸುದ್ದಿಯಾಗುತ್ತದೆ. ಗುಜರಾತ್‌ನ ಹಿಂದು ತೀವ್ರವಾದಿಗಳಿಗೆ ಸಹಮತವನ್ನು ಸೂಚಿಸುವ ಸಲುವಾಗಿ ಮಂಗಳೂರಿನ ಕೆಲವು ಹಿಂದು ಯುವಕರು ಗಲಭೆ ಮಾಡುತ್ತಾರೆ. ಇದು ತೀವ್ರ ಸ್ವರೂಪ ತಾಳಿ, ಆ ಊರಿನ ಸುತ್ತಮುತ್ತ ಹಿಂದು–ಮುಸ್ಲಿಂ ಕೋಮುವಾದದ ದಳ್ಳುರಿಗೆ ನಾಂದಿಯಾಗುತ್ತದೆ. ಎರಡೂ ಕಡೆಯಿಂದ ಹತ್ತಾರು ಜನ ಜೀವ ಕಳೆದುಕೊಳ್ಳುತ್ತಾರೆ. ಹೀಗೆ ಗಲಭೆಗ್ರಸ್ತ ಒಂದು ಓಣಿಯಲ್ಲಿ ಹಿಂದುಗಳು ಕಗ್ಗತ್ತಲಿನ

## ಅಭಿನಂದನೆ

ಕರ್ನಾಟಕ ಸರಕಾರದ (ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ) ವಿಷನ್ ಗ್ರೂಪ್ ನೀಡುವ ೨೦೧೩–೨೦೧೪ನೇ ಸಾಲಿನ **ವಿಜ್ಞಾನ ಸಂವಹನಕಾರ** ಪ್ರಶಸ್ತಿಯನ್ನು ಕನ್ನಡ ವೈದ್ಯಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ ನವಕರ್ನಾಟಕ ಪ್ರಕಾಶನದ ಲೇಖಕರಲ್ಲೊಬ್ಬರೂ ಆದ **ಡಾ॥ ಎನ್. ಗೋಪಾಲಕೃಷ್ಣ** ಅವರಿಗೆ ನೀಡಲಾಗಿದೆ. ಪ್ರಶಸ್ತಿ ಪುರಸ್ಕೃತರಿಗೆ ನವಕರ್ನಾಟಕ – ಹೊಸತು ಬಳಗದ ಅಭಿನಂದನೆಗಳು.

ವೇಳೆ ಅನೇಕ ಮುಸ್ಲಿಂರನ್ನು ಕೊಚ್ಚಿಹಾಕುತ್ತಾರೆ. ಆದರೆ ಅವರಲ್ಲಿ ಒಬ್ಬ ತಾವು ಕೊಂದದ್ದು ಮುಸ್ಲಿಂರನ್ನು ಹೌದೋ ಅಲ್ಲವೋ ಎಂದು ಖಾತ್ರಿಪಡಿಸಿಕೊಳ್ಳಲು ಇಚ್ಛಿಸುತ್ತಾನೆ. ಕೊಲೆಯಾಗಲ್ಪಟ್ಟ ಒಬ್ಬನ ಹೊಟ್ಟೆಯನ್ನು ಬಗೆದು ಸೀಳಿದ ಅವನ ಚೂರಿ ಅದೇ ನೇರ ರೇಖೆಯಲ್ಲಿ ಕೆಳಗಿಳಿದು ಆ ಮನುಷ್ಯನ ಪೈಜಾಮದ ಲಾಡಿಯನ್ನು ಕತ್ತರಿಸಿ ಹಾಕಿ, ಆ ಕಡೆ ಒಂದು ಸಲ ನೋಡಿ "ಛೆ, ಛೆ, ಎಂಥಾ ಮಿಸ್ಟೇಕಾಗಿ ಹೋಯಿತು" ಎಂದು ವಿಷಾದದಿಂದ ಕೂಗುತ್ತಾನೆ. ಅವನ ಜೊತೆಗಿದ್ದವರೆಲ್ಲರಿಗೂ ತಮ್ಮ ತಪ್ಪಿನ ಅರಿವಾಗಿ ತಮ್ಮನ್ನು ತಾವೇ ಶಪಿಸಿಕೊಳ್ಳುತ್ತಾರೆ.

ಈ ಕಥೆಯನ್ನು ಹೇಳಿ ಶಶಿಕಾಂತ್ ನಾಟಕದ ಕೆಲವು ಅಂಶಗಳನ್ನು ಮತ್ತು ಸಂಭಾಷಣೆಗಳನ್ನು ಮೈತ್ರೇಯಿ, ಇಕ್ಬಾಲ್ ಎದುರಿಗೆ ಓದಿ ಹೇಳಿದ. ಆ ನಾಟಕಕ್ಕೆ 'ದಿ ಮಿಸ್ಟೇಕ್' ಅಂತ ಶೀರ್ಷಿಕೆಯನ್ನಿಡಲು ಮೂವರೂ ಒಪ್ಪಿದರು. ಮೈತ್ರೇಯಿ, ಇಕ್ಬಾಲ್‌ಗೆ ಈ ನಾಟಕದ ರಂಗರೂಪ ಇಷ್ಟವಾಗುತ್ತದೆ. ನಾಟಕದ ಅವಧಿ ಒಂದು ಘಂಟೆಯಾಗಿದ್ದರಿಂದ, ಶಶಿಕಾಂತ್ ನಾಟಕಕ್ಕೆ ಸೂಕ್ತವಾಗುವ ಅನೇಕ ತುಳು ಮತ್ತು ಕನ್ನಡ ಕವನದ ಸಾಲುಗಳನ್ನು ಸೇರಿಸಿದ. ಅದಕ್ಕೆ ಸಂಗೀತದ ಲಯವನ್ನು ಕೂಡ ಸಂಯೋಜಿಸಿದ. ಈಗ ಉಳಿದಿರುವುದು ಇಕ್ಬಾಲ್‌ನ ಕೈ ಚಳಕ. ಒಂದೆರಡು ಸಾಲುಗಳನ್ನು ಓದಿದ ನಂತರ ಇಕ್ಬಾಲ್ ಅದಕ್ಕೆ ರಂಗ – ಜೀವ ನೀಡುವುದಕ್ಕೆ ತಯಾರಿ ನಡೆಸಿದ.




**ಮೂರನೇ "ಮಿಸ್ಟೇಕ್"**

ಇಕ್ಬಾಲ್ ಹೈದರಾಬಾದ್ ವಿ.ವಿ.ಗೆ ಹೋಗುವ ಮೊದಲು ಧಾರವಾಡದ ರಂಗಾಯಣದಲ್ಲಿ ರಂಗ ತರಬೇತಿಯನ್ನು ಪಡೆದಿದ್ದ. ತರಬೇತಿಯಲ್ಲಿ ಅವನು ಬೆಳಕಿನ ಸಂಯೋಜನೆ ಮತ್ತು ನಟನೆಯ ಬಗ್ಗೆ ವಿಶೇಷ ಆಸಕ್ತಿ ವಹಿಸಿದ್ದ. ಹೈದರಾಬಾದ್‌ನಲ್ಲಿದ್ದಾಗ ನಾಟಕವನ್ನು ನಿರ್ದೇಶನ ಮಾಡದಿದ್ದರೂ ಅನೇಕ ನಾಟಕಗಳಲ್ಲಿ ಪಾತ್ರ ವಹಿಸುವ ಅವಕಾಶಗಳನ್ನು ಅವನು ಪಡೆದುಕೊಂಡಿದ್ದ. ಸೂಕ್ಷ್ಮಗ್ರಾಹಿಯಾದ ಇಕ್ಬಾಲ್ ನಾಟಕದ ತಾಲೀಮುಗಳಲ್ಲಿ ಭಾಗವಹಿಸುತ್ತಿದ್ದಾಗ, ನಾಟಕ ನಿರ್ದೇಶನದ ಬಗ್ಗೆ ಅನೇಕ ವಿಷಯಗಳನ್ನು ಕಲಿತ. ಆದರೆ ಅದರ ಜವಾಬ್ದಾರಿಯನ್ನು ಅವನು ಯಾವತ್ತೂ ಸ್ವತಃ ನಿಭಾಯಿಸಿರಲಿಲ್ಲ. ಈಗ ಆ ಅವಕಾಶ ಒದಗಿದ್ದು ಅವನಿಗೆ ಖುಷಿಯಾಗಿತ್ತು. ಉತ್ಸಾಹದಿಂದಲೇ ತನ್ನ ಕೆಲಸವನ್ನು ಶುರು ಮಾಡಿದ. ನಾಟಕಕ್ಕೆ ಸರಿ ಸುಮಾರು ೨೦–೨೫ ಪಾತ್ರಗಳು ಬೇಕಾಗಿದ್ದರಿಂದ ಶಶಿಕಾಂತ್ ಮತ್ತು ಮೈತ್ರೇಯಿ ಸ್ನೇಹಿತರ ಜೊತೆಗೆ ತನ್ನ ಇತರ ಮುಸ್ಲಿಂ ಸ್ನೇಹಿತರನ್ನೂ ಸೇರಿಸಿಕೊಂಡ. ಅವರಲ್ಲಿ ಅನೇಕರು ಕೊನೇ ವರ್ಷದ ಡಿಗ್ರಿ ವಿದ್ಯಾರ್ಥಿಗಳೇ ಇದ್ದರು. ನಾಟಕದ ತಾಲೀಮಿನಲ್ಲಿ ಎಲ್ಲರೂ ಬಹು ಉತ್ಸಾಹದಿಂದ ಪಾಲ್ಗೊಂಡರು. ಇಕ್ಬಾಲ್‌ನಂತೂ ಭಾರಿ ಪ್ರೊಫೆಷನಲ್ ನಿರ್ದೇಶಕನ ಹಾಗೆ ವ್ಯವಹರಿಸಿದ. ಎಲ್ಲಾ ನಟರಿಗೂ ನಾಟಕದ ಒಂದೊಂದು ಪ್ರತಿ ಕೊಟ್ಟು ನಾಟಕದ ಉದ್ದೇಶ, ಸಂಭಾಷಣೆಗಳ ಅರ್ಥ, ಪಾತ್ರಗಳ ಪರಿಚಯ, ಈ ನಾಟಕದ ಪ್ರಾಮುಖ್ಯತೆಯನ್ನು ಮನವರಿಕೆ ಮಾಡಿಕೊಟ್ಟು, ಎಲ್ಲರಿಗೂ ಒಪ್ಪಿಗೆಯಾದ ಮೇಲೆ ರಂಗ ತಾಲೀಮನ್ನು ಶುರು ಮಾಡಿದ. ಪಾತ್ರಗಳು ಯಾವ ರೀತಿಯಲ್ಲಿ ಸ್ವರೋಚ್ಚಾರಣೆ ಮಾಡಬೇಕು, ದನಿಯ ಏರಿಳಿತಗಳು, ಮಿಕ್ಕ ಪಾತ್ರಗಳ ಸ್ವಭಾವ–ವ್ಯಕ್ತಿತ್ವಗಳ ಪರಿಚಯ, ಯಾವ ಭಾವನೆಗಳನ್ನು ಯಾವ ಸಂದರ್ಭದಲ್ಲಿ ಪ್ರಕಟಿಸಬೇಕು, ಇತ್ಯಾದಿಗಳನ್ನು ಇಕ್ಬಾಲ್ ಬಲು ಜಾಗ್ರತೆಯಿಂದ ನೋಡಿಕೊಂಡ. ಇಕ್ಬಾಲ್‌ನ ರಂಗಸಜ್ಜಿಕೆ, ಬೆಳಕಿನ ವಿನ್ಯಾಸ, ಇತ್ಯಾದಿಗಳು ಎಲ್ಲರ ಮೆಚ್ಚುಗೆಗೆ ಪಾತ್ರವಾದವು. ವಿಶೇಷವಾಗಿ ಯಕ್ಷಗಾನದ ಒಂದು ಪ್ರಸಂಗ. ನಾಟಕದ ಒಂದು ಸನ್ನಿವೇಶದಲ್ಲಿ ಕೋಮು ದಳ್ಳುರಿಯ ವಿಕಾರ ಸ್ವರೂಪವನ್ನು ವಿಡಂಬಿಸಲು ರಂಗದ ಹಿಂಭಾಗದ ವಿಶಾಲವಾದ ಬಿಳಿ ಪರದೆಯ ಹಿಂದೆ ಬೆಳಕು–ನೆರಳಿನ ಮೂಲಕ ಯಕ್ಷಗಾನದ ಭೂತದ ಪ್ರಳಯ ನೃತ್ಯವನ್ನು ತೋರಿಸುವ ದೃಶ್ಯವನ್ನು ಎಲ್ಲರೂ ಮೆಚ್ಚಿಕೊಂಡರು. ಅದರ ಸಾಂಕೇತಿಕತೆಯ ಬಗ್ಗೆ ಎಲ್ಲರೂ ಬೆರಗಾದರು. ಇದಕ್ಕಾಗಿ ಇಕ್ಬಾಲ್ ಪುತ್ತೂರಿನ ಅಬ್ಬಾಸ್ ಕಿನ್ನಿಗೋಳಿಯ ತಂಡವನ್ನು ಕೇಳಿಕೊಂಡ. ಅಬ್ಬಾಸ್ ಯಕ್ಷಗಾನವನ್ನು ಆಡುತ್ತಿದ್ದ ಕೆಲವೇ ಕೆಲವು ಮುಸ್ಲಿಂ ಕಲಾಕಾರರಲ್ಲಿ ಒಬ್ಬ. ಅವನೂ ಕೂಡ ನಾಟಕದಲ್ಲಿ ಭಾಗವಹಿಸಲು ಒಪ್ಪಿದ. ಶಶಿಕಾಂತ್ ಈ ಯಕ್ಷಗಾನದ ನೃತ್ಯಕ್ಕೆ ಹಾಡನ್ನು ಹೊಂದಿಸಿದ್ದು ಅದ್ಭುತವಾಗಿದೆ ಎಂದು ಎಲ್ಲರೂ ಸಮ್ಮತಿಸಿದರು. ನಾಟಕದುದ್ದಕ್ಕೂ ಅನೇಕ ಸಂಕೇತಗಳನ್ನು ಬಳಸುವ ವ್ಯವಸ್ಥೆಯನ್ನು ಅವನು ಮಾಡಿಕೊಂಡ. ಮಾತಿನಲ್ಲಿ ಹೇಳಲಾಗದ್ದನ್ನು ಸಂಕೇತಗಳ ಮೂಲಕ ತೋರಿಸುವ ತಂತ್ರವಿದು. ರಂಗಸಜ್ಜಿಕೆ, ವಸ್ತ್ರ ವಿನ್ಯಾಸಗಳಿಗೆ ಮತ್ತು ಪ್ರಸಾಧನಕ್ಕೆ ಹೆಚ್ಚಿನ ಹಣ ಬೇಕಾಗಿದ್ದರಿಂದ ಅವುಗಳನ್ನು ಸರಳವಾಗಿಸುವ ಯೋಜನೆ ಇತ್ತು. ಆದರೆ ಅದೇ ಸಂದರ್ಭದಲ್ಲಿ ಮಂಗಳೂರಿನ 'ಸಹಮತ ವೇದಿಕೆ'ಯ ಸಂಘಟಕರು ಇವರ ನಾಟಕಕ್ಕೆ ಪ್ರಾಯೋಜಕರಾಗಿ ಮುಂದೆ ಬಂದರು. ಬರುವುದಷ್ಟೆ ಅಲ್ಲ, ನಾಟಕಕ್ಕೆ ಬೇಕಾಗುವ ಸಾಂಕೇತಿಕ ಪರಿಕರಗಳನ್ನು ಹೊಂದಿಸುವಲ್ಲಿ ಇಕ್ಬಾಲ್‌ಗೆ ಸಹಾಯ ಮಾಡಿದರು. ಇವರ ಪ್ರಾಯೋಜಕತ್ವದಿಂದ ನಾಟಕದಲ್ಲಿ ಶಾಮೀಲಾದವರಿಗೆಲ್ಲಾ ಸಂತೋಷವೋ ಸಂತೋಷ. ರಂಗಸಜ್ಜಿಕೆಯ ಅನೇಕ ವಿಷಯಗಳಲ್ಲಿ ಇಕ್ಬಾಲ್‌ನಿಗೆ ಇದ್ದ ಪಾಂಡಿತ್ಯ ಮತ್ತು ಅನುಭವವನ್ನು ನೋಡಿ ಅಲ್ಲಿರುವ ವಿದ್ಯಾರ್ಥಿ–ಪಾತ್ರಧಾರಿಗಳು ಬೆರಗಾದರು. ಅವನ ಡೈನಾಮಿಸಂಅನ್ನು ನೋಡಿ ತಾವೂ ಸಕ್ರಿಯರಾಗಿ ಭಾಗವಹಿಸಿದರು. ಎಲ್ಲರಿಗೂ ಎಂಥದೋ ಖುಷಿ. ನಾಟಕದಲ್ಲಿ ಭಾಗವಹಿಸುವುದರ ಜೊತೆಗೆ ಮೈತ್ರೇಯಿ ಆಯ್ಕೆ ಮಾಡಿಕೊಂಡ ಕಥೆ, ಅದಕ್ಕೆ ಅವಳು ನೀಡುತ್ತಿರುವ ವ್ಯಾಖ್ಯಾನ ಅವರಿಗೆ ಹೊಸ ಪಾಠಗಳನ್ನು ಕಲಿಸುತ್ತಿದ್ದವು. ನಾಟಕದ ತಾಲೀಮು ೨೦ ದಿನಗಳ ಕಾಲ ಸಾಂಗೋಪಾಂಗವಾಗಿ ಸಾಗಿತು. ಈ ನಾಟಕದ ಮೊದಲ ಪ್ರದರ್ಶನವು ಸುರತ್ಕಲ್‌ನಲ್ಲಿರಲಿ ಎಂದು ಇಕ್ಬಾಲ್ ಸೂಚಿಸಿದ್ದನ್ನು ಎಲ್ಲರೂ ಅನುಮೋದಿಸಿದರು. ಇದರ ಬಗ್ಗೆ ಚರ್ಚೆ ನಡೆಯುತ್ತಿರಬೇಕಾದರೆ ಮೈತ್ರೇಯಿ ಹೇಳಿದಳು, "ನಮ್ಮ ಪ್ರದರ್ಶನಕ್ಕೆ ಮೊದಲು ಇದನ್ನು ರಾಮೇಶ್ವರ ಬಾಯರಿಯವರಿಗೆ ತೋರಿಸೋಣ. ಅವರು ಏನಾದ್ರು ಸಲಹೆಗಳನ್ನು ನೀಡಿದರೆ ನಮ್ಮ ನಾಟಕಕ್ಕೆ ಒಳ್ಳೇದು ಅಲ್ಲವೇ ?"

ಬಾಯರಿಯವರು ಈ ಮೂವರ ಗುರುಗಳಾಗಿದ್ದರು. ಈಗ ಅವರಿಗೆ ಸುಮಾರು ೬೫ ವರ್ಷ. ಈ ಮೂವರ ಮುಕ್ತ ಮನಸ್ಸಿಗೆ ಬಾಯರಿಯವರ ವ್ಯಕ್ತಿತ್ವವೇ ಕಾರಣವಾಗಿತ್ತು. ಅಂತಹ ಪ್ರಭಾವ ಬೀರುವ ವ್ಯಕ್ತಿತ್ವ ಅವರದು. ಹೈದರಾಬಾದ್‌ಗೆ ಹೋಗಿ ಉನ್ನತ ವ್ಯಾಸಂಗವನ್ನು ಮಾಡಬೇಕೆಂದು ಈ ಮೂವರಿಗೂ ಹೇಳಿದ್ದೇ ಇವರು. ಅವರು ಒಂದು ರೀತಿಯಲ್ಲಿ ಈ ಮೂವರಿಗೂ ಗುರು ಮಾತ್ರ ಅಲ್ಲ, ಸ್ನೇಹಿತರೂ ಹೌದು. ಮೈತ್ರೇಯಿಯ ಸೂಚನೆಯನ್ನು ಶಶಿಕಾಂತ್ ಅನುಮೋದಿಸುತ್ತಾ "ಹಾಗಾದ್ರೆ, ಪ್ರೊ॥ ತಾರಕನಾಥ್ ಮತ್ತು ಪ್ರೊ॥ ನಿಖಿಲಾರನ್ನೂ ಸಹ ಕರೆಯೋಣ. ಪ್ರೊ॥ ನಿಖಿಲಾ ಯಾವುದೋ ಕೆಲಸದ ಮೇಲೆ ಭಟ್ಕಳದಲ್ಲಿದ್ದಾರೆ. ಮೈತ್ರೇಯಿ ಕರ್ದ್ರೆ ಅವರು ಬಂದೇ ಬರ್ತಾರೆ. ಅವರ ಪ್ರಿಯ ಶಿಷ್ಯೆ ಅಲ್ವ ಇವಳು. ಪ್ರೊ॥ ತಾರಕನಾಥ್ ಬೆಂಗಳೂರಿನಲ್ಲಿದ್ದಾರೆ. ನಾವು ರಿಕ್ವೆಸ್ಟ್ ಮಾಡ್ಕೊಂಡ್ರೆ ಖಂಡಿತ ಬರುತ್ತಾರೆ. ಏನಂತೀರ ?" ಎಂದು ಅವರ ಉತ್ತರಕ್ಕಾಗಿ ಕಾದ. ಇವರುಗಳ ಉಪಸ್ಥಿತಿಗೆ ಯಾರದೇ ವಿರೋಧವಿರಲಿಲ್ಲ. ಒಂದೆರಡು ದಿನದಲ್ಲಿ ಅವರ ಮುಂದೆ ಪ್ರದರ್ಶನ ನೀಡುವುದೆಂದು ನಿರ್ಧಾರವಾಯಿತು. ನಾಟಕದ ಪಾತ್ರಧಾರಿಗಳಿಗಂತೂ ಬರುವ ಅತಿಥಿಗಳ ಮುಂದೆ ನಾಟಕ ಪ್ರದರ್ಶನ ಮಾಡುವುದು ಅವರ ಉತ್ಸಾಹವನ್ನು ಇಮ್ಮಡಿಸಿದುದಲ್ಲದೆ, ಸ್ವಲ್ಪ ಆತಂಕವನ್ನೂ ಸಹ ಉಂಟುಮಾಡಿತು. ಎಲ್ಲಿ ಇವರ ಮುಂದೆ ತಪ್ಪು ಮಾಡುತ್ತೇವೆಯೋ ಎಂದು !

೨

ತಾಲೀಮನ್ನು ನೋಡಿದ ಮೂವರು ಅತಿಥಿಗಳೂ ನಾಟಕವನ್ನು ಬಹುವಾಗಿ ಮೆಚ್ಚಿಕೊಂಡರು. ಮಾಂಟೋನ ಅತ್ಯಂತ ಸಣ್ಣ ಕಥೆಯನ್ನು ಒಂದು ಘಂಟೆಯ

ನಾಟಕವನ್ನಾಗಿ ಪರಿವರ್ತಿಸಿದ್ದು ನಿಖಿಲಾಗೆ ಹುಬ್ಬೇರಿಸುವಂತೆ ಮಾಡಿತು. ಕಥೆಯನ್ನು ಈ ರೀತಿಯಲ್ಲೂ ಮಾಡಬಹುದೇ ಎಂದು ತಮ್ಮ ಆಶ್ಚರ್ಯವನ್ನು ವ್ಯಕ್ತಪಡಿಸಿದರು. ಚುರುಕಿನ ಸಂಭಾಷಣೆ ಮತ್ತು ನಾಟಕದಲ್ಲಿ ಸೇರಿಸಿರುವ ಹೊಸ ಹೊಸ ಸಂಗತಿಗಳು, ಸಂಕೇತಗಳನ್ನು ನೋಡಿದ ತಾರಕನಾಥರು ಶಶಿಕಾಂತ್ ಮತ್ತು ಇಕ್ಬಾಲ್‌ನ ಸೃಜನಶೀಲತೆಯನ್ನು ಮೆಚ್ಚಿಕೊಂಡರು. ನಾಟಕದವರೆಲ್ಲರೂ ಎಲ್ಲವೂ ಸರಿಯಾಗಿ ಇತ್ತು ಅಂತ ನಿಟ್ಟುಸಿರುಬಿಡುತ್ತಿದ್ದ ಹಾಗೆ, ಬಾಯರಿಯವರ ಹಣೆಯ ಮೇಲೆ ಕಾಳಜಿ ಮತ್ತು ಆತಂಕಭರಿತದ ಗೆರೆಗಳು ಮೂಡಿದವು. ಇದನ್ನು ಗಮನಿಸಿದ ಮೈತ್ರೇಯಿ ತಕ್ಷಣ, "ಸರ್, ನಿಮಗೇನನಿಸಿತು ಅಂತ ಹೇಳಲಿಲ್ವಲ್ಲ ? ನಿಮಗೆ ಯಾವುದೋ ಅಂಶ ಸರಿ ಬೀಳಲಿಲ್ಲ ಅನಿಸುತ್ತೆ. ಅದೇನು ಅಂತ ಹೇಳ್ತಿರಾ ? ಎಂದು ಕೇಳಿದಳು." ಬಾಯರಿಯವರು ತಕ್ಷಣ ಉತ್ತರ ನೀಡಲಿಲ್ಲ.

ಇದನ್ನು ಗಮನಿಸಿದ ಇಕ್ಬಾಲ್, "ನೀವ್ಯಾಕೋ ಹಿಂಜರಿಯುತ್ತಿರುವ ಹಾಗಿದೆ ? ಏಕೆ ? ಅದೇನೆಂದು ಹೇಳಿ. ನಮ್ಮ ನಾಟಕಕ್ಕೆ ಒಳ್ಳೇದು ಅನಿಸಿದರೆ ನೀವು ನೀಡುವ ಯಾವುದೇ ಸಲಹೆಯನ್ನು ನಾವು ಖಂಡಿತ ಅಳವಡಿಸಿಕೊಳ್ಳುತ್ತೇವೆ" ಅಂದ. ಬಾಯರಿಯವರು ಬಾಯಿ ಬಿಡದೇ ಇರೋದನ್ನು ನೋಡಿ ಉಳಿದವರೆಲ್ಲರಿಗೂ ಸ್ವಲ್ಪ ಆತಂಕವುಂಟಾಯಿತು. ಇನ್ನು ಎಷ್ಟು ಹೊತ್ತು ಹೀಗೆ ಮೌನವಾಗಿರೋದು ಎಂದು ಬಾಯರಿಯವರು,

"ನಾಟಕ ಸೊಗಸಾಗಿ ಬಂದಿರೋದರಲ್ಲಿ ಎರಡು ಮಾತಿಲ್ಲ. ನಿಮ್ಮ ಉತ್ಸಾಹ, ಕುಶಲತೆ, ಸೃಜನಶೀಲತೆ, ಎಲ್ಲವೂ ಮೆಚ್ಚುವಂಥದ್ದೆ. ಆದರೆ...." ಅವರು ಮಾತು ಮುಂದುವರಿಸದಿದ್ದುದನ್ನು ನೋಡಿ ಶಶಿಕಾಂತ್ ತಡೆದುಕೊಳ್ಳಲಾರದೆ,

"ಮಾತನ್ನು ಮುಗಿಸಿ. ದಯವಿಟ್ಟು ನಿಲ್ಲಿಸಬೇಡಿ" ಎಂದು ಉದ್ವೇಗದಿಂದ ಕೇಳಿದ.

"ನಿಮ್ಮ ನಾಟಕದ ಉದ್ದೇಶ ಘನವಾದದ್ದೆ. ನಾಟಕವೂ ಕೂಡ ಪರಿಣಾಮಕಾರಿ ಯಾಗಿ ಬಂದಿದೆ. ಆದರೆ ನೀವು ನಾಟಕ ಆಡದಿರುವುದೇ ಒಳ್ಳೇದು !!"

"ಏನು ? ನಾಟಕ ಆಡಬಾರದ ? ಏಕೆ ? ನೀವೆ ತಾನೆ ಈ ನಾಟಕದ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿ ನಮಗೆ ಬೆನ್ನುತಟ್ಟಿ ಪ್ರೋತ್ಸಾಹಿಸಿದವರು. ಈಗ ನೀವೇ ಹೀಗೆ ಹೇಳಿದರೆ ಹೇಗೆ ?" ಎಂದು ಏನೂ ಅರ್ಥವಾಗದವನಂತೆ ಶಶಿಕಾಂತ್ ತಳಮಳಗೊಂಡ. ಅವನ ಜೊತೆಗಿರುವವರೆಲ್ಲರಿಗೂ ಇದೇ ಅನುಭವ. ಇವರಿಗೆ ಹೇಗೆ ಬಿಡಿಸಿ ಹೇಳಬೇಕು ಎಂದು ಬಾಯರಿ ತಡವರಿಸುತ್ತಿದ್ದಾಗ, ಏನೋ ಉಪಾಯ ಹೊಳೆದಂತೆ "ನೀವು ನಾಟಕವಾಡುವುದಾದರೆ ಅದರಲ್ಲಿನ ಕೆಲವೊಂದು ಸಂಕೇತಗಳನ್ನು ತೆಗೆದುಹಾಕೋದೆ ಒಳ್ಳೇದು" ಎಂದು ಹೇಳಿದರು.

"ಯಾಕೆ ?" ಇಕ್ಬಾಲ್ ಕಳವಳದಿಂದ ಕೇಳಿದ.

"ಅವು..." ಮುಂದುವರಿಸಲಾರದೆ ಬಾಯರಿಯವರು ಮತ್ತೆ ಮೌನವಾದರು.

"ಸರ್, ಏನು ಹೇಳಬೇಕೆಂದಿದ್ದಿರೋ ಬೇಗ ಹೇಳಿ. ನಮ್ಮನ್ನು ಕತ್ತಲಲ್ಲಿಡಬೇಡಿ. ಈ ನಾಟಕ ನಮ್ಮ ಮೊದಲ ಪ್ರಯತ್ನ. ಇದರಲ್ಲಿ ಯಾವುದೇ ವಿಘ್ನಗಳಿರಬಾರದು" – ಒಂದೇ ಉಸಿರಲ್ಲಿ ಮೈತ್ರೇಯಿ ಬೇಡಿಕೊಂಡಳು. ಬಾಯರಿಯವರ ಸಂದಿಗ್ಧತೆಯನ್ನು ಅರ್ಥಮಾಡಿಕೊಂಡ ತಾರಕನಾಥ್, "ಬಾಯರಿಯವರೆ, ನೀವು ಏನನ್ನು ಹೇಳ ಬೇಕೆಂದಿದ್ದಿರೋ ಹೇಳಿ. ನಾಟಕ ಆಡಕೂಡದೆಂದು ಹೇಳಿದಿರಿ. ಇದು ನನಗೂ ಕೂಡ ಆಶ್ಚರ್ಯವನ್ನುಂಟುಮಾಡಿದೆ. ದಯವಿಟ್ಟು ಬಿಡಿಸಿ ಹೇಳಿ. ಯಾಕೆ ಆಡಕೂಡದು ?"

"ನನಗೆ ಸಮಸ್ಯೆ ಇರೋದು ನಾಟಕದಲ್ಲಿ ಬಳಸಿರುವ ಸಂಕೇತಗಳ ಬಗ್ಗೆ"

"ಯಾಕೆ ? ಅದರಲ್ಲಿ ತಪ್ಪೇನು ? ನೂರಾರು ಮಾತುಗಳನ್ನು ಒಂದು ಸಂಕೇತದಲ್ಲಿ ತಿಳಿಸಬಹುದು ಅಲ್ಲವೇ ಬಾಯರಿಯವರೆ ?" ನಿಖಿಲಾ ಕೇಳಿದರು.

"ಹೌದು. ನೀವು ಹೇಳಿದ್ದು ಸರಿ. ಇಲ್ಲ ಅಂತ ಯಾರೂ ಹೇಳೋಲ್ಲ. ಆದರೆ ಈಗಿನ ಮತೀಯವಾದಿ ಪರಿಸ್ಥಿತಿಯಲ್ಲಿ ಈ ಸಂಕೇತಗಳನ್ನು ಉಪಯೋಗಿಸುವುದು ಉಚಿತವಾಗಿ ಕಾಣುವುದಿಲ್ಲ"

"ಯಾಕೆ ?" ಎಂದು ಮೈತ್ರೇಯಿ, ಶಶಿಕಾಂತ್ ಮತ್ತು ಇಕ್ಬಾಲ್ ಒಟ್ಟಿಗೆ ಕೇಳಿದರು.

"ಯಾಕೆಂದರೆ ನಾಟಕದ ಕೆಲವು ಸಂಕೇತಗಳು ನಿಮ್ಮ ನಾಟಕ ಪ್ರಾಯೋಜಿಸುತ್ತಿರುವ ಸಂಘಟನೆಗೆ ನೇರವಾಗಿ ಸಂಬಂಧಿಸಿರುವುದು."

"So what ?" ಅರ್ಥವಾಗಲಿಲ್ಲ ಅನ್ನುವ ರೀತಿಯಲ್ಲಿ ಮೈತ್ರೇಯಿ ಪ್ರಶ್ನೆ ಕೇಳಿದಳು.

'ಸಹಮತ ವೇದಿಕೆ' ಒಂದು ರಾಜಕೀಯ ಪಕ್ಷದ ಸಾಂಸ್ಕೃತಿಕ ಸಂಘಟನೆ. ಅವರು ಈ ನಾಟಕವನ್ನು ಪ್ರಾಯೋಜಿಸುತ್ತಿರುವುದು ತನ್ನ ಉದ್ದೇಶಕ್ಕಾಗಿ. ನಿಮ್ಮ ಉದ್ದೇಶವನ್ನು ಅವರು ಗಮನದಲ್ಲಿಟ್ಟುಕೊಂಡಿಲ್ಲ. ಈ ಸಂಘಟನೆಯ ಹಿನ್ನೆಲೆಯ ಬಗ್ಗೆ ತಿಳಿಯದೆ ಅವರ ಪ್ರಾಯೋಜಕತ್ವವನ್ನು ಒಪ್ಪಿಕೊಂಡದ್ದು ತಪ್ಪು ಎಂದು ಬಾಯರಿಯವರು ಪರೋಕ್ಷವಾಗಿ ಹೇಳುತ್ತಿದ್ದುದು ಮೈತ್ರೇಯಿ, ಶಶಿಕಾಂತ್ ಮತ್ತು ಇಕ್ಬಾಲ್‌ಗೆ ಅರಿಯಲು ಹೆಚ್ಚು ಹೊತ್ತು ಬೇಕಾಗಲಿಲ್ಲ.

"ಇತ್ತೀಚೆಗೆ ಈ 'ವೇದಿಕೆ'ಯು 'ಸಮರಸಿಂಹ ಸೇನೆ'ಯವರ ಜೊತೆ ಗಲಾಟೆ ಮಾಡಿಕೊಂಡಿದೆ. ಇಬ್ಬರಿಗು ಉಡುಪಿಯಲ್ಲಿ ಮಾರಾಮಾರಿ ಕೂಡ ಆಗಿದೆ. ನಿಮಗೆಲ್ಲಾ ಗೊತ್ತಿರುವ ಹಾಗೆ 'ಸಮರಸಿಂಹ ಸೇನೆ' ಕೂಡ ಮತ್ತೊಂದು ರಾಜಕೀಯ ಪಕ್ಷದ ಸಾಂಸ್ಕೃತಿಕ ಸಂಘಟನೆ. ಇವರಲ್ಲಿ ಅನೇಕರು ಹಿಂದು ತೀವ್ರವಾದಿಗಳು ಇದ್ದಾರೆ. ಹಿಂದುತ್ವದ ಹೆಸರಲ್ಲಿ ಇವರು 'ವೇದಿಕೆ'ಯನ್ನು ಮತ್ತು ಅಲ್ಪಸಂಖ್ಯಾತರನ್ನು ಟಾರ್ಗೆಟ್ ಮಾಡೋಕೆ ಸದಾ ಕಾಯ್ತಾ ಇದ್ದಾರೆ. ಇತ್ತೀಚೆಗಂತೂ ಇವರು ಮೇಲುಗೈ ಸಾಧಿಸಿದ್ದಾರೆ. ಕಳೆದ ತಿಂಗಳಲ್ಲಿ ಮಂಗಳೂರಲ್ಲಿ ಆದ ಗಲಭೆಯಲ್ಲಿ ಇವರ ಪಾತ್ರ ಬಹುಮುಖ್ಯ. ಈಗ ಯಾವುದೇ ಕೆಲಸವಿಲ್ಲದೇ, 'ಲವ್' 'ಜಿಹಾದ್' ಅಂತ ಹೇಳಿಕೊಂಡು ಅದರ ವಿರುದ್ಧ ಸಮರವನ್ನು ಸಾರಲು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಪರಿಸ್ಥಿತಿ ಯಾವಾಗಲಾದರೂ ಸ್ಫೋಟಗೊಳ್ಳ ಬಹುದು. ಆದ್ದರಿಂದ..." ಅವರ ಮಾತನ್ನು ಮೊಟಕುಗೊಳಿಸಿ ತಾರಕನಾಥ್‌ರು, "ಒಂದು ಸಂಘಟನೆಗೆ ಮತ್ತೊಂದು ಸಂಘಟನೆಯೇ ಸರಿಯಾದ ಉತ್ತರವಲ್ಲವೆ ? ಜೊತೆಗೆ 'ಸಹಮತ ವೇದಿಕೆ'ಯವರು ನಮ್ಮ ಹುಡುಗರ ಉದ್ದೇಶಕ್ಕೆ ಅನುಗುಣವಾಗಿದ್ದಾರೆ. ಇದರಲ್ಲಿ ಸಮಸ್ಯೆ ಏನು ?" ಎಂದರು.

"ನೀವು ಹೇಳೋದು ಸರಿ. ಆದರೆ ನನಗೆ ತಿಳಿದ ಮಟ್ಟಿಗೆ 'ಸೇನೆ'ಯ ಕಡೆಯವರು 'ವೇದಿಕೆ'ಯವರ ಮೇಲೆ ಕಾಲುಕೆದರಿ ಜಗಳಕ್ಕೆ ಸಿದ್ಧರಾಗುತ್ತಿದ್ದಾರೆ. 'ವೇದಿಕೆ'ಯವರು ಕೂಡ ಇಲ್ಲಿ ತಳವೂರಲು ಕಾಯುತ್ತಿದ್ದಾರೆ. ಇಬ್ಬರಿಗೂ ಒಂದು ಸದವಕಾಶಬೇಕು, ತಮ್ಮ ತಮ್ಮ ಉದ್ದೇಶಗಳನ್ನು ಸಾಧಿಸಲು. 'ವೇದಿಕೆ'ಯವರಿಗೆ ಹಣ – ಜನಬಲ ಎರಡೂ ಇರೋದ್ರಿಂದ 'ಸೇನೆ'ಯ ಕೆಂಗಣ್ಣಿಗೆ ಗುರಿಯಾಗಿರೋದು. 'ವೇದಿಕೆ'ಯವರು ಇತ್ತೀಚೆಗೆ ಸಂಗೀತ – ನಾಟ್ಯ ಕಾರ್ಯಕ್ರಮದ ಉದ್ಘಾಟನೆಯನ್ನು ಅವರ ಕಡೆಯ ಒಬ್ಬ ಪ್ರಭಾವಿ ರಾಜಕೀಯ ವ್ಯಕ್ತಿಯಿಂದ ನೆರವೇರಿಸಿದರು. ಇದು 'ಸೇನೆ' ಕಡೆಯವರನ್ನು ಪ್ರಚೋದಿಸಿದ್ದು, ಎಲ್ಲಾ ಕಡೆ ಸುದ್ದಿಯಾಗಿದ್ದು ಬಹುಶಃ ನಿಮಗ್ಯಾರಿಗೂ ತಿಳಿದಿರಲಿಕ್ಕಿಲ್ಲ. ಹೀಗಾಗಿ 'ಸೇನೆ' ಯವರು 'ವೇದಿಕೆ'ಯವರ ಮೇಲೆ ಹಾಯ್ದುಹೋಗಲು ಕಾಯುತ್ತಿದ್ದಾರೆ. ಅದಕ್ಕಾಗಿ ಈ ನಾಟಕವು ಅವಕಾಶ ಮಾಡಿಕೊಟ್ಟ ಹಾಗೆ ಆಗುತ್ತದೆ ಎಂದು ನನ್ನ ಆತಂಕ. 'ವೇದಿಕೆ'ಯವರಿಂದ ಪ್ರಾಯೋಜಕತ್ವ ಪಡೆದಿರುವುದರಿಂದ ಸೇನೆಯವರು ನಿಮ್ಮ ಮೇಲೂ ಬೀಳಬಹುದು. ಅವರಿಬ್ಬರ ಮನಸ್ತಾಪಕ್ಕೆ ನೀವು ಬಲಿಯಾಗಬಾರದು."

"ನಮ್ಮ ಮೇಲೆ ಯಾಕೆ ಬೀಳುತ್ತಾರೆ ? ಅವರ ದ್ವೇಷ ಇರೋದು 'ವೇದಿಕೆ'ಯವರ ಮೇಲೆ ಅಲ್ಲವೇ ? ಜೊತೆಗೆ ಇದು ನಮ್ಮ ನಾಟಕ 'ವೇದಿಕೆ'ಯವರದಲ್ಲವಲ್ಲ ?"

"ಆದರೆ ನೀವು ಆಡುತ್ತಿರುವ ನಾಟಕ ಕೋಮು ದಳ್ಳುರಿಯ ವಿರುದ್ಧ. ಅದರಲ್ಲಿ ಹಿಂದು ಕೋಮುವಾದಿಗಳನ್ನು ವಿಡಂಬಿಸುತ್ತಿದ್ದೀರ. ಅದೂ ಕೂಡ ಮಾಂಟೋನ ಕಥೆಯನ್ನ ಇಟ್ಟುಕೊಂಡು !"

"ಮಾಂಟೋ ಆದರೇನು, ಬೇರೆಯವರಾದರೇನು, ನಮ್ಮ ವಿಚಾರಗಳಿಗೆ ಮಾಂಟೋನ ಕಥೆ ಒಂದು ಮಾಧ್ಯಮ ಅಷ್ಟೆ. ಅವನ ಕಥೆಗಳಲ್ಲಿ ಕಾಣುವ ಮಾನವೀಯತೆ ಮುಖ್ಯವೆ ಹೊರತು ಇನ್ನ್ಯಾವುದು ಅಲ್ಲ" ಮೈತ್ರೇಯಿ ದೃಢವಾದ ದನಿಯಲ್ಲಿ ಹೇಳಿದಳು.

"ಮಾಂಟೋ ನಿಮಗೆ ಮಾನವೀಯ ಲೇಖಕನಾಗಿ ಕಾಣುತ್ತಾನೆ. ಆದರೆ 'ಸೇನೆ' ಯವರಿಗೆ ಅವನು ಪಾಕಿಸ್ತಾನದವನು. ಜೊತೆಗೆ ಈ ನಾಟಕದಲ್ಲಿ 'ವೇದಿಕೆ'ಯ ವಿಚಾರ ಗಳಿಗೆ ಸಂವಾದಿಯಾಗಿ ಸಂಕೇತಗಳನ್ನು ಉಪಯೋಗಿಸಿರುವುದು ಅವರಿಗೆ ನಾಟಕದ ಮೂಲಕ ಮನ್ನಣೆ ನೀಡಿದ ಹಾಗೆ. ಮನ್ನಣೆ ನೀಡುವುದು ನಿಮ್ಮ ಉದ್ದೇಶವೇ ?

"ಇಲ್ಲ" ಎಂದು ಮೂವರೂ ಒಟ್ಟಿಗೆ ಉತ್ತರಿಸಿದರು.

"'ವೇದಿಕೆ'ಯ ಮೇಲೆ ಇರುವ ದ್ವೇಷವನ್ನು ಈ ನಾಟಕದ ಮೇಲೆ ತೀರಿಸಿ ಕೊಳ್ಳಲು 'ಸೇನೆ'ಯವರು ಹಿಂಜರಿಯುವುದಿಲ್ಲ. ಹಿಂದೆ ಅವರು ಹಾಗೆ ನಡೆದು ಕೊಂಡಿದ್ದಾರೆ. ಖ್ಯಾತ ಕಲಾಕಾರನಾದ ಮುಸ್ತಫಾನ ಕೆಲವೊಂದು ತೈಲ ಚಿತ್ರಗಳು ಹಿಂದು ದೇವತೆಗಳ ವಿರುದ್ಧವಾಗಿವೆಯೆಂಬ ಕಾರಣದಿಂದ ಇದೇ ಜನ ಅವರ ಚಿತ್ರಗಳನ್ನು ಧ್ವಂಸಮಾಡಿದರು. ಹಾಗಾಗಿ ಈ ನಾಟಕದ ಬಗ್ಗೆ ನನಗೆ ಕಳವಳವುಂಟಾಗಿದ್ದು. ಇಲ್ಲಿ ಮತ್ತೊಂದು ವಿಚಾರ ಇದೆ" ಎಂದು ಮತ್ತೊಮ್ಮೆ ಬಾಯರಿ ಸುಮ್ಮನಾದರು, ಹೇಗೆ ಹೇಳಬೇಕೆಂದು ತಿಳಿಯಲಾರದೆ.

"ಏನು ?" ಎಂದು ಇಕ್ಬಾಲ್ ಭಾವಾವೇಶದಿಂದ ಕೇಳಿದ.

" 'ಸೇನೆ'ಯವರು ನಿಮ್ಮ ಮೇಲೂ ಕಣ್ಣು ಹಾಕಿದ್ದಾರೆ. ಮುಸ್ಲಿಂ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ನಾಟಕವಾಡುತ್ತಿರುವುದು ಅವರಿಗೆ ಇಷ್ಟವಿಲ್ಲ. ಹಾಗಾಗಿ ಈ ವಿಷಯ ಎಲ್ಲಿಯವರೆಗೆ ಹೋಗುತ್ತದೆಯೋ ಗೊತ್ತಿಲ್ಲ. ಜೊತೆಗೆ ಇಲ್ಲೊಂದು ಸೂಕ್ಷ್ಮ ವಿಷಯವೂ ಇದೆ" ತಕ್ಷಣ ಅವರಿಗೆ ಬಾಯಿ ತಪ್ಪಿ ಹೇಳಿದ್ದು ಅರಿವಾಯಿತು.

"ಏನದು ?" ಎಂದು ಶಶಿಕಾಂತ್ ಕೇಳಿದ. ಆದರೆ ಈ ಸಲ ಬಾಯರಿ ಈ 'ಸೂಕ್ಷ್ಮ' ವಿಷಯವನ್ನು ಹೇಳಲು ಒಪ್ಪಲೇಇಲ್ಲ. ಅದು ಖಾಸಗಿ ವಿಷಯಕ್ಕೆ ಸಂಬಂಧಿಸಿದೆಂದು, ಅದನ್ನು ನಿರ್ಲಕ್ಷಿಸುವುದೇ ಉತ್ತಮವೆಂದು ವಿಷಯವನ್ನು ಮೊಟಕುಗೊಳಿಸಿದರು. "ಜಾಗ್ರತರಾಗಿ ಇರಿ" ಎಂದು ಹೇಳಿ ಬಾಯರಿ, ತಾರಕನಾಥ್ ಮತ್ತು ನಿಖಿಲಾ ತಾಲೀಮಿನ ಸ್ಥಳದಿಂದ ಹೊರಗೆ ಬಂದರು.

೩

"ಅದೇನೋ ಖಾಸಗಿ, ಸೂಕ್ಷ್ಮ ವಿಷಯ ಅಂದ್ರಲ್ಲ, ಏನದು ? ಅವರಿಗೆ ಹೇಳಲಾಗದಷ್ಟು ಸೂಕ್ಷ್ಮವೆ ?" ಎಂದು ತಾರಕನಾಥರು ಕುತೂಹಲದಿಂದ ಬಾಯರಿಯವರನ್ನು ಕೇಳಿದರು.

"ಹೌದು. ಸೂಕ್ಷ್ಮ ಮತ್ತು ಖಾಸಗಿ ಎರಡೂ ಸಹ. ಇಕ್ಬಾಲ್ ಮತ್ತು ಮೈತ್ರೇಯಿ ಒಬ್ಬರಿಗೊಬ್ಬರು ಪ್ರೀತಿಸುತ್ತಿದ್ದಾರೆ. ಮದುವೆಯಾಗುವ ಇಚ್ಛೆಯೂ ಕೂಡ ಇದೆ ಅವರಿಗೆ".

"ಇದು ಖಾಸಗಿ ವಿಷವೇನೋ ಸರಿ. ಆದರೆ ಇದರಲ್ಲಿ ಸೂಕ್ಷ್ಮತೆ ಏನು ಬಂತು. ಅವರಿಬ್ಬರು ಪ್ರೀತಿಸಿದರೆ ಯಾರಿಗೇನು ತೊಂದರೆ. ಮದುವೆಯಾಗುತ್ತಿದ್ದಾರಲ್ಲ ?" ಎಂದು ನಿಖಿಲಾ ಆಶ್ಚರ್ಯ ವ್ಯಕ್ತಪಡಿಸಿದರು. ಅದಕ್ಕೆ ಬಾಯರಿ, "ಸೂಕ್ಷ್ಮ ಏಕೆಂದರೆ ಇವರ ಒಡನಾಟವನ್ನು ಗಮನಿಸಿ 'ಸೇನೆ'ಯವರು ಅದನ್ನು 'ಲವ್ ಜಿಹಾದ್' ಎಂದು ಪರಿಗಣಿಸಿದ್ದಾರೆ. ಈ ನಾಟಕದ ಸಂದರ್ಭದಲ್ಲಿ ಹೆಚ್ಚು–ಕಡಿಮೆಯಾದರೆ ಇವರಿಬ್ಬರ ಪ್ರೀತಿಯೂ ಕೂಡ ಒಂದು ಕಾರಣವಾಗುತ್ತದೆ"

"ಓ, ಹೀಗಾ ವಿಷಯ !" ಎಂದು ಇಬ್ಬರೂ ಉದ್ಗರಿಸಿದರು, "ನಾವು ಹೊರಗಿನವರು ನೋಡಿ. ಆದ್ದರಿಂದ ಇಲ್ಲಿನ ವಿಷಯ ನಮಗೆ ತಿಳಿಯೋದೇ ಇಲ್ಲ. ಆದರೆ ನೀವು ಹೇಳಿದ್ದು ನೋಡಿದರೆ ಇಲ್ಲಿನ ಪರಿಸ್ಥಿತಿ ಹದಗೆಡ್ತಾ ಇದೆ ಅನಿಸುತ್ತೆ".

೪

ನಾಟಕದ ತಾಲೀಮಿನ ನಂತರ ಶಶಿಕಾಂತ್, ಮೈತ್ರೇಯಿ ಮತ್ತು ಇಕ್ಬಾಲ್ ತಮ್ಮ ಮನೆಗೆ ಹಿಂದಿರುಗಿ ಹೋಗುತ್ತಿರಬೇಕಾದರೆ ಶಶಿಕಾಂತ್ ನಿಟ್ಟುಸಿರು ಬಿಟ್ಟು, "ನಮ್ಮ ನಾಟಕದ ಸುತ್ತ ಇಷ್ಟೊಂದು ಸೂಕ್ಷ್ಮತೆಗಳಿವೆ ಎಂದು ನಾನು ಕನಸು – ಮನಸಿನಲ್ಲೂ ಅಂದುಕೊಂಡಿರಲಿಲ್ಲ" ಎಂದ.

"ಈಗೇನು ಮಾಡೋದು. ಬಾಯರಿಯವರು ಹೇಳಿದ್ದು ಸರಿ ಕೂಡ. ಈ ನಾಟಕಕ್ಕೆ ಜೀವ ಕೊಡುವ ಮೊದಲು ನಾವು ಕೂಲಂಕಷವಾಗಿ ಎಲ್ಲವನ್ನೂ ಯೋಚಿಸಬೇಕಾಗಿತ್ತು" ಎಂದು ಇಕ್ಬಾಲ್‌ಗೆ ಅನಿಸಿತು.

"ಈಗೇನೂ ಮಾಡೋದಕ್ಕೆ ಆಗೋಲ್ಲ. ಈ ಸಲ 'ವೇದಿಕೆ'ಯ ಪ್ರಾಯೋಜಕತ್ವದಲ್ಲೇ ನಾಟಕ ಆಡೋಣ. ಮುಂದಿಟ್ಟ ಹೆಜ್ಜೆಯನ್ನು ಹಿಂದಿಡಬಾರದು ಎಂದು ಬಾಯರಿಯವರೆ ನಮಗೆ ಕಲಿಸಿಕೊಟ್ಟಿದ್ದಾರೆ. ಮರೆತು ಹೋಯಿತ ? ಮುಂದೆ ನಾಟಕವಾಡಬೇಕಾದರೆ ನಾವು ಈ ವಿಷಯಗಳ ಬಗ್ಗೆ ಮುಂಜಾಗ್ರತೆಯನ್ನು ವಹಿಸೋದು ಒಳ್ಳೇದು" ಎಂದು ಮೈತ್ರೇಯಿ ಹೇಳಿದಳು. ಉಳಿದಿಬ್ಬರು ಇವಳು ಹೇಳಿದ್ದು ಸರಿ ಎಂದು ತಲೆ ಆಡಿಸುತ್ತಿರಬೇಕಾದರೆ ಏಳೆಂಟು ಜನ ಹಿಂದಿನಿಂದ "ಹರ, ಹರ ಮಹಾದೇವ್" ಎಂದು ಎಗರಿಬಿದ್ದರು. ಮೂವರನ್ನೂ ಒಂದೇ ಏಟಿಗೆ ನೆಲಕ್ಕುರುಳಿಸಿದರು.

೫

ಮೂರ್ನಾಲ್ಕು ತಿಂಗಳ ನಂತರ ರಾಮೇಶ್ವರ ಬಾಯರಿ, ತಾರಕನಾಥ್ ಮತ್ತು ನಿಖಿಲಾರವರು ಮಂಗಳೂರಿನಲ್ಲಿ "ದಿ ಮಿಸ್ಟೇಕ್" ನಾಟಕದ ಪ್ರದರ್ಶನಕ್ಕೆ ತಯಾರಿ ನಡೆಸುತ್ತಿದ್ದುದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ಮೈತ್ರೇಯಿ, ಶಶಿಕಾಂತ್ ಮತ್ತು ಇಕ್ಬಾಲ್‌ರಿಗೆ ಈ ನಾಟಕವನ್ನು ಅರ್ಪಿಸಲಾಯಿತು.

**ಡಾ॥ ವಿಜಯಕುಮಾರ್ ಎಂ. ಬೋರಟ್ಟಿ**
ಇಂಗ್ಲಿಷ್ ಸಹಾಯಕ ಪ್ರಾಧ್ಯಾಪಕ, ವಿ.ವಿ. ಸಂಜೆ ಕಾಲೇಜ್, ಮೈಸೂರು ವಿ.ವಿ.
ಮೈಸೂರು – ೫೭೦ ೦೦೫




# ಸೂರ್ಯನ ಕೇಳಿಕೆ

**ಸೂ**ರ್ಯ ಕೇಳಿದ
ಜಗತ್ತಿನ ದೇಶಗಳಿಗೆ
ನನ್ನ ಹತ್ತಿರ ಅಗಣಿತ ರಶ್ಮಿಗಳಿವೆ
ಮಾರಾಟಕ್ಕೆ !
ನೀವು ಯಾರಾದರೂ ಕೊಂಡುಕೊಳ್ಳಲು ಸಿದ್ಧರಿದ್ದೀರಾ ?

ಇಥಿಯೋಪಿಯಾ ಹೇಳಿತು
ನಿನ್ನ ರಶ್ಮಿ ಮನೆ ಹಾಳಾಗ
ನಮ್ಮಲ್ಲಿ ದಿನದ ಊಟಕ್ಕೇ ತತ್ವಾರ
ಮನುಷ್ಯರೇ ಮಾರಾಟಕ್ಕಿದ್ದಾರೆ !

ಸೊಮಾಲಿಯಾ, ಆಫ್ಘಾನಿಸ್ತಾನ ಹೇಳಿದವು
ಬಲಿಷ್ಠರ ದಬ್ಬಾಳಿಕೆ
ಜೀವ ಎಡಗೈಯಲ್ಲಿ ಹಿಡಿದು
ಹಗಲೂ–ರಾತ್ರಿ ಕಣ್ಣಿಗೆ ಎಣ್ಣೆ

ಈಜಿಪ್ಟ್ , ಲಿಬಿಯಾ ದೇಶಗಳು ಹೇಳಿದವು
ಸರ್ವಾಧಿಕಾರಿಗಳ ಉಚ್ಚಾಟನೆ
ಜನಕ್ಕಾಗಿದೆ ನಿರಂತರ ಭಿಕ್ಷಾಟನೆ
ನಮ್ಮ ಪಾಡೇ ನಮಗೆ ಸಾಕಾಗಿದೆ
ಇನ್ನು ವ್ಯಾಪಾರಕ್ಕೆಲ್ಲಿದೆ ಟೈಮು ?

ಅಮೇರಿಕಾ ಆಜ್ಞೆ ಮಾಡಿತು ಸೂರ್ಯನಿಗೆ
ಬೇರೆ ಯಾರಿಗೂ ಸಿಗದಂತೆ
ಎಲ್ಲಾ ರಶ್ಮಿಯನು ನಮ್ಮ ದೇಶಕ್ಕೆ ತಂದು
ಬಂಕರ್‌ನಲ್ಲಿ ಸಂಗ್ರಹಿಸಿಡು
ಸಾಧ್ಯವಾದರೆ ನೀನೇ ಬಂದು
ವಾಚ್‌ಮನ್ ಆಗಿ ಕಾಯುತ್ತಿರು.

**ಡಾ॥ ಶ್ರೀಕಂಠ ಕೂಡಿಗೆ**
ವಿಶ್ರಾಂತ ಕನ್ನಡ ಪ್ರಾಧ್ಯಾಪಕ, ಕುವೆಂಪು ವಿ.ವಿ.,
೧೨, 'ಕೃತಿಕಾ', ಜ್ಯುಲ ರಸ್ತೆ, ೫ನೇ ಕ್ರಾಸ್, ಶಿವಮೊಗ್ಗ – ೫೭೭ ೨೦೧



# ಹಿನ್ನಡೆ ಮತ್ತು ಮಂಗಳಯಾನ

ಗ್ರಹಗಳ ಹಿನ್ನಡೆ ಎಂಬ ವಿದ್ಯಮಾನ ಸಾವಿರಾರು ವರ್ಷಗಳಿಂದ ಕುತೂಹಲ ಕೆರಳಿಸಿತ್ತು. ಭಚಕ್ರದಲ್ಲಿ ಅಂದರೆ ಅಶ್ವಿನಿ, ಭರಣಿ ಇತ್ಯಾದಿ ನಕ್ಷತ್ರಗಳ ಚಕ್ರದಲ್ಲಿ ಸೂರ್ಯ, ಚಂದ್ರ ಎರಡೂ ಒಂದೇ ದಿಕ್ಕಿನಲ್ಲಿ ಸಾಗುವವು; ಗ್ರಹಗಳೂ ಅಷ್ಟೇ, ಆದರೆ ಕೆಲವೊಮ್ಮೆ ಗ್ರಹಗಳು ಮಾತ್ರ ವಿರುದ್ಧ ದಿಕ್ಕಿನಲ್ಲಿ ಸಾಗಿ ಹಿನ್ನಡೆಯುತ್ತಿದ್ದವು. ಖಗೋಳ ವೈಜ್ಞಾನಿಕವಾಗಿ ಈ ಘಟನೆಗೆ ವಿಯುತಿ ಎಂದು ಹೆಸರು. ಇದು ತಾತ್ಕಾಲಿಕ; ಆದರೂ ಈ ನಡೆ ಮಾತ್ರ ಖಗೋಳ ವಿಜ್ಞಾನಿಗಳಿಗೆ ದೊಡ್ಡ ಸವಾಲೇ ಆಗಿತ್ತು. ಕ್ಲಿಷ್ಟವಾದ ಗಣಿತ ಸೂತ್ರಗಳಿಂದ ವಿವರಿಸಲು ಸಾಧ್ಯವಾಗಿತ್ತು. ಹಾಗಾಗಿ ಗಣಿತಜ್ಞರ ಹೊರತು ಅನ್ಯರಿಗೆ ಇದೊಂದು ವಿಚಿತ್ರ ವಿದ್ಯಮಾನವಾಗಿಯೇ ಉಳಿದಿತ್ತು. ಅದರ ಸುತ್ತ ವಿಚಿತ್ರ ಕತೆಗಳು ಹೆಣೆದುಕೊಂಡವು. ಫಲ ಜ್ಯೋತಿಷಿಗಳೂ – ಇದರ ಲಾಭ ಪಡೆದುಕೊಂಡರು. 'ಕುಜದೋಷ' ಇತ್ಯಾದಿ ಪದಗಳನ್ನು ಸೃಷ್ಟಿಸಿದರು.

ಹಿನ್ನಡೆ ಎಂಬುದು ಆಕಾಶ ವೀಕ್ಷಕರಿಗೆ ಅತ್ಯಂತ ಸಂತೋಷ ತರುವ ಸಂಗತಿ. ಏಕೆಂದರೆ ಈ ಸಂದರ್ಭದಲ್ಲಿ ಗ್ರಹ ಮತ್ತು ಭೂಮಿಯ ನಡುವಿನ ಅಂತರ ಕನಿಷ್ಠ ಇರುತ್ತದೆ. ಹತ್ತಿರ ಇರುವ ಕಾರಣ ಅವು (ದೂರದರ್ಶಕದ ಮೂಲಕ) ದೊಡ್ಡದಾಗಿ ಕಾಣುತ್ತವೆ. ಬರಿಗಣ್ಣಿಗೆ ಗರಿಷ್ಠ ಪ್ರಕಾಶದಿಂದ ಕಾಣುತ್ತವೆ. ಇನ್ನೂ ಒಂದು ವಿಶೇಷವೆಂದರೆ ರಾತ್ರಿ ಇಡೀ ನೋಡಲು ಸಿಗುತ್ತದೆ – ಈ ಎಲ್ಲ ಅಂಶಗಳು ನಭಾವಲೋಕನದ ಓದುಗರಿಗೆ ಆಸಕ್ತಿಪೂರ್ಣವಾಗಿರುತ್ತವೆ. ಬಾಹ್ಯಾಕಾಶ ವಿಜ್ಞಾನಿಗಳಿಗೆ ಬೇರೆಯದೇ ಒಂದು ಆಲೋಚನೆ ಇದೆ. ಯಾವುದಾದರೊಂದು ಗಗನನೌಕೆ ಮಂಗಳದ ಮೇಲಿದೆ; ಅಥವಾ ಮಂಗಳವನ್ನು ಸುತ್ತುತ್ತಿದೆ ಎಂದುಕೊಳ್ಳೋಣ. ಅದರೊಡನೆ ಸಂಪರ್ಕ ಏರ್ಪಡುವುದು ರೇಡಿಯೋ ತರಂಗಗಳಿಂದ. ಇವು ಬೆಳಕಿನ ವೇಗದಲ್ಲಿ (ಸೆಕೆಂಡಿಗೆ 3 ಲಕ್ಷ ಕಿ.ಮೀ.) ಚಲಿಸುವವು. ಆದರೂ ಮಂಗಳಕ್ಕೆ ಸಂದೇಶ ಮುಟ್ಟಿಸಲು 4 ರಿಂದ 24 ನಿಮಿಷವಾದರೂ ಬೇಕೇ ಬೇಕು. ಈ ಅವಧಿಯನ್ನು ಕಡಿಮೆ ಮಾಡಬೇಕೆಂದರೆ ಅದು ಕನಿಷ್ಠ ದೂರದಲ್ಲಿ ಇರಬೇಕು. ಅಂದರೆ ವಿಯುತಿಯೇ ಆಗಬೇಕು. ಈ ಕಾರಣದಿಂದಲೇ ಕಳೆದ ನವೆಂಬರ್‌ನಲ್ಲಿ ಮಂಗಳನತ್ತ ಇಸ್ರೋದ ನೌಕೆ ಹಾರಿತು. 300 ದಿನಗಳ ದೀರ್ಘ ಪ್ರಯಾಣದ ನಂತರ ಅದು ಮಂಗಳವನ್ನು ತಲುಪುವುದು. ಆಗ ಭೂಮಿ–ಮಂಗಳಗಳ ನಡುವಿನ ಅಂತರ ಕನಿಷ್ಠವಾಗಿರುವುದು. ರೇಡಿಯೋ ಸಂದೇಶಗಳು ಕನಿಷ್ಠ ಅವಧಿಯಲ್ಲಿ ವಿನಿಮಯವಾಗುವುದು.



*21ರ ಮುಂಜಾವು ಶನಿ ಮತ್ತು ಚಂದ್ರ*

ಈ ತಿಂಗಳಲ್ಲಿ ಮಂಗಳದ ಹಿನ್ನಡೆ ಆರಂಭ – ಇದರ ಅರ್ಥ – ಇನ್ನು ಒಂದು ತಿಂಗಳಲ್ಲಿ ವಿಯುತಿ ಉಂಟಾಗಲಿದೆ. ಅಂದರೆ ಮಂಗಳಯಾನದ ನೌಕೆ, ಮಂಗಳ ಮತ್ತು ಭೂಮಿಗಳ ನಡುವಿನ ಅಂತರ ಕಡಿಮೆಯಾಗತೊಡಗುತ್ತದೆ.

ಗುರು, ಶನಿ ಮುಂತಾದ ಗ್ರಹಗಳಿಗೂ ಈ ತತ್ವ ಅನ್ವಯವಾಗುವುದಾದರೂ ಮಂಗಳದ ಸಂದರ್ಭದಲ್ಲಿ ಅತಿ ಹೆಚ್ಚು ಪರಿಣಾಮಕಾರಿಯಾಗುವುದು.

1ನೆಯ ತಾರೀಖು ಮಂಗಳದ ಜೊತೆಗೆ ಶನಿಯ ಹಿನ್ನಡೆಯೂ ಆರಂಭವಾಗುವುದು; ಆದರೆ ಅದರ ವಿಯುತಿ ಇನ್ನೂ ತಡ – ಮೇ ತಿಂಗಳಲ್ಲಿ. ಅದರ ಹಿನ್ನಡೆಯನ್ನು ಗುರುತಿಸುವುದು ಕಷ್ಟ; ಹೆಸರೇ ಸೂಚಿಸುವಂತೆ ಅದರ ಚಲನೆ ಬಹಳ ನಿಧಾನ. ಈ ತಿಂಗಳಲ್ಲಿ ಗುರುಗ್ರಹದ ಹಿನ್ನಡೆ ಮುಕ್ತಾಯವಾಗುವುದು. ಅಂದರೆ ಮಿಥುನದಿಂದ ವೃಷಭದ ಕಡೆ ಹೊರಟಿದ್ದ ಅದು 6ನೆಯ ತಾರೀಖು ನಿಂತು ಪುನಃ ಮಿಥುನದತ್ತ ಹೊರಡಲಿದೆ.

ಈ ತಿಂಗಳಲ್ಲಿ ಬುಧ ಮತ್ತು ಶುಕ್ರ ಎರಡೂ ಗ್ರಹಗಳು ಮುಂಜಾವಿನಲ್ಲಿ ಕಾಣುತ್ತವೆ. ಗರಿಷ್ಠ ಕೋನೋನ್ನತಿಯನ್ನು ಪಡೆಯುತ್ತವೆ.

ವಸಂತಮಾಸದ ಆರಂಭದ ಸೂಚಕವಾದ ವಿಷುವ 20ರ ನಡುರಾತ್ರಿ ನಡೆಯಲಿದೆ. ಯುಗಾದಿ ಅದರ ಮುಂದಿನ ಪಾಡ್ಯಕ್ಕೆ. ಜನವರಿಯಂತೆ ಈ ತಿಂಗಳಲ್ಲೂ ಎರಡು ಅಮಾವಾಸ್ಯೆಗಳಿವೆ.

ಚಂದ್ರ, ಶನಿಗ್ರಹವನ್ನು ಮರೆಮಾಡುವ ಆಚ್ಛಾದನೆ 21ರಂದು ನಡೆಯಲಿದೆ. ಆದರೆ ನಮಗದು ಕಾಣುವುದಿಲ್ಲ. 21ರ ಮುಂಜಾವು ಶನಿ ಮತ್ತು ಚಂದ್ರ ಸಮೀಪವಾಗಿ ಇರುವಂತೆ ಮಾತ್ರ ಕಾಣುತ್ತದೆ.

ನಕ್ಷೆ ಸಂಜೆಯ 7 ಗಂಟೆಗೆ ಅನ್ವಯವಾಗುತ್ತದೆ. ಆಕಾಶದ ತುಂಬೆಲ್ಲಾ ನಕ್ಷತ್ರಗಳು ಕಾಣುತ್ತವೆ. ವಿರಳವಾದ ಭಾಗ ಪಶ್ಚಿಮಕ್ಕೆ ಸರಿದಿರುತ್ತದೆ. ವೃಷಭ, ಮಿಥುನ, ಕಟಕ, ಸಿಂಹ – ಈ ರಾಶಿಗಳು ಅದೇ ಕ್ರಮದಲ್ಲಿ ಕಾಣುತ್ತವೆ. ವಾಯುವ್ಯದಂಚಿನಲ್ಲಿ ಕುಂತಿ, ಪಾರ್ಥ, ಈಶಾನ್ಯದಲ್ಲಿ ಸಪ್ತರ್ಷಿಮಂಡಲ ಕಾಣುತ್ತವೆ. ಪ್ರಖರವಾದ ಮಹಾವ್ಯಾಧ (ಒರೈಯನ್), ವೃಷಭ, ಮಿಥುನ, ವಿಜಯಸಾರಥಿ (ಆರಿಗಾ), ಮಹಾಶ್ವಾನ (ಕ್ಯಾನಿಸ್‌ಮೇಜರ್) ಲಘುಶ್ವಾನ (ಕ್ಯಾನಿಸ್ ಮೈನರ್) ಇವೆಲ್ಲವನ್ನೂ ಕಾಣಬಹುದು. ದಕ್ಷಿಣದಲ್ಲಿ ಬೆಳಗುವ ಪ್ರಕಾಶಮಾನ ನಕ್ಷತ್ರವೇ ಅಗಸ್ತ್ಯ (ಕೆನೋಪಸ್).

**ಖಗೋಳ ದಿನಚರಿ**

1 ಅಮಾವಾಸ್ಯೆ ಮಧ್ಯಾಹ್ನ 1:30ಕ್ಕೆ; ಮಂಗಳದ ಹಿನ್ನಡೆ ಆರಂಭ
3 ಶನಿಗ್ರಹದ ಹಿನ್ನಡೆ ಆರಂಭ
6 ಗುರುಗ್ರಹದ ಹಿನ್ನಡೆ ಮುಕ್ತಾಯ
8 ಚಾಂದ್ರಮಾಸದ ಮೊದಲಪಾದ
10 ಗುರು–ಚಂದ್ರ ನಡುವೆ 4 ಡಿಗ್ರಿ ಅಂತರ (ಸಂಜೆ)*
11 ಚಂದ್ರ ಅಪಭೂ ಬಿಂದುವಿನಲ್ಲಿ
14 ಮುಂಜಾವು – ಬುಧಗ್ರಹದ ಗರಿಷ್ಠ ಕೋನೋನ್ನತಿ (27 ಡಿಗ್ರಿ)*
16 ಹುಣ್ಣಿಮೆ 22:38ಕ್ಕೆ
19 ಮುಂಜಾವು – ಮಂಗಳ–ಚಂದ್ರ ನಡುವೆ 4 ಡಿಗ್ರಿ ಅಂತರ*
20 ವಸಂತ ವಿಷುವ 23:27ಕ್ಕೆ
21 ಮುಂಜಾವು – ಶನಿ–ಚಂದ್ರ ನಡುವೆ 1 ಡಿಗ್ರಿ ಅಂತರ; (ಆಚ್ಛಾದನೆ ಕಾಣುವುದಿಲ್ಲ)*
22 ಮುಂಜಾವು – ಶುಕ್ರಗ್ರಹದ ಗರಿಷ್ಠ ಕೋನೋನ್ನತಿ 46 ಡಿಗ್ರಿಗಳು*
24 ಚಾಂದ್ರಮಾಸದ ಕೊನೆಯಪಾದ
26 ಮುಂಜಾವು – ಶುಕ್ರ–ಚಂದ್ರ ನಡುವೆ 4 ಡಿಗ್ರಿಗಳು*
27 ಚಂದ್ರ ಪುರಭೂ ಬಿಂದುವಿನಲ್ಲಿ
29 ಬುಧ–ಚಂದ್ರ ನಡುವೆ 5 ಡಿಗ್ರಿ ಅಂತರ*
31 ಅಮಾವಾಸ್ಯೆ 0:15ಕ್ಕೆ; ಮಂಗಳ–ಚಿತ್ರಾ ನಡುವೆ 5 ಡಿಗ್ರಿ ಕೋನ*
(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ನವ ಉದಾರವಾದ ಕಾರ್ಮಿಕ ವರ್ಗ ರಾಜಕೀಯ

ನಾ. ದಿವಾಕರ

ಅಸ್ಮಿತೆಗಳ ಭೂತಗನ್ನಡಿಯ ಮೂಲಕವೇ ಇಡೀ ಸಾಮಾಜಿಕ ವಿದ್ಯಮಾನಗಳನ್ನು ನೋಡುವ ಪರಂಪರೆಯಿಂದ ದೇಶದ ಪ್ರಜ್ಞಾವಂತ ಜನತೆ ಮುಕ್ತರಾಗುವ ತುರ್ತು ಅಗತ್ಯತೆ ಇದೆ. ದೇಶದ ರಾಜಕೀಯ ಪ್ರಜ್ಞೆಗೆ ಮುಂಚೂಣಿ ನಾಯಕತ್ವ ನೀಡಬೇಕಾದ ಕಾರ್ಮಿಕ ವರ್ಗಗಳೂ ಇದೇ ನಿಟ್ಟಿನಲ್ಲಿ ಯೋಚಿಸಬೇಕಾಗಿದೆ. ಇಂದು ಕಾರ್ಮಿಕ ವರ್ಗ ಎದುರಿಸುತ್ತಿರುವ ಸವಾಲುಗಳು ಸಮಾಜದ ಎಲ್ಲರನ್ನೂ ಬಾಧಿಸುತ್ತದೆ. ಶ್ರಮಜೀವಿಗಳ ಐಕ್ಯತೆಯನ್ನು ಭಂಗಗೊಳಿಸುವ ನಿಟ್ಟಿನಲ್ಲಿ ದೇಶವನ್ನೇ ವಿನಾಶದ ಅಂಚಿಗೆ ಕೊಂಡೊಯ್ಯುತ್ತಿರುವ ವಿಭಜಕ ಶಕ್ತಿಗಳ ವಿರುದ್ಧ ಸಂಘಟಿತ ಕಾರ್ಮಿಕರು ಹೋರಾಡಬೇಕಾಗಿದೆ. ಮೇ ದಿನದ ಆಚರಣೆಯೂ ಇದೇ ತತ್ವವನ್ನು ಸಾರುತ್ತದೆ. ಜಾಗತೀಕರಣ ಮತ್ತು ನವ ಉದಾರವಾದ ನೀತಿಗಳು ಸೃಷ್ಟಿಸಿರುವ ಭ್ರಮಾಲೋಕದಿಂದ ಜನಸಾಮಾನ್ಯರ ವಿಮೋಚನೆಗಾಗಿ ಹೋರಾಡುವುದು ಅಗತ್ಯತೆಯಾಗಿದೆ. ಕೃಷಿ ಕಾರ್ಮಿಕರು, ಅಸಂಘಟಿತ ಕಾರ್ಮಿಕರು, ಅನಕ್ಷರಸ್ಥರು, ದಮನಿತ ಜನ ಸಮುದಾಯಗಳು ತಮ್ಮ ವಿಮೋಚನೆಗಾಗಿ ನಡೆಸುತ್ತಿರುವ ಕ್ರಾಂತಿಕಾರಿ ಹೋರಾಟಗಳಿಗೆ ಮುಂಚೂಣಿ ನಾಯಕತ್ವ ವಹಿಸುವುದು ದೇಶದ ಕಾರ್ಮಿಕರ ಗುರುತರ ಜವಾಬ್ದಾರಿಯಾಗಿದೆ. ಒಂದು ಪ್ರಜಾತಾಂತ್ರಿಕ ಸಮಾಜದ ನಿರ್ಮಾಣದಲ್ಲಿ ಕಾರ್ಮಿಕರ ಮಹತ್ವದ ಪಾತ್ರವನ್ನು ಗ್ರಹಿಸಿ ಮುನ್ನಡೆಯಬೇಕಾಗಿದೆ. ಸ್ವಾಭಿಮಾನಿ, ಸ್ವಾವಲಂಬಿ, ಸದೃಢ ಭಾರತದ ನಿರ್ಮಾಣಕ್ಕೆ ಸಂಘಟಿತ, ಅಸಂಘಟಿತ ಕಾರ್ಮಿಕರ ಮತ್ತು ಶ್ರಮಜೀವಿಗಳ ಹೋರಾಟಗಳು ದಾರಿದೀಪವಾಗಬೇಕಿದೆ.

ಸಮಾಜದ ಉನ್ನತಿ, ಆರ್ಥಿಕ ಪ್ರಗತಿ, ಸಾಮಾಜಿಕ ಮುನ್ನಡೆ, ಇವೆಲ್ಲವೂ ಆಳುವ ವರ್ಗಗಳ ಕೃಪೆಯಿಂದಲೇ ನಡೆಯುವ ವಿದ್ಯಮಾನಗಳು, ವಿಕಾಸ ಹೊಂದುವ ಮನುಕುಲಕ್ಕೆ ಆಳುವ ವರ್ಗಗಳೇ ಅಧಿಪತಿಗಳು ಎಂದು ಭಾವಿಸಿದ್ದ ಕಾಲಘಟ್ಟದಲ್ಲೇ ಗುಲಾಮಗಿರಿ ಮತ್ತು ಊಳಿಗಮಾನ್ಯ ವ್ಯವಸ್ಥೆಗಳು ಬಲವಾಗಿ ಬೇರೂರಿದ್ದವು. ಇತಿಹಾಸದ ಚಲನೆಯನ್ನು ಕೇವಲ ನೈಸರ್ಗಿಕ ಪ್ರಕ್ರಿಯೆಯೆಂದೇ ಪ್ರತಿಪಾದಿಸುತ್ತಿದ್ದ ತತ್ವಶಾಸ್ತ್ರಜ್ಞರು ಮಾನವನ ಅಭ್ಯುದಯದಲ್ಲಿ ಶ್ರಮಿಕ ವರ್ಗಗಳ ಪಾತ್ರವನ್ನು ಪರಿಗಣಿಸಿಯೇ ಇರಲಿಲ್ಲ. ಈ ನಿಟ್ಟಿನಲ್ಲಿ ತಮ್ಮ ಗತಿತಾರ್ಕಿಕ ಭೌತವಾದ ಮತ್ತು ಚಾರಿತ್ರಿಕ ಭೌತವಾದಗಳ ಮೂಲಕ ಇತಿಹಾಸವನ್ನು ವಿಶ್ಲೇಷಿಸುವ ಹೊಸ ಮಾರ್ಗವನ್ನು ಶೋಧಿಸಿದ ಕೀರ್ತಿ ಮಾರ್ಕ್ಸ್ ಮತ್ತು ಏಂಗೆಲ್ಸ್ ಅವರಿಗೆ ಸಲ್ಲುತ್ತದೆ.

ಮನುಕುಲದ ವಿಕಾಸದಲ್ಲಿ, ಮಾನವ ಇತಿಹಾಸದ ಚಲನೆಯಲ್ಲಿ ಪದಾರ್ಥಗಳ ಉತ್ಪಾದನೆ, ಉತ್ಪಾದನೆಯಲ್ಲಿ ತೊಡಗುವ ದುಡಿಯುವ ವರ್ಗಗಳು, ಉತ್ಪಾದನಾ ಸಂಬಂಧಗಳು, ಉತ್ಪಾದನೆಗೆ ಮೂಲವಾದ ಸಾಧನಗಳು, ಈ ಸಾಧನಗಳನ್ನು ನಿಯಂತ್ರಿಸುವ ಆಳುವ ಶ್ರೀಮಂತ ವರ್ಗಗಳು ಮತ್ತು ಸಮಾಜದ ಉನ್ನತಿಗೆ ಶ್ರಮವಹಿಸುವ ಉತ್ಪಾದನಾ ಶಕ್ತಿಗಳು ಈ ಎಲ್ಲಾ ಅಂಶಗಳನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ ಮಾರ್ಕ್ಸ್ ಮತ್ತು ಏಂಗೆಲ್ಸ್ ತಮ್ಮ ದೀರ್ಘಕಾಲದ ಸಂಶೋಧನೆಯ ಮೂಲಕ ಜಗತ್ತಿಗೆ ಒಂದು ಹೊಸ ದಿಗಂತವನ್ನು ತೋರಿಸುವಂತಹ ಸಿದ್ಧಾಂತವನ್ನು ನೀಡಿದ್ದಾರೆ. ಮಾನವ ಇತಿಹಾಸದ ಚಲನೆ ಉತ್ಪಾದನಾ ಶಕ್ತಿಗಳ, ಅಂದರೆ ಶ್ರಮಜೀವಿಗಳ, ಪರಿಶ್ರಮವನ್ನು ಅವಲಂಬಿಸಿದೆ. ಈ



*ಮಾರ್ಕ್ಸ್ ಮತ್ತು ಏಂಗೆಲ್ಸ್ ಗಾಢವಾದ ಚಿಂತನೆಯಲ್ಲಿ*



**ಕಾರ್ಖಾನೆಯಲ್ಲಿ ಕಾರ್ಮಿಕರು**

ಉತ್ಪಾದನಾ ಶಕ್ತಿಗಳು ಹೊಂದಿರುವ ಸಂಬಂಧಗಳು, ಅಂದರೆ ಉತ್ಪಾದನಾ ಸಂಬಂಧಗಳು ಮತ್ತು ಉತ್ಪಾದನೆಯಲ್ಲಿ ತೊಡಗಿಸಲಾಗುವ ಸಾಧನಗಳು, ಅಂದರೆ ಭೂಮಿ, ಯಂತ್ರಗಳು, ಮಾನವ ಶ್ರಮ ಇತ್ಯಾದಿ, ಯಾರ ನಿಯಂತ್ರಣದಲ್ಲಿರುತ್ತವೆ ಎಂಬುದನ್ನಾಧರಿಸಿಯೇ ಸಮಾಜದ ಬೆಳವಣಿಗೆಯನ್ನು, ಸ್ಥಿತ್ಯಂತರವನ್ನು ವಿಶ್ಲೇಷಿಸಲು ಸಾಧ್ಯ ಎನ್ನುವ ಸಿದ್ಧಾಂತವನ್ನು ಮಾರ್ಕ್ಸ್ ಜಗತ್ತಿಗೆ ಕಾಣಿಕೆಯಾಗಿ ನೀಡಿದ್ದಾರೆ.

ಭಾರತೀಯ ಇತಿಹಾಸದಲ್ಲಿ ಶ್ರಮಿಕ ವರ್ಗಗಳ ಕೊಡುಗೆಯನ್ನು ದಾಖಲಿಸುವ ಪರಂಪರೆಯೇ ಬೆಳೆದುಬಂದಿರಲಿಲ್ಲ. ವಸಾಹತುಪೂರ್ವ ಭಾರತದಲ್ಲಿ ದೇಶವನ್ನಾಳುತ್ತಿದ್ದ ಅಸಂಖ್ಯಾತ ರಾಜರುಗಳಿಗೆ ರಾಷ್ಟ್ರ ಎಂಬ ಪರಿಕಲ್ಪನೆಯೂ ಇರಲಿಲ್ಲವಾದ್ದರಿಂದ ಭರತಖಂಡ ಎನ್ನಲಾಗುತ್ತಿದ್ದ ಭೂಪ್ರದೇಶ ಹಲವು ಪ್ರಾಂತ್ಯಗಳಲ್ಲಿ ಹರಿದು ಹಂಚಿಹೋಗಿತ್ತು. ಆದಾಗ್ಯೂ ವಾಣಿಜ್ಯ, ವ್ಯಾಪಾರ ಮತ್ತು ಪರಸ್ಪರ ವಿನಿಮಯ ಪ್ರಕ್ರಿಯೆಗಳ ಪರಿಣಾಮವಾಗಿ ವಿವಿಧ ರಾಜ್ಯಗಳ ನಡುವೆ ಸಂಪರ್ಕ ನಿರಂತರವಾಗಿತ್ತು. ೧೮೫೭ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಪ್ರಥಮ ಬಾರಿಗೆ ದೇಶದ ದುಡಿಯುವ ವರ್ಗಗಳು, ಶ್ರಮಜೀವಿಗಳು ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಟದಲ್ಲಿ ತೊಡಗಿದ್ದೇ ಅಲ್ಲದೆ ಸಂಘಟಿತ ರೂಪದಲ್ಲಿ ಬಂಡವಾಳ ವ್ಯವಸ್ಥೆಯ ವಿರುದ್ಧ ಸಮರ ಸಾರಿದ್ದರು. ಇದೇ ಅವಧಿಯಲ್ಲಿ ಯೂರೋಪ್ ಮತ್ತಿತರ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ರೂಪುಗೊಂಡಿದ್ದ ಅನೇಕ ಪ್ರಜಾತಾಂತ್ರಿಕ ಹೋರಾಟಗಳು ಭಾರತದ ಜನತೆಯನ್ನು ಮುಟ್ಟದಿರಲಿಲ್ಲ.

ಸೋವಿಯತ್ ರಷ್ಯಾದಲ್ಲಿನ ಬೆಳವಣಿಗೆಗಳು ಮತ್ತು ೧೮೮೬ ಮೇ ೧ರ ಘಟನೆ ಭಾರತದಲ್ಲೂ ಪ್ರತಿಫಲಿಸಿತ್ತು. ಬ್ರಿಟಿಷ್ ವಸಾಹತುಶಾಹಿಯ ಆಳ್ವಿಕೆಯಲ್ಲಿ ಭಾರತದ ಕಾರ್ಮಿಕರನ್ನು ಅಗ್ಗದ ಕೂಲಿ ನೀಡಿ ದುಡಿಸಿಕೊಳ್ಳುವ ಮೂಲಕ ಬ್ರಿಟಿಷ್ ಮಾರುಕಟ್ಟೆಯನ್ನು ವಿಸ್ತರಿಸಿಕೊಳ್ಳುತ್ತಿದ್ದ ಬಂಡವಳಿಗರ ನೀತಿಯಿಂದ ಕಾರ್ಮಿಕರು ಶೋಷಣೆಗೊಳಗಾಗಿದ್ದರು. ಅನೇಕ ದೇಶೀ ಬಂಡವಳಿಗರೂ ಬ್ರಿಟಿಷ್ ಕೈಗಾರಿಕೋದ್ಯಮಿಗಳೊಡನೆ ಸಹಕರಿಸುವ ಮೂಲಕ, ಭಾರತದಲ್ಲಿನ ದುಡಿಯುವ ವರ್ಗಗಳ ಶೋಷಣೆಯಲ್ಲಿ ತೊಡಗಿದ್ದುದನ್ನು ಅಲ್ಲಗಳೆಯಲಾಗುವುದಿಲ್ಲ. ಈ ಸಂದರ್ಭದಲ್ಲಿ ಇಪ್ಪತ್ತನೆಯ ಶತಮಾನದ ಮೂರನೆಯ ದಶಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಉಚ್ಛ್ರಾಯ ಹಂತವನ್ನು ತಲುಪಿದ್ದ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದಲ್ಲಿನ ಸಮಾಜವಾದಿ ನೇತಾರರು ದೇಶದ ಕಾರ್ಮಿಕರನ್ನು ಸಂಘಟಿಸುವ ದೃಢ ನಿರ್ಧಾರ ಮಾಡಿದ್ದರು. ತತ್ಪರಿಣಾಮವಾಗಿ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಎ.ಐ.ಟಿ.ಯು.ಸಿ.) ೧೯೨೦ರಲ್ಲಿ ಜನ್ಮತಾಳಿತ್ತು.

ಏತನ್ಮಧ್ಯೆ ೧೯೧೭ರ ಸೋವಿಯತ್ ಕ್ರಾಂತಿಯ ಪರಿಣಾಮವಾಗಿ ದೇಶದೆಲ್ಲೆಡೆ ಮಾರ್ಕ್ಸ್‌ವಾದ ಮತ್ತು ಕಮ್ಯುನಿಸ್ಟ್ ಸಿದ್ಧಾಂತಗಳ ಪ್ರಭಾವ ದಟ್ಟವಾಗಿ ಹರಡಿತ್ತು. ಬಂಡವಳಿಗರ ಪರವಾಗಿದ್ದ ರಾಷ್ಟ್ರೀಯ ಕಾಂಗ್ರೆಸ್‌ನಲ್ಲಿ, ಅನೇಕ ಸಮಾಜವಾದಿ ನಾಯಕರು ಸಕ್ರಿಯರಾಗಿದ್ದು, ದೇಶದ ಶ್ರಮಜೀವಿಗಳ ಪರವಾಗಿ ಹೋರಾಟಗಳನ್ನು ರೂಪಿಸಲು ಉತ್ಸುಕರಾಗಿದ್ದರು. ಈ ಸಮಾಜವಾದಿ ನೇತಾರರಿಗೆ ಎಐಟಿಯುಸಿ ಒಂದು ರಾಷ್ಟ್ರಮಟ್ಟದ ಸಂಘಟಿತ ವೇದಿಕೆಯಾಗಿ ಪರಿಣಮಿಸಿತು. ಭಾರತದ ಆರ್ಥಿಕ ವ್ಯವಸ್ಥೆ ಕೃಷಿಯನ್ನೇ ಆಧರಿಸಿದ್ದರೂ ಪಟ್ಟಣ ಹಾಗೂ ನಗರಗಳಲ್ಲಿನ ಕಾರ್ಖಾನೆಗಳಲ್ಲಿ ಕಾರ್ಮಿಕರು ಸಂಘಟಿತ ಹೋರಾಟಗಳಲ್ಲಿ ತೊಡಗಿದ್ದರು. ೧೯೪೦ರ ದಶಕದ ವೇಳೆಗೆ ಭಾರತದ ದುಡಿಯುವ ವರ್ಗಗಳಲ್ಲಿ ಒಂದು ಹೊಸ ಚೈತನ್ಯ ಮೂಡಿತ್ತು. ಭಾರತೀಯ ಕಮ್ಯುನಿಸ್ಟ್ ಪಕ್ಷದ ಸ್ಥಾಪನೆಯ ನಂತರದಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲೂ ಒಂದು ಹೊಸ ಆಯಾಮ ವ್ಯಕ್ತವಾಗಿತ್ತು. ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಹೋರಾಟದಲ್ಲಿ ನಿರತರಾಗಿದ್ದ ಕಾರ್ಮಿಕ ವರ್ಗಗಳು ತಮ್ಮ ಸೇವಾ ಸೌಲಭ್ಯಗಳಿಗಾಗಿ, ವೇತನಕ್ಕಾಗಿ ಕಾರ್ಖಾನೆಗಳ ಮಾಲೀಕರ ವಿರುದ್ಧವೂ ಹೋರಾಟಗಳನ್ನು ಸಂಘಟಿಸಿದ್ದರು.

ಸ್ವತಂತ್ರ ಭಾರತದ ಮುಂದೆ ಹಲವಾರು ಸಮಸ್ಯೆಗಳು ಎದುರಾಗಿದ್ದರೂ ಎರಡು ಪ್ರಮುಖ ಸವಾಲುಗಳು ಮಹತ್ವ ಪಡೆದಿದ್ದವು. ದೇಶದ ವಿಭಜನೆಯ ಹಿನ್ನೆಲೆಯಲ್ಲಿ ಭುಗಿಲೆದ್ದ ಕೋಮು ಸಂಘರ್ಷವನ್ನು ನಿಯಂತ್ರಿಸಿ ವಿವಿಧ ಜನಸಮುದಾಯಗಳ ನಡುವೆ ಸಾಮರಸ್ಯ ಸಾಧಿಸುವ ಮೂಲಕ ಸೌಹಾರ್ದಯುತ ಸಮಾಜದ ನಿರ್ಮಾಣ ಒಂದು ಸಮಸ್ಯೆಯಾದರೆ, ಮತ್ತೊಂದು ದೇಶದ ಆರ್ಥಿಕತೆಯನ್ನು ಸುಧಾರಿಸುವಲ್ಲಿ ಕೃಷಿ ಪ್ರಧಾನ ಆರ್ಥಿಕತೆಯನ್ನು ಕೈಗಾರಿಕೋದ್ಯಮದೆಡೆಗೆ ಯಶಸ್ವಿಯಾಗಿ ಕೊಂಡೊಯ್ಯುವುದು. ಏತನ್ಮಧ್ಯೆ ಶತಮಾನಗಳಿಂದ ಶೋಷಣೆಗೊಳಗಾಗಿದ್ದ ನಿಮ್ನ ವರ್ಗಗಳಿಗೆ ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ಸ್ಥೈರ್ಯ ಒದಗಿಸುವುದೂ ಸ್ವತಂತ್ರ ಭಾರತದ ಆದ್ಯತೆಗಳಲ್ಲೊಂದಾಗಿತ್ತು. ಗಾಂಧೀಜಿಯವರ ಗ್ರಾಮ ಸ್ವರಾಜ್ಯ ಮತ್ತು ನೆಹರೂ ಅವರ ಕೈಗಾರಿಕೀಕರಣದ ವಿಭಿನ್ನ ದೃಷ್ಟಿಕೋನಗಳನ್ನು ಸಮತೋಲನವಾಗಿ ಮುನ್ನಡೆಸುವ ಹೊಣೆಗಾರಿಕೆ ಸ್ವತಂತ್ರ ಭಾರತದ ಪ್ರಥಮ ಸರ್ಕಾರದ ಮೇಲಿತ್ತು.

ಈ ಸಂದರ್ಭದಲ್ಲಿ ಜವಹರಲಾಲ್ ನೆಹರೂ ಅವರ ಮಿಶ್ರ ಆರ್ಥಿಕ ನೀತಿ, ಸೋವಿಯತ್ ಒಕ್ಕೂಟದ ಯಶಸ್ವಿ ಪ್ರಯೋಗದಿಂದ ಪ್ರೇರೇಪಿತವಾಗಿದ್ದರೂ ಸಂಪೂರ್ಣವಾಗಿ ಸಮಾಜವಾದಿ ಮಾರ್ಗವನ್ನೇನೂ ಅನುಸರಿಸಲಿಲ್ಲ. ಬದಲಾಗಿ ಸಮಾಜವಾದ ಮತ್ತು ಬಂಡವಾಳವಾದದ ನಡುವೆ ಸಮತೋಲನವನ್ನು ಕಾಪಾಡಿಕೊಂಡು ಹೋಗುವ ಪ್ರಭುತ್ವ ಬಂಡವಾಳವಾದವನ್ನು ಅನುಸರಿಸಲಾಗಿತ್ತು. ಕೃಷಿ ಕ್ಷೇತ್ರದ ಆಧುನೀಕರಣ, ನೀರಾವರಿ ಯೋಜನೆಗಳು, ಭಾರಿ ಅಣೆಕಟ್ಟುಗಳು, ಸಾರ್ವಜನಿಕ ಕೈಗಾರಿಕಾ ಉದ್ದಿಮೆಗಳು ದೇಶದ ಆರ್ಥಿಕ ನೀತಿಯ ಅಡಿಪಾಯಗಳಾಗಿ ಪರಿಣಮಿಸಿದವು. ಭಾರಿ ಕೈಗಾರಿಕೆಗಳನ್ನು ಸರ್ಕಾರದ ನಿಯಂತ್ರಣಕ್ಕೆ ತೆಗೆದುಕೊಂಡರೂ ಸ್ಥಳೀಯ ಬಂಡವಳಿಗರಿಗೆ ಪ್ರತಿಕೂಲ ಪರಿಸ್ಥಿತಿ ಉಂಟಾಗದ ರೀತಿಯಲ್ಲಿ ಸರ್ಕಾರ ಕ್ರಮ ಕೈಗೊಂಡಿತ್ತು.

೫೦ರ ದಶಕದವರೆಗೂ ಖಾಸಗಿ ಒಡೆತನದಲ್ಲಿದ್ದ ವಿಮಾ ಕ್ಷೇತ್ರವನ್ನು ೧೯೫೬ರಲ್ಲೂ ಬ್ಯಾಂಕಿಂಗ್ ಕ್ಷೇತ್ರವನ್ನು ೧೯೬೯ರಲ್ಲೂ ರಾಷ್ಟ್ರೀಕರಣ ಮಾಡಲಾಯಿತು. ಈ ರಾಷ್ಟ್ರೀಕರಣದ ನಿರ್ಧಾರದ ಹಿಂದೆ ಕಾರ್ಮಿಕ ವರ್ಗಗಳ ಅವಿರತ ಪರಿಶ್ರಮ ಮತ್ತು ಹೋರಾಟಗಳು ಪ್ರಮುಖ ಪಾತ್ರ ವಹಿಸಿದ್ದನ್ನು ಗಮನಿಸಬೇಕು. ಈ ಎರಡೂ ಹಣಕಾಸು ಕ್ಷೇತ್ರಗಳು ಸ್ಥಳೀಯ ಬಂಡವಾಳಗಾರರ ಹಿಡಿತದಲ್ಲಿದ್ದು ದೇಶದ ಸಾರ್ವಜನಿಕ ಸಂಪತ್ತು ಖಾಸಗಿಯವರ ಪಾಲಾಗುತ್ತಿತ್ತು. ವಿಮೆ ಮತ್ತು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹೂಡಲಾಗುತ್ತಿದ್ದ ಬಂಡವಾಳ ಮತ್ತು ಹಣ ಸಾರ್ವಜನಿಕ ಸೌಲಭ್ಯಗಳಿಗೆ ಬಳಕೆಯಾಗುತ್ತಿರಲಿಲ್ಲ. ಗ್ರಾಮೀಣ ಮತ್ತು ಸಣ್ಣಪುಟ್ಟ ಪಟ್ಟಣ ಕ್ಷೇತ್ರಗಳಲ್ಲಿ ಖಾಸಗಿ ಬ್ಯಾಂಕುಗಳಾಗಲೀ, ವಿಮಾ ಕಂಪನಿಗಳಾಗಲೀ ಸೇವೆ ಸಲ್ಲಿಸುತ್ತಿರಲಿಲ್ಲ.

೧೯೭೦ರ ದಶಕದಲ್ಲಿ ಗರೀಬಿ ಹಟಾವೋ ಕಾರ್ಯಕ್ರಮದೊಂದಿಗೆ ಸಮಾಜವಾದಿ ಸಿದ್ಧಾಂತದ ಸೋಗಿನಲ್ಲಿ ಮುಂದುವರಿದ ಭಾರತದ ಆರ್ಥಿಕ ನೀತಿ ಕಾರ್ಮಿಕ ಚಳುವಳಿಯನ್ನು ಸಾಂಘಿಕವಾಗಿ ಬಲಗೊಳಿಸಿದರೆ, ಸೈದ್ಧಾಂತಿಕವಾಗಿ ಶಿಥಿಲಗೊಳಿಸುವ ಪ್ರಥಮ ಹೆಜ್ಜೆಯಾಗಿತ್ತು. ಭಾರತದ ರಾಜಕೀಯ–ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಮಹತ್ತರ ತಿರುವು ಕಂಡುಬಂದದ್ದೂ ಈ ದಶಕದಲ್ಲೇ. ಕಾರ್ಮಿಕರ ಪರವಾದ ಕಾನೂನುಗಳನ್ನು ರಚಿಸುತ್ತಲೇ ಆಡಳಿತ ವರ್ಗ ಕಾರ್ಮಿಕ ಚಳುವಳಿಗಳಲ್ಲಿ ಬಿರುಕು ಮೂಡಿಸುವ ಯತ್ನಗಳನ್ನು ಕೈಬಿಡಲಿಲ್ಲ. ದೇಶಾದ್ಯಂತ ದಲಿತ ಚಳುವಳಿ ವ್ಯಾಪಕವಾಗಿ ಹರಡಿದ ನಂತರದಲ್ಲಿ ಕಾರ್ಮಿಕ ಸಂಘಟನೆಗಳಲ್ಲೂ ದಲಿತ ಅಸ್ಮಿತೆಯ ಪ್ರಶ್ನೆ ಮುಖ್ಯವಾಗತೊಡಗಿತು. ಇದಕ್ಕೂ ಮುನ್ನ ಎಡಪಂಥೀಯ ಸಂಘಟನೆಗಳಲ್ಲಾಗಲೀ, ಕಾಂಗ್ರೆಸ್ ನೇತೃತ್ವದ ಕಾರ್ಮಿಕ ಸಂಘಟನೆಗಳಲ್ಲಾಗಲೀ

ದಲಿತರಿಗೆ ಪ್ರತ್ಯೇಕ ಸ್ಥಾನಮಾನಗಳನ್ನು ನೀಡಿರಲಿಲ್ಲ ಎಂಬುದು ವಾಸ್ತವ ಅಂಶ. ಆದರೆ ಈ ವಿದ್ಯಮಾನಕ್ಕೆ ಜಾತಿ ಪ್ರಜ್ಞೆಯೊಂದೇ ಕಾರಣವಾಗಿರಲಿಲ್ಲ. ಹಲವಾರು ಸಂಘಟನಾತ್ಮಕ ಕಾರಣಗಳೂ ಇದ್ದವು. ಆದಾಗ್ಯೂ ದಲಿತರ ಪ್ರಾತಿನಿಧಿತ್ವದ ಪ್ರಶ್ನೆ ಬೃಹದಾಕಾರವಾಗಿ ಬೆಳೆದು ನಿಂತಾಗ ಅದನ್ನು ಪ್ರಜಾತಾಂತ್ರಿಕ–ಸಾಮುದಾಯಿಕ ನೆಲೆಯಲ್ಲಿ ಪರಿಹರಿಸದಿದ್ದುದೂ ಸಂಘಟನೆಗಳ ವೈಫಲ್ಯವಾಗಿತ್ತು.

ಪ್ರತಿಯೊಂದು ಉದ್ದಿಮೆಗಳಲ್ಲೂ ಎಸ್‌ಸಿ–ಎಸ್‌ಟಿ ಕಾರ್ಮಿಕ ಸಂಘಗಳು ತಮ್ಮ ಬೇಡಿಕೆಗಳಿಗಾಗಿ ಹೋರಾಡಲು ತಮ್ಮದೇ ಆದ ಪ್ರತ್ಯೇಕ ಸಂಘಗಳನ್ನು ಕಟ್ಟಿಕೊಂಡವು. ಕೆಲವು ರಾಜ್ಯಗಳಲ್ಲಿ ಪ್ರಾಂತೀಯ ಅಸ್ಮಿತೆಗಳನ್ನಾಧರಿಸಿದ ಸಂಘಗಳು, ಭಾಷಾವಾರು ಸಂಘಗಳೂ ಹುಟ್ಟಿಕೊಂಡವು. ತುರ್ತುಪರಿಸ್ಥಿತಿಯ ಪರಿಣಾಮವಾಗಿ ದೇಶದ ರಾಜಕೀಯದಲ್ಲಿ ತನ್ನದೇ ಆದ ಸ್ಥಾನ ಗಳಿಸಿದ ಜನಸಂಘ ನಂತರ ಭಾರತೀಯ ಜನತಾ ಪಕ್ಷವಾಗಿ ರೂಪುಗೊಂಡ ನಂತರ, ಬಲಪಂಥೀಯ ಕಾರ್ಮಿಕ ಸಂಘಟನೆಗಳೂ ಪ್ರಬಲ ಗೊಂಡವು. ಪ್ರಾದೇಶಿಕತೆಯ ಭಾವನೆಗಳು ಹೆಚ್ಚಾಗು ತ್ತಿದ್ದಂತೆಲ್ಲಾ ಕಾರ್ಮಿಕ ಸಂಘಟನೆಗಳಲ್ಲಿ ಕಾರ್ಮಿಕರ ಐಕ್ಯತಾ ಭಾವನೆ ಕ್ಷೀಣಿಸಲಾರಂಭಿಸಿತು. ಈ ಸನ್ನಿವೇಶ ಆಡಳಿತ ವರ್ಗಕ್ಕೆ ಅನುಕೂಲಕರವಾಗಿತ್ತು. ಕಾರ್ಮಿಕ ಸಂಘಟನೆಗಳ ವಿಘಟನೆ ಹೆಚ್ಚಾದಂತೆಲ್ಲಾ ಮಾಲೀಕರ ಕೈ ಮೇಲಾಗಿ, ದುಡಿಯುವ ವರ್ಗಗಳ ಹೋರಾಟಗಳು ತೀಕ್ಷ್ಣವಾಗತೊಡಗಿದರೂ ಹೋರಾಟದ ಪ್ರಖರತೆ ಕ್ಷೀಣಿಸತೊಡಗಿತ್ತು. ದೇಶದಲ್ಲಾದ ರಾಜಕೀಯ ಧ್ರುವೀಕರಣ ಕಾರ್ಮಿಕ ಸಂಘಟನೆಗಳಲ್ಲೂ ವ್ಯಕ್ತವಾಗತೊಡಗಿತ್ತು.

ನಿರುದ್ಯೋಗ ಸಮಸ್ಯೆ ಹೆಚ್ಚಾಗುತ್ತಿದ್ದಂತೆ ಪ್ರಾದೇಶಿಕ ಸಮಸ್ಯೆಗಳು ಉಲ್ಬಣಗೊಂಡವು. ಭಾಷಾವಾರು ಹೋರಾಟಗಳು ಹೆಚ್ಚಾದವು. ಮಹಿಳಾ ಚಳುವಳಿ ಪ್ರಬಲವಾಗತೊಡಗಿತ್ತು. ೮೦ರ ದಶಕದ ಪ್ರಾರಂಭದಲ್ಲಿ ಕಾಶ್ಮೀರ, ಪಂಜಾಬ್, ಅಸ್ಸಾಂ ಮುಂತಾದ ಈಶಾನ್ಯ ರಾಷ್ಟ್ರಗಳಲ್ಲಿ ಪ್ರತ್ಯೇಕತಾ ಚಳುವಳಿಗಳು ಪ್ರಖರವಾದವು. ಈ ಸಂದರ್ಭದಲ್ಲಿ ಕಾರ್ಮಿಕ ಚಳುವಳಿಗಳಲ್ಲಿ ಉಂಟಾದ ವಿಘಟನೆಯ ಪರಿಣಾಮವಾಗಿ, ಬಂಡವಾಳಗಾರರು ಹೆಚ್ಚು ಪ್ರಬಲರಾದರು. ಪ್ರಭುತ್ವ ಬಂಡವಾಳವಾದದ ನೀತಿಗನುಗುಣವಾಗಿ ಸರ್ಕಾರಗಳು ವಿಧಿಸುತ್ತಿದ್ದ ಅನೇಕ ನಿರ್ಬಂಧಗಳನ್ನು ಉದ್ಯಮಿಗಳು ವಿರೋಧಿಸಲಾರಂಭಿಸಿದರು.

೭೦ರ ದಶಕದಲ್ಲಿ ಭಾರತದ ಬೂರ್ಷ್ವಾ ಉದ್ಯಮಿಗಳು ಭಾರಿ ಪ್ರಮಾಣದ ಏಕಸ್ವಾಮ್ಯ ಉದ್ದಿಮೆಗಳನ್ನು ಸ್ಥಾಪಿಸಿದ್ದರೂ ತಮ್ಮ ಉದ್ದಿಮೆಗೆ ಮಾರುಕಟ್ಟೆ ಒದಗಿಸುವ ಸಲುವಾಗಿ ಸರ್ಕಾರದ ನಿಯಂತ್ರಣವನ್ನು ಬಯಸಿದ್ದರು. ಆದರೆ ೮೦ರ ದಶಕದಲ್ಲಿ ಸೀಮಿತ ಮಾರುಕಟ್ಟೆಯಿಂದ ಜಾಗತಿಕ ಮಾರುಕಟ್ಟೆಗೆ ಸೀಮೋಲ್ಲಂಘನ ಮಾಡಲು ಭಾರಿ ವಾಣಿಜ್ಯೋದ್ಯಮಿಗಳು ಉತ್ಸುಕರಾಗಿದ್ದರು. ಸರ್ಕಾರದ ನಿರ್ಬಂಧಗಳ ಪರಿಣಾಮವಾಗಿ ಸಣ್ಣ ಪ್ರಮಾಣದ ಉದ್ದಿಮೆಗಳನ್ನು ಕಬಳಿಸುವುದೂ ದುಸ್ಸಾಧ್ಯವಾಗಿತ್ತು.

ಈ ಅವಧಿಯಲ್ಲೇ ಕಾಂಗ್ರೆಸ್ ಸರ್ಕಾರ ೧೯೮೫ರಲ್ಲಿ ನವ ಆರ್ಥಿಕ ನೀತಿಯನ್ನು ಮಂಡಿಸುವ ಮೂಲಕ ಭಾರತದ ಆರ್ಥಿಕತೆಯನ್ನು ವಿಭಿನ್ನ ಮಾರ್ಗದಲ್ಲಿ ಕೊಂಡೊಯ್ದಿತ್ತು. ೧೯೯೧ರಲ್ಲಿ ಜಾರಿಗೊಳಿಸಲಾದ ಮುಕ್ತ ಮಾರುಕಟ್ಟೆ ಆರ್ಥಿಕ ವ್ಯವಸ್ಥೆ ಮತ್ತು ನವ ಉದಾರವಾದಿ ಧೋರಣೆಗಳಿಗೆ ಈ ನೀತಿಗಳು ತಳಹದಿಯಾಗಿದ್ದವು.

ನವ ಉದಾರವಾದ ಸರಕುಗಳ ಮುಕ್ತ ಪ್ರವೇಶಕ್ಕೆ ಅಡಿಪಾಯವಾಯಿತು. ಸಾರ್ವಜನಿಕ ಉದ್ದಿಮೆಗಳಿಗೆ ದೊರೆಯುತ್ತಿದ್ದ ಬೆಂಬಲ ಕ್ಷೀಣಿಸಲಾರಂಭಿಸಿತು. ಗ್ರಾಮೀಣ ಕೃಷಿ ಕ್ಷೇತ್ರವನ್ನು ಕಡೆಗಣಿಸಲಾಯಿತು. ಜಾಗತೀಕರಣ ಪ್ರಕ್ರಿಯೆಯೊಂದಿಗೆ ಖಾಸಗೀಕರಣ ಪ್ರಕ್ರಿಯೆಯೂ ತೀವ್ರವಾಯಿತು. ಕೈಗಾರಿಕಾ ಬಂಡವಾಳದ ಸ್ಥಾನವನ್ನು ಹಣಕಾಸು ಬಂಡವಾಳ ಆಕ್ರಮಿಸಿತು. ವಿದೇಶಿ ಬಂಡವಾಳದ ಹರಿವು ಹೆಚ್ಚಾಗುತ್ತಿದ್ದಂತೆಯೇ ಭಾರತದ ಆರ್ಥಿಕ ಕ್ಷೇತ್ರದಲ್ಲಿ ಸರ್ಕಾರದ ಪಾತ್ರ ನಗಣ್ಯವಾಗತೊಡಗಿತು. ಸಾವಿರಾರು ಸಾರ್ವಜನಿಕ ಉದ್ಯಮಗಳು ಮುಚ್ಚಲ್ಪಟ್ಟವು. ಲಕ್ಷಾಂತರ ಕಾರ್ಮಿಕರು ಬೀದಿಪಾಲಾದರು.

ವಿಮೆ, ಬ್ಯಾಂಕಿಂಗ್ ಮತ್ತಿತರ ಸೇವಾ ಕ್ಷೇತ್ರಗಳಲ್ಲಿ ಖಾಸಗಿ ಬಂಡವಾಳ ಹೂಡಿಕೆಗೆ ಮುಕ್ತ ಅವಕಾಶ ನೀಡಲಾಯಿತು. ಮಾಹಿತಿ ತಂತ್ರಜ್ಞಾನದ ಬೆನ್ನಟ್ಟಿ ಹೋದ ಆಳುವ ವರ್ಗಗಳಿಗೆ ಜನಸಾಮಾನ್ಯರ ಜೀವನ ಮಟ್ಟ ನಗಣ್ಯವಾಗಿ, ಷೇರು ಮಾರುಕಟ್ಟೆಯ ಸೂಚ್ಯಂಕ ಮುಖ್ಯವಾಯಿತು. ೧೯೯೮ರಲ್ಲಿ ಭಾರತೀಯ ಜನತಾ ಪಕ್ಷ ನೇತೃತ್ವದ ಸರ್ಕಾರ ಅಧಿಕಾರಗ್ರಹಣ ಮಾಡಿದ ನಂತರ ಜಾಗತೀಕರಣ ಪ್ರಕ್ರಿಯೆ ತೀವ್ರತೆ ಪಡೆದುಕೊಂಡಿತು. ವಿದೇಶೀ ಬ್ಯಾಂಕು ಮತ್ತು ವಿಮಾ ಕ್ಷೇತ್ರಗಳಿಗೆ ಮುಕ್ತ ಅವಕಾಶ ನೀಡಲಾಯಿತು. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಸರ್ಕಾರದ ಪಾಲನ್ನು ಕಡಿಮೆ ಮಾಡಲಾಯಿತು. ಬ್ಯಾಂಕುಗಳು ಬಂಡವಾಳಕ್ಕಾಗಿ ಷೇರುಮಾರುಕಟ್ಟೆಗೆ ಮೊರೆಹೋಗುವ ಮೂಲಕ ಪರೋಕ್ಷವಾದ ಖಾಸಗೀಕರಣ ಪ್ರಕ್ರಿಯೆ ಚಾಲ್ತಿಗೆ ಬಂದಿತು. ಆಹಾರ ಧಾನ್ಯಗಳ ರಫ್ತುಗಳ ಮೇಲಿದ್ದ ನಿರ್ಬಂಧಗಳನ್ನು ಸಡಿಲಗೊಳಿಸಲಾಗಿ, ದೇಶದ ಕೃಷಿ ಉತ್ಪನ್ನಗಳು ಪರದೇಶಗಳಿಗೆ ರವಾನೆಯಾಗತೊಡಗಿದವು.

**ಪ್ರಾರ್ಥನೆ**

ನೊಣ ಹೊಡೆಯುತ್ತಿದ್ದ  
ಡಾಕ್ಟರನೂ  
ಲಕ್ಷಾಧೀಶನಾದ !  
ಡೆಂಗೆ ಜ್ವರ  
ಹೀಗೇ ಹರಡಲೆಂದು  
ಭಗವಂತನಲ್ಲಿ  
ಪ್ರಾರ್ಥಿಸಿದ !

**ಅಂಬಾದಾಸ ವಡೆ**  
ಬಾಗಲಕೋಟ – ೫೮೭೧೦೧

ಕೃಷಿ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆ ಕ್ಷೀಣಿಸಿದ ಪರಿಣಾಮವಾಗಿ ಕೃಷಿ ಉತ್ಪನ್ನವೂ ಕುಂಠಿತವಾಯಿತು. ರೈತರು ಬೆಳೆದ ಫಸಲಿಗೆ ಸೂಕ್ತ ಬೆಲೆ ದೊರಕದಾಯಿತು. ಸಣ್ಣ ಮತ್ತು ಮಧ್ಯಮ ಪ್ರಮಾಣದ ರೈತರು ಆತ್ಮಹತ್ಯೆಗೆ ಶರಣಾದರು. ಕಳೆದ ಒಂದು ದಶಕದಲ್ಲಿ ಲಕ್ಷಾಂತರ ರೈತರು ಸಾಲದ ಹೊರೆ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿನ ಸುಧಾರಣೆಗಳ ಪರಿಣಾಮವಾಗಿ ಆದ್ಯತಾ ವಲಯದ ಸಾಲ ನೀಡಿಕೆ ಕುಂಠಿತವಾಯಿತು. ಉತ್ಪಾದಕೀಯತೆ ಯನ್ನು ಹೆಚ್ಚಿಸುವ, ಉದ್ಯೋಗ ಸೃಷ್ಟಿಸುವ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಬಂಡವಾಳವನ್ನು ಸೃಷ್ಟಿಸುವ ನಿಟ್ಟಿನಲ್ಲಿ ಬ್ಯಾಂಕುಗಳು ಯಾವುದೇ ಧನಾತ್ಮಕ ಕ್ರಮ ಕೈಗೊಳ್ಳಲಿಲ್ಲ. ಭಾಗಶಃ ಖಾಸಗೀಕರಣಕ್ಕೊಳಗಾದ ರಾಷ್ಟ್ರೀಕೃತ ಬ್ಯಾಂಕುಗಳ ಧೋರಣೆಯೂ ಜನಸಾಮಾನ್ಯರ ಆಶೋತ್ತರಗಳಿಂದ ದೂರವಾಗಿ, ಶ್ರೀಮಂತರ ಪರವಾಗಿತ್ತು. ಸಣ್ಣ ವ್ಯಾಪಾರಿಗಳು, ಮಧ್ಯಮವರ್ಗದ ಜನತೆಗೆ ಬ್ಯಾಂಕಿಂಗ್ ಸೌಲಭ್ಯಗಳು ಮರೀಚಿಕೆಯಾಗಿ, ರಿಯಲ್ ಎಸ್ಟೇಟ್, ಕಾರು ಮತ್ತಿತರ ವಾಹನಗಳ ಖರೀದಿ, ಮಾಹಿತಿ ತಂತ್ರಜ್ಞಾನ ಮುಂತಾದ ಕ್ಷೇತ್ರಗಳಿಗೆ ಸಾರ್ವಜನಿಕ ಬ್ಯಾಂಕುಗಳು ಸ್ಪಂದಿಸತೊಡಗಿದವು. ಇದೇ ಸಂದರ್ಭದಲ್ಲಿ ಗಣಕ ಯಂತ್ರಗಳು ವ್ಯಾಪಕವಾಗಿ ಬಳಸಲ್ಪಟ್ಟು ಉದ್ಯೋಗಾ ವಕಾಶಗಳೂ ಕುಂಠಿತಗೊಂಡವು.

ಭಾರತದಲ್ಲಿ ಶೇಕಡ ೭೦ರಷ್ಟು ಕಾರ್ಮಿಕರು ಕೃಷಿ ಕ್ಷೇತ್ರವನ್ನೇ ಅವಲಂಬಿಸಿದ್ದು, ಇತ್ತೀಚಿನ ವರ್ಷಗಳಲ್ಲಿ ಕೃಷಿ ಕ್ಷೇತ್ರದಲ್ಲಿ ಉಲ್ಬಣಿಸುತ್ತಿರುವ ಬಿಕ್ಕಟ್ಟಿನ ಪರಿಣಾಮವಾಗಿ ಕೃಷಿ ಕಾರ್ಮಿಕರ ಬವಣೆ ಹೇಳತೀರ ದಾಯಿತು. ಗ್ರಾಮೀಣ ಪ್ರದೇಶದಲ್ಲಿ ನಿರುದ್ಯೋಗಿ ಗಳಾಗಿರುವವರನ್ನು ತನ್ನೆಡೆಗೆ ಸೆಳೆದುಕೊಳ್ಳುವಲ್ಲಿ ಔದ್ಯಮಿಕ ಕ್ಷೇತ್ರ ವಿಫಲವಾಗಿರುವುದರಿಂದ ನಗರ ಗಳಿಗೆ ವಲಸೆ ಹೋಗುವವರ ಸಂಖ್ಯೆ ಹೆಚ್ಚಾಯಿತು. ಸುಮಾರು ೪೦ ಕೋಟಿ ಕಾರ್ಮಿಕರನ್ನು ಹೊಂದಿರುವ ಅಸಂಘಟಿತ ಕ್ಷೇತ್ರದ ಬಗ್ಗೆ ಯಾವುದೇ ಸರ್ಕಾರವೂ ನಿರ್ದಿಷ್ಟ ಯೋಜನೆ ಜಾರಿಗೊಳಿಸದಿರುವುದು ವಿಷಾದನೀಯ. ಎನ್. ಎಸ್. ಎಸ್. ಒ. ಸಮೀಕ್ಷೆಯ ಪ್ರಕಾರ ಕೃಷಿ ಕ್ಷೇತ್ರದಲ್ಲಿ ೨೪ ಕೋಟಿ, ತಯಾರಿಕಾ ಕ್ಷೇತ್ರದಲ್ಲಿ ೪ ಕೋಟಿ, ವ್ಯಾಪಾರ–ಸೇವಾ ಕ್ಷೇತ್ರದಲ್ಲಿ ೪ ಕೋಟಿ, ಕಟ್ಟಡ ನಿರ್ಮಾಣದಲ್ಲಿ ೨ ಕೋಟಿ ಮತ್ತು ಇತರ ಕ್ಷೇತ್ರಗಳಲ್ಲಿ ೬ ಕೋಟಿ ಅಸಂಘಟಿತ ಕಾರ್ಮಿಕರಿದ್ದಾರೆ.

ಔಪಚಾರಿಕ ಕ್ಷೇತ್ರದಲ್ಲೂ ೧೯೯೯–೨೦೦೦ದಲ್ಲಿ ೫೪.೧ ದಶಲಕ್ಷವಿದ್ದ ಕಾರ್ಮಿಕರ ಸಂಖ್ಯೆ ೨೦೦೪–೨೦೦೫ರಲ್ಲಿ ೬೨.೬ ದಶಲಕ್ಷವಾಗಿದೆ. ಅಂದರೆ

ವಾರ್ಷಿಕ ಶೇಕಡ ೩ರಷ್ಟು ವೃದ್ಧಿಯಾಗಿದೆ. ಸಂಘಟಿತ ಕ್ಷೇತ್ರವನ್ನು ಮಾತ್ರ ಪರಿಗಣಿಸುವುದಾದರೆ ಇದೇ ಅವಧಿಯಲ್ಲಿ ಕಾರ್ಮಿಕರ ಸಂಖ್ಯೆ ೩೩.೭ ದಶಲಕ್ಷದಿಂದ ೩೩.೪ ದಶಲಕ್ಷಕ್ಕೆ ಇಳಿದಿದೆ. ಸಂಘಟಿತ ಕ್ಷೇತ್ರದಲ್ಲಿ ಪ್ರಬಲವಾದ ಕಾರ್ಮಿಕ ಸಂಘಟನೆಗಳು ಸಕ್ರಿಯವಾಗಿದ್ದರೂ ಉದ್ಯೋಗ ಸೃಷ್ಟಿಸುವಲ್ಲಿ ಔದ್ಯಮಿಕ ಕ್ಷೇತ್ರ ವಿಫಲವಾಗಿರುವುದು ನವ ಉದಾರವಾದಿ ನೀತಿಗಳ ನೇರ ಪರಿಣಾಮವಾಗಿದೆ.

೧೯೯೦ರಲ್ಲಿ ಸಾರ್ವಜನಿಕ ಉದ್ದಿಮೆಗಳ ಸಂಖ್ಯೆ ೨೬೬ರಷ್ಟಿದ್ದು ೨೦೦೮ರಲ್ಲಿ ೨೨೦ಕ್ಕೆ ಇಳಿದಿದೆ. ಈ ಅವಧಿಯಲ್ಲಿ ಐದು ಲಕ್ಷಕ್ಕೂ ಹೆಚ್ಚು ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ. ವಿದೇಶಿ ಬ್ಯಾಂಕುಗಳು ಮತ್ತು ವಿಮಾ ಕಂಪನಿಗಳಿಗೆ ಮುಕ್ತ ಅವಕಾಶ ನೀಡಿರುವುದರಿಂದ ದೇಶಿ ಸಂಸ್ಥೆಗಳು ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಹೆಣಗಾಡುತ್ತಿರುವುದು ಸ್ಪಷ್ಟವಾಗಿದೆ.

ಭಾರತದಲ್ಲಿ ನವ ಉದಾರವಾದ ಮತ್ತು ಜಾಗತೀಕರಣ ಪ್ರಕ್ರಿಯೆ ಪ್ರಾರಂಭಗೊಂಡ ಸಂದರ್ಭದಲ್ಲೇ ರಾಜಕೀಯ ಧ್ರುವೀಕರಣವೂ ಉಂಟಾಗಿದ್ದು ಕಾಕತಾಳೀಯವಲ್ಲ. ೬೦ರ ದಶಕದಿಂದಲೂ ದೇಶದ ರಾಜಕೀಯ ಕ್ಷೇತ್ರದಲ್ಲಿ ಬೇರೂರಿದ್ದ ಆರೆಸ್ಸೆಸ್ ಮತ್ತು ಜನಸಂಘ ಸಂಘಟನೆಗಳು ೮೦ರ ದಶಕದ ನಂತರದಲ್ಲಿ ಸಕ್ರಿಯವಾದವು. ೭೭ರ ತುರ್ತುಪರಿಸ್ಥಿತಿ, ೮೦ರ ದಶಕದ ಮಂಡಲ್ ಚಳುವಳಿ ಮತ್ತು ಪ್ರತ್ಯೇಕತಾ ಚಳುವಳಿಗಳ ಹಿನ್ನೆಲೆಯಲ್ಲಿ ಹಿಂದುತ್ವ ಸಿದ್ಧಾಂತವನ್ನು ಪ್ರತಿಪಾದಿಸುತ್ತಲೇ ಸಕ್ರಿಯ ರಾಜಕೀಯ ಪ್ರವೇಶಿಸಿದ ಭಾರತೀಯ ಜನತಾ ಪಕ್ಷ, ೮೦ರ ದಶಕದ ನಂತರ ಪ್ರಬಲವಾಗಿದ್ದ ಬಂಡವಳಿಗರಿಗೆ ಮತ್ತು ಕಾರ್ಪೋರೇಟ್ ಉದ್ಯಮಿಗಳಿಗೆ ಉತ್ತಮ ವೇದಿಕೆಯಾಗಿತ್ತು.

೭೦ರ ದಶಕದ ಮುನ್ನ ರಾಷ್ಟ್ರ ರಾಜಕಾರಣದಲ್ಲಿ ಕಾರ್ಮಿಕ ವರ್ಗಗಳು ನೇರವಾಗಿ ತಮ್ಮ ಪ್ರಭಾವ ಬೀರದಿದ್ದರೂ ಎಡಪಕ್ಷಗಳ ಜನಪರ ಧೋರಣೆಗಳನ್ನು ಬೆಂಬಲಿಸುವುದರ ಮೂಲಕ, ಜನಸಾಮಾನ್ಯರ ಹಕ್ಕೊತ್ತಾಯಗಳನ್ನು ಸಮರ್ಥಿಸುವುದರ ಮೂಲಕ, ರಾಷ್ಟ್ರವ್ಯಾಪಿ ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದರ ಮೂಲಕ ತಮ್ಮ ರಾಜಕೀಯ ಪ್ರಜ್ಞೆಯನ್ನು ವ್ಯಕ್ತಪಡಿಸಿದ್ದವು. ಇದೇ ದಶಕದಲ್ಲಿ ದೇಶಾದ್ಯಂತ ಕಂಡುಬಂದ ಅನೇಕ ಸಾಮುದಾಯಿಕ ಅಸ್ಮಿತೆಗಳ ಹೋರಾಟಗಳಿಗೆ, ರೈತ ಚಳುವಳಿಗಳಿಗೆ ದೇಶದ ಸಂಘಟಿತ ಕಾರ್ಮಿಕವರ್ಗ ಸ್ಪಂದಿಸುವುದರಲ್ಲಿ ಯಶಸ್ವಿಯಾಗಿತ್ತು. ಸಂಸತ್ತಿನಲ್ಲಿ ಎಡಪಕ್ಷಗಳ ಪ್ರಾಬಲ್ಯ ಶಿಥಿಲವಾಗಿದ್ದರೂ ವಿರೋಧ ಪಕ್ಷವಾಗಿ ಆಳ್ವಿಕರ ನೀತಿಗಳನ್ನು ನಿಯಂತ್ರಣದಲ್ಲಿರಿಸುವಲ್ಲಿ ಯಶಸ್ಸು ಕಂಡಿದ್ದರೆ, ಆ ಯಶಸ್ಸಿನ ಹಿಂದೆ ಕಾರ್ಮಿಕ ವರ್ಗಗಳ ಐಕ್ಯತೆ ಮತ್ತು ಹೋರಾಟಗಳ ಕೊಡುಗೆ ಇರುವುದನ್ನು ಅಲಕ್ಷಿಸಲಾಗುವುದಿಲ್ಲ.

ಆದರೆ ೧೯೮೦ರ ನಂತರ ಜಾಗತೀಕರಣ–ನವ ಉದಾರವಾದ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಸಂಘಟಿತ ಕಾರ್ಮಿಕ ವರ್ಗಗಳು ತಮ್ಮ ರಾಜಕೀಯ ಪ್ರಜ್ಞೆಯ ಮೊನಚನ್ನು ಕಳೆದುಕೊಳ್ಳಲಾರಂಭಿಸಿದವು. ಸುಭದ್ರ ನೌಕರಿಯ ಭರವಸೆಯನ್ನು ಕ್ರಮೇಣ ಕಳೆದುಕೊಳ್ಳಲಾಗಿ, ಕಾರ್ಮಿಕ ಸಂಘಟನೆಗಳಿಗೆ ತಮ್ಮ ಅಳಿವು ಉಳಿವಿನ ಪ್ರಶ್ನೆ ಪ್ರಧಾನವಾಗತೊಡಗಿತು. ಇದಕ್ಕೂ ಮುನ್ನ ಲಭ್ಯವಿದ್ದ ಸೇವಾ ಸೌಲಭ್ಯಗಳಿಂದ ವಂಚಿತರಾದ ಕಾರ್ಮಿಕ ವರ್ಗಗಳಿಗೆ ತಮ್ಮ ನೌಕರಿಯ ರಕ್ಷಣೆಯೊಂದಿಗೇ ಉದ್ದಿಮೆಯನ್ನು ರಕ್ಷಿಸುವ ಹೊಣೆಗಾರಿಕೆಯೂ ಹೆಚ್ಚಾಗತೊಡಗಿತು. ಒರಿಸ್ಸಾದ ಬಾಲ್ಕೋ ಕಾರ್ಮಿಕರ ಹೋರಾಟ ಈ ನಿಟ್ಟಿನಲ್ಲಿ ಪ್ರತ್ಯಕ್ಷ ನಿದರ್ಶನ. ಎಡಪಕ್ಷಗಳು ಮತ್ತು ಕಾರ್ಮಿಕ ಸಂಘಟನೆಗಳ ನಡುವಿನ ಸಂಬಂಧಗಳು ವ್ಯಾವಹಾರಿಕವಾಯಿತೆಂದೂ ಹೇಳಬಹುದು. ತಮ್ಮ ಹಕ್ಕೊತ್ತಾಯಗಳಿಗಾಗಿ ಎಡಪಕ್ಷಗಳನ್ನು ಆಶ್ರಯಿಸುತ್ತಿದ್ದ ಕಾರ್ಮಿಕರು ರಾಜಕಾರಣದಲ್ಲಿ ಅನ್ಯಪಕ್ಷಗಳ ಸೀಮಿತ ದೃಷ್ಟಿಕೋನಗಳಿಗೆ ಬಲಿಯಾದರು. ಹಾಗಾಗಿ ಎಡಪಕ್ಷಗಳು ಭದ್ರಕೋಟೆ ಎನಿಸಿದ್ದ ಕ್ಷೇತ್ರಗಳಲ್ಲೂ ಚುನಾವಣೆಯಲ್ಲಿ ಸೋಲನು ಭವಿಸಬೇಕಾಯಿತು. ಭಾಜಪ–ಆರೆಸ್ಸೆಸ್ ಪ್ರೇರಿತ ಹಿಂದುತ್ವ ರಾಜಕೀಯ ಮತ್ತು ಪ್ರಾದೇಶಿಕತೆಯ ಹೆಸರಿನಲ್ಲಿ ವಿವಿಧ ರಾಜ್ಯಗಳಲ್ಲಿ ಉದ್ಭವಿಸಿದ ಜಾತಿ ರಾಜಕೀಯ ದೇಶದ ಕಾರ್ಮಿಕರ ಐಕ್ಯತೆಯನ್ನು ಭಂಗಗೊಳಿಸುವಲ್ಲಿ ಯಶಸ್ವಿಯಾಗಿದ್ದವು.

ಜಾಗತೀಕರಣವನ್ನು ವಿರೋಧಿಸುವುದೆಂದರೆ ತಮ್ಮ ನೌಕರಿಯನ್ನು ರಕ್ಷಿಸಿಕೊಳ್ಳುವುದು ಮಾತ್ರ ಎಂಬ ಸೀಮಿತ ಚೌಕಟ್ಟಿನಲ್ಲಿ ಬಂಧಿತರಾದ ಸಂಘಟಿತ ಕಾರ್ಮಿಕರು ಇತರ ಸಾಮುದಾಯಿಕ ಹೋರಾಟಗಳೊಡನೆ ಗುರುತಿಸಿಕೊಳ್ಳುವುದರಲ್ಲಿ ವಿಫಲರಾದದ್ದು ಮೂಲಭೂತವಾದಿ ಸಂಘಟನೆಗಳಿಗೆ ವರದಾನವಾಗಿತ್ತು. ಶ್ರಮಜೀವಿಗಳ ಕ್ರಾಂತಿಕಾರಿ ಹೋರಾಟಗಳಿಗೆ ಸುಶಿಕ್ಷಿತ ಕಾರ್ಮಿಕ ವರ್ಗಗಳು ಮುಂಚೂಣಿ ನಾಯಕತ್ವ ವಹಿಸುವುದು ಅನಿವಾರ್ಯವೆಂದು ಮಾರ್ಕ್ಸ್ ಹೇಳುತ್ತಾರೆ. ಹಾಗಾಗಿಯೇ ಸಂಘಟಿತ ಕಾರ್ಮಿಕರಲ್ಲಿ ರಾಜಕೀಯ ಪ್ರಜ್ಞೆ ಬೆಳೆಸುವುದೂ ಅನಿವಾರ್ಯವಾಗುತ್ತದೆ. ಬಂಡವಾಳ ವ್ಯವಸ್ಥೆಯಿಂದ ಮುಕ್ತಿ ಪಡೆಯಲು ಶ್ರಮಜೀವಿಗಳು ಊಳಿಗಮಾನ್ಯ ಮನೋಭಾವದ ವಿರುದ್ಧ ನಿರಂತರವಾದ ಯುದ್ಧದಲ್ಲಿ ತೊಡಗಿರಬೇಕಾಗುತ್ತದೆ. ಭಾರತದ ಸಂದರ್ಭದಲ್ಲಿ ಶ್ರಮಜೀವಿಗಳೆಂದರೆ ಕೃಷಿ ಕಾರ್ಮಿಕರು ಮತ್ತು ಅಸಂಘಟಿತ ಕ್ಷೇತ್ರದ ಕಾರ್ಮಿಕರೇ ಆಗಿರುತ್ತಾರೆ. ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಈ ವರ್ಗಗಳು ಬಹುತೇಕವಾಗಿ ದಲಿತ–ಹಿಂದುಳಿದ–ಅಲ್ಪಸಂಖ್ಯಾತ ಸಮುದಾಯಗಳಿಗೆ ಸೇರಿದವರಾಗಿರುತ್ತಾರೆ. ನವ ಉದಾರವಾದ ನೀತಿಯ ಆಕ್ರಮಣದ ಹಿನ್ನೆಲೆಯಲ್ಲಿ ತೀವ್ರ ಹಿನ್ನಡೆ ಮತ್ತು ಶೋಷಣೆಯನ್ನು ಅನುಭವಿಸುತ್ತಿರುವ ಈ ಸಮುದಾಯಗಳ ಸಮಸ್ಯೆಗಳಿಗೆ ಸ್ಪಂದಿಸುವ ನಿಟ್ಟಿನಲ್ಲಿ ದೇಶದ ಕಾರ್ಮಿಕ ಜನತೆ ರಾಜಕೀಯ ಪ್ರಜ್ಞೆ ಬೆಳೆಸಿಕೊಳ್ಳಬೇಕಾಗುತ್ತದೆ. ಈ ಪ್ರಕ್ರಿಯೆಯಲ್ಲಿ ದೇಶದ ಕಾರ್ಮಿಕ ವರ್ಗ ವಿಫಲವಾಗಿದೆ ಎಂದು ವಿಷಾದದಿಂದ ಹೇಳಬೇಕಾಗಿದೆ.

ಈ ಸನ್ನಿವೇಶವನ್ನು ಭಾಜಪ–ಆರೆಸ್ಸೆಸ್‌ನಂತಹ ಸಂಘಟನೆಗಳು ಪರಿಣಾಮಕಾರಿಯಾಗಿ ಉಪಯೋಗಿಸಿಕೊಂಡಿವೆ. ಮಧ್ಯಮವರ್ಗದ ಕಾರ್ಮಿಕರಲ್ಲಿ ಹಿಂದುತ್ವ ಸಿದ್ಧಾಂತವನ್ನು ಬಿತ್ತುವ ಕೈಂಕರ್ಯದಲ್ಲಿ ಯಶಸ್ವಿಯಾಗಿವೆ. ಹಾಗಾಗಿಯೇ ಕಾರ್ಮಿಕ ಚಳುವಳಿ, ಕಾರ್ಮಿಕ ಸಂಘಟನೆ ಎಲ್ಲವೂ ಪ್ರಸ್ತುತ ಸಂದರ್ಭದಲ್ಲಿ ನಿರರ್ಥಕ ಮತ್ತು ಅಪ್ರಸ್ತುತ ಎಂಬ ಅಭಿಪ್ರಾಯ ಮಧ್ಯಮ ವರ್ಗಗಳಲ್ಲಿ ಗಟ್ಟಿಯಾಗುತ್ತಿದ್ದು, ಸುಶಿಕ್ಷಿತ ಸಂಘಟಿತ ಕಾರ್ಮಿಕರಲ್ಲಿ ರಾಜಕೀಯ ಪ್ರಜ್ಞೆ ಮಾಸುತ್ತಿದ್ದು ಧಾರ್ಮಿಕ, ಮತೀಯ, ಜಾತೀಯ ಅಸ್ಮಿತೆಗಳು ಗಟ್ಟಿಯಾಗುತ್ತಿವೆ. ಹಾಗಾಗಿಯೇ ಎಡಪಕ್ಷಗಳಿಗೆ ತಮ್ಮ ಸಂಘಟನಾತ್ಮಕ ಶಕ್ತಿಯನ್ನು ರಾಜಕೀಯ ಶಕ್ತಿಯನ್ನಾಗಿ ಪರಿವರ್ತಿಸಲು ಸಾಧ್ಯವಾಗುತ್ತಿಲ್ಲ. ಇಲ್ಲಿ ಪಕ್ಷದ ಅಥವಾ ನಾಯಕತ್ವದ ವೈಫಲ್ಯವನ್ನು ಗುರುತಿಸುವುದಕ್ಕಿಂತಲೂ ಜಾಗತೀಕರಣ – ನವ ಉದಾರವಾದ ಸೃಷ್ಟಿಸಿರುವ ಭ್ರಮಾಲೋಕ ಮತ್ತು ಆಧುನಿಕ ಗ್ರಾಹಕ ಸಂಸ್ಕೃತಿ ಸೃಷ್ಟಿಸಿರುವ ಪರಿಸರದ ಪರಿಣಾಮವನ್ನು ಗ್ರಹಿಸುವುದು ಸೂಕ್ತ. ಸಾಮಾಜಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳು ನಶಿಸಿಹೋಗುತ್ತಿರುವಂತೆಯೇ ಧನಾರ್ಜನೆಯ ವ್ಯಾಮೋಹ ಮಧ್ಯಮ ವರ್ಗವನ್ನು ಆವರಿಸಿರುವುದು ಪ್ರಸ್ತುತ ಪರಿಸ್ಥಿತಿಗೆ ಕಾರಣವಾಗಿದೆ.

ಕಾರ್ಮಿಕನಾದವನು ತನ್ನ ಎಲ್ಲ ಅಸ್ಮಿತೆಗಳನ್ನೂ ಕಳಚಿಕೊಂಡು ದುಡಿಯುವ ವರ್ಗದ ಏಕೈಕ ಅಸ್ಮಿತೆಗಾಗಿ ಹೋರಾಡಿದಾಗಲೇ ಶ್ರಮಜೀವಿಗಳ ಕ್ರಾಂತಿ

## ಗಝಲ್

ಎದೆಯಗೂಡಲಿ ಹುಟ್ಟುವ ಹಾಡಿಗೆ ಪ್ರೀತಿಯ ಕಾವು ಬೆರೆಸು
ಕಂಠದೊಳಗೆ ಇಂಗುವ ನೋವಿಗೆ ಮೌನದ ಭಾಷೆಯ ಕಲಿಸು

ಕಾಯ'ಕ' ಹರಿಸಿದ ಬೆವರಿಗೆ ಹೊಟ್ಟೆಯ ತಣಿಸುವ ಕಸುವ ಕರುಣಿಸು
ಹರಿದ ಬದುಕನು ಹಸನುಗೊಳಿಸು, ಮುರಿದ ಕನಸುಗಳ ಮತ್ತೆ ಕೂಡಿಸು

ಒಳಗಿನ ವ್ಯಥೆಯ ಬರೆಯಲು ಕಣ್ಣಹನಿಗೊಂದು ಭಾಷೆಯ ಕಲಿಸು
ಸೋತು ಹೈರಾಣಾದ ಬದುಕಿಗೆ ಗೆಲುವಿಗಾಗಿ ಹೋರಾಟದ
ಪದವ ಪರಿಚಯಿಸು

ನದಿ ಬತ್ತಿದರೇನು ? ತೋಡುವ ಒರತೆಯಲಿ ಬೊಗಸೆ ಸಿಹಿನೀರ ತುಂಬಿಸು
ಬದುಕಿನ ನೀರವ ದುಗುಡದ ನಡುವೆಯೂ ಒಂದಷ್ಟು ನಂಬಿಕೆ ಉಳಿಸು

ಸುಖನೆಮ್ಮದಿಗಳು ಮಾರಾಟದ ಸರಕುಗಳಲ್ಲ 'ಅಂಗಡಿ'ಯೊಳಗೆ
ಅವು ದೊರಕುವುದಿಲ್ಲ
ಈ ಕತ್ತಲು ಕಳೆಯಲಿ, ನಾಳೆ ಹುಟ್ಟುವ ಸೂರ್ಯನಿಗಾದರೂ ನನ್ನ
ಮೈದಡವಿ ಎಚ್ಚರಿಸಲು ತಿಳಿಸು.

**ಸಂತೋಷ ಅಂಗಡಿ**
'ಮಹಾಕೂಟ' ಲಕ್ಷ್ಮೀನಗರ ಬಾದಾಮಿ – ೫೮೭೨೦೧, ಬಾಗಲಕೋಟೆ – ಜಿಲ್ಲೆ

ಮುನ್ನಡೆಯುತ್ತದೆ ಎಂದು ಮಾರ್ಕ್ಸ್ ಹೇಳುತ್ತಾರೆ. ಆದರೆ ಭಾರತೀಯ ಕಾರ್ಮಿಕರಲ್ಲಿ ಶ್ರಮಜೀವಿಗಳ ಪ್ರಜ್ಞೆ ಮಾಯವಾಗುತ್ತಿದ್ದು ಇತರ ಸಾಮುದಾಯಿಕ ಅಸ್ಮಿತೆಗಳು ತಲೆದೋರುತ್ತಿವೆ.

ಭಾರತ ಇಂದು ಕವಲುಹಾದಿಯಲ್ಲಿ ಇದೆ. ಆರು ದಶಕಗಳ ಸ್ವತಂತ್ರ ಆಳ್ವಿಕೆಯಲ್ಲಿ ಬಗೆಹರಿಸಲಾಗದ ಜ್ವಲಂತ ಸಮಸ್ಯೆಗಳು ಹೇರಳವಾಗಿವೆ. ಸ್ವಾವಲಂಬಿ ಭಾರತವನ್ನು ನಿರ್ಮಿಸುವ ಹಿರಿಯರ ಕನಸು ಕನಸಾಗಿಯೇ ಉಳಿದಿದೆ. ಸಾಮ್ರಾಜ್ಯಶಾಹಿ ಶಕ್ತಿಗಳ ರಾಜಕೀಯ ಕುತಂತ್ರಗಳಿಗೆ ಬಲಿಯಾಗಿರುವ ದೇಶದ ಆಳುವ ವರ್ಗಗಳು ಜನಸಾಮಾನ್ಯರ ಸ್ವಾಭಿಮಾನವನ್ನು ಸಂಪೂರ್ಣ ಕಡೆಗಣಿಸಿರುವುದು ಸ್ಪಷ್ಟವಾಗಿದೆ. ಸೌಹಾರ್ದತೆ, ಸಹಬಾಳ್ವೆ, ಸೆಕ್ಯುಲರ್ ಭಾವನೆಗಳ ಆಗರದಂತಿದ್ದ ಭಾರತ ಇಂದು ದ್ವೇಷ, ಅಸೂಯೆ, ಹಿಂಸೆ, ಶೋಷಣೆ, ಮತ್ಸರಗಳ ಆಗರವಾಗಿದೆ. ಸಾಂವಿಧಾನಿಕ ಸವಲತ್ತುಗಳ ಹೊರತಾಗಿಯೂ ದಲಿತ ಸಮುದಾಯ ಇಂದಿಗೂ ತೀವ್ರ ಶೋಷಣೆ ಅನುಭವಿಸುತ್ತಿದೆ. ಜಾತಿ ಸಂಘರ್ಷಗಳು ದಿನೇ ದಿನೇ ಹೆಚ್ಚಾಗುತ್ತಿವೆ. ಖೈರ್ಲಾಂಜಿ, ಕಂಬಾಲಪಲ್ಲಿ, ಜಾಜ್ಜರ್ ಪ್ರಕರಣಗಳು ಜಾತಿ ವೈಷಮ್ಯದ ಪರಾಕಾಷ್ಠೆಯಾಗಿವೆ. ಮತ್ತೊಂದೆಡೆ ಮಹಿಳೆಯರ ಮೇಲಿನ ದೌರ್ಜನ್ಯ ಅವ್ಯಾಹತವಾಗಿ ನಡೆಯುತ್ತಿದೆ. ಗಂಡು – ಹೆಣ್ಣುಗಳ ಅನುಪಾತ ಇಳಿಮುಖವಾಗುತ್ತಿದೆ. ಹೆಣ್ಣು ಭ್ರೂಣ ಹತ್ಯೆ, ವರದಕ್ಷಿಣೆ ಸಾವುಗಳು, ಲೈಂಗಿಕ ದೌರ್ಜನ್ಯ, ಕೌಟುಂಬಿಕ ದೌರ್ಜನ್ಯ ಹೆಚ್ಚಾಗುತ್ತಿವೆ.



***ಹೋರಾಟನಿರತ ಕಾರ್ಮಿಕರು***

ಧಾರ್ಮಿಕ ಮೂಲಭೂತವಾದ ಎಲ್ಲ ಸಮುದಾಯಗಳಲ್ಲೂ ವ್ಯಾಪಕವಾಗಿ ಹರಡಿದ್ದು, ಮತೀಯ ಸಂಘರ್ಷಗಳು ಸಾಮಾನ್ಯವಾಗಿವೆ. ಕಳೆದ ಮೂರು ದಶಕಗಳಲ್ಲಿ ಕೋಮು ಘರ್ಷಣೆಗಳಲ್ಲಿ, ಕೋಮು ಹತ್ಯಾಕಾಂಡಗಳಲ್ಲಿ ಸತ್ತವರ ಸಂಖ್ಯೆ ಒಂದು ಲಕ್ಷ ಮೀರಿದೆ. ಮತಾಂತರ, ಗೋಹತ್ಯೆ, ಧರ್ಮ ರಕ್ಷಣೆಯ ಹೆಸರಿನಲ್ಲಿ ಅಲ್ಪಸಂಖ್ಯಾತರ ವಿರುದ್ಧ ಅವ್ಯಾಹತವಾಗಿ ನಡೆಯುತ್ತಿರುವ ಆಕ್ರಮಣಗಳು ದೇಶದ ಚಹರೆಯನ್ನೇ ಬದಲಿಸಿವೆ. ಈ ವಿಷಮ ಪರಿಸ್ಥಿತಿಯಲ್ಲಿ ಭಯೋತ್ಪಾದನೆಯ ಪೆಡಂಭೂತ ಜನಸಾಮಾನ್ಯರನ್ನು ಬೆಂಬಿಡದೆ ಕಾಡುತ್ತಿದೆ.

ಈ ವಿಷಮ ಪರಿಸ್ಥಿತಿಯಲ್ಲಿ ದೇಶದ ಸಂಘಟಿತ ಕಾರ್ಮಿಕರ ಪಾತ್ರವೇನು ಎಂಬ ಪ್ರಶ್ನೆ ಇಂದು ಪ್ರತಿಯೊಬ್ಬ ಪ್ರಜ್ಞಾವಂತ ಕಾರ್ಮಿಕನನ್ನೂ ಕಾಡಬೇಕಿದೆ. ಪ್ರಸಕ್ತ ಸಂಸತ್ ಚುನಾವಣೆಗಳಲ್ಲಿ ಮತದಾನದ ಪ್ರಮಾಣ ಕಡಿಮೆಯಾಗಿರುವುದು, ಜನಸಾಮಾನ್ಯರ ಆಕ್ರೋಶ, ಜಿಗುಪ್ಸೆಗಳ ಕುರುಹಾಗಿದೆ. ಯಾರೇ ಅಧಿಕಾರಕ್ಕೆ ಬಂದರೂ ಪ್ರಯೋಜನವಿಲ್ಲ ಎಂಬ ಸಿನಿಕತೆ ಜನಸಾಮಾನ್ಯರನ್ನು ಆವರಿಸಿದೆ.

ಇಂತಹ ಸನ್ನಿವೇಶದಲ್ಲಿ ನಾಗರಿಕತೆಯನ್ನು ಪ್ರತಿನಿಧಿಸುವ ಕಾರ್ಮಿಕ ವರ್ಗ ಏನು ಮಾಡಬಹುದು ? ಇಂದು ಯಾವೊಬ್ಬ ವ್ಯಕ್ತಿಯೂ ಬದುಕುಳಿಯುತ್ತೇನೆ ಎಂಬ ಧೈರ್ಯದಿಂದ ಹೊರಗೆ ಕಾಲಿಡಲಾಗುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯ ಮೇಲೆ ಅಪಾಯದ ತೂಗುಕತ್ತಿ ಕಾಣುತ್ತಿದೆ. ಭಯೋತ್ಪಾದಕ ದಾಳಿಯೊಂದೇ ಮಾನವ ಜಗತ್ತನ್ನು ತಲ್ಲಣಗೊಳಿಸುತ್ತಿಲ್ಲ. ಹಿಂಸೆ ಎಲ್ಲೆಡೆ ತಾಂಡವವಾಡುತ್ತಿದೆ. ಆಕ್ರಮಣಶೀಲತೆ ಸಂಘಟನಾತ್ಮಕವಾಗಿ ಕ್ರೋಡೀಕರಣವಾಗುತ್ತಿದ್ದು, ಒಬ್ಬ ಸಾಮಾನ್ಯ ಪ್ರಜೆ ತನ್ನ ಸಾಂವಿಧಾನಿಕ ಹಕ್ಕುಗಳನ್ನು ಪ್ರತಿಪಾದಿಸುವುದೂ ಅಪಾಯಕರವಾಗಿ ಕಂಡುಬರುತ್ತಿದೆ. ಅನ್ಯರಾಜ್ಯದಿಂದ ಕೂಳಿಗಾಗಿ ನೌಕರಿ ಅರಸಿ ಬಂದ ವ್ಯಕ್ತಿ ಆಕ್ರಮಣಕ್ಕೊಳಗಾಗುತ್ತಾನೆ. ತನ್ನ ಧರ್ಮದ ತತ್ವಗಳನ್ನು ಬೋಧಿಸುವವನು ಚಿತ್ರಹಿಂಸೆಗೊಳಗಾಗುತ್ತಾನೆ. ತನ್ನ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ವ್ಯಕ್ತಪಡಿಸುವ ಕಲಾವಿದ ಅಪಾಯದ ಅಂಚಿನಲ್ಲೇ ಇರುತ್ತಾನೆ. ಅನ್ಯಭಾಷೆಯನ್ನು ಬಳಸಿದವನು ದಂಡನೆಗೆ ಒಳಗಾಗುತ್ತಾನೆ. ತಾನು ಅರಿವು ಇಲ್ಲದೆಯೇ ಗಳಿಸಿದ ಸೌಂದರ್ಯಕ್ಕೆ ಒಬ್ಬ ಮಹಿಳೆ ಆ್ಯಸಿಡ್ ದಾಳಿಗೆ ಬಲಿಯಾಗುತ್ತಾಳೆ. ಪೋಷಕರ ಬಡತನಕ್ಕೆ ಹೆಣ್ಣುಮಕ್ಕಳು ಅಗ್ನಿಪ್ರವೇಶ ಮಾಡುತ್ತಾರೆ. ಹುಟ್ಟು ಆಕಸ್ಮಿಕವೇ ಆದರೂ, ಒಂದು ಇಡೀ ಸಮುದಾಯದ ಜನತೆ ತಮ್ಮ ಹುಟ್ಟನ್ನು ಶಪಿಸುವ ಮಟ್ಟಿಗೆ ಶೋಷಣೆಗೊಳಗಾಗುತ್ತಾರೆ. ತನ್ನ ಸಾಂವಿಧಾನಿಕ ಹಕ್ಕುಗಳಿಗಾಗಿ ಹೋರಾಡುವ ಕಾರ್ಮಿಕರೂ ಆಕ್ರಮಣಕ್ಕೊಳಗಾಗುತ್ತಾರೆ. ತಮ್ಮ ಜೀವನಾಧಾರವಾದ ಭೂಮಿಯನ್ನು ಉಳಿಸಿಕೊಳ್ಳಲು ಹೋರಾಡುವ ರೈತರು ಗುಂಡೇಟಿಗೆ ಬಲಿಯಾಗುತ್ತಾರೆ. ಆದರೂ ನಾವು ಅಹಿಂಸಾವಾದದ ಪರಿವ್ರಾಜಕರಂತೆ ಮೆರೆಯುತ್ತೇವೆ. ಸಮಾಜ ತನ್ನನ್ನು ತಾನೇ ನಾಗರಿಕ ಸಮಾಜ ಎಂದು ಕರೆದುಕೊಳ್ಳುತ್ತದೆ. ಈ ಎಲ್ಲಾ ಹಿಂಸಾತ್ಮಕ ಕೃತ್ಯಗಳಿಗೂ ನಮ್ಮಲ್ಲಿ ಸಮರ್ಥನೆ ಇದೆ. ಈ ಸಮರ್ಥನೆಯೇ ಆಧುನಿಕ ಮಾನವ ಸಮಾಜವನ್ನು ಸುಧಾರಣೆಯ ಹಾದಿಯಿಂದ ವಿಮುಖವಾಗುವಂತೆ ಮಾಡಿದೆ.

ಅಸ್ಮಿತೆಗಳ ಭೂತಗನ್ನಡಿಯ ಮೂಲಕವೇ ಇಡೀ ಸಾಮಾಜಿಕ ವಿದ್ಯಮಾನಗಳನ್ನು ನೋಡುವ ಪರಂಪರೆಯಿಂದ ದೇಶದ ಪ್ರಜ್ಞಾವಂತ ಜನತೆ ಮುಕ್ತರಾಗುವ ತುರ್ತು ಅಗತ್ಯತೆ ಇದೆ. ದೇಶದ ರಾಜಕೀಯ ಪ್ರಜ್ಞೆಗೆ ಮುಂಚೂಣಿ ನಾಯಕತ್ವ ನೀಡಬೇಕಾದ ಕಾರ್ಮಿಕ ವರ್ಗಗಳೂ ಇದೇ ನಿಟ್ಟಿನಲ್ಲಿ ಯೋಚಿಸಬೇಕಾಗಿದೆ. ಇಂದು ಕಾರ್ಮಿಕ ವರ್ಗ ಎದುರಿಸುತ್ತಿರುವ ಸವಾಲುಗಳು ಸಮಾಜದ ಎಲ್ಲರನ್ನೂ ಬಾಧಿಸುತ್ತದೆ. ಶ್ರಮಜೀವಿಗಳ ಐಕ್ಯತೆಯನ್ನು ಭಂಗಗೊಳಿಸುವ ನಿಟ್ಟಿನಲ್ಲಿ ದೇಶವನ್ನೇ ವಿನಾಶದ ಅಂಚಿಗೆ ಕೊಂಡೊಯ್ಯುತ್ತಿರುವ ವಿಭಜಕ ಶಕ್ತಿಗಳ ವಿರುದ್ಧ ಸಂಘಟಿತ ಕಾರ್ಮಿಕರು ಹೋರಾಡಬೇಕಾಗಿದೆ. ಮೇ ದಿನಾಚರಣೆಯ ಆಚರಣೆಯೂ ಇದೇ ತತ್ವವನ್ನು ಸಾರುತ್ತದೆ. ಜಾಗತೀಕರಣ ಮತ್ತು ನವ ಉದಾರವಾದ ನೀತಿಗಳು ಸೃಷ್ಟಿಸಿರುವ ಭ್ರಮಾಲೋಕದಿಂದ ಜನಸಾಮಾನ್ಯರ ವಿಮೋಚನೆಗಾಗಿ ಹೋರಾಡುವುದು ಇಂದಿನ ತುರ್ತು ಅಗತ್ಯತೆಯಾಗಿದೆ. ಕೃಷಿ ಕಾರ್ಮಿಕರು, ಅಸಂಘಟಿತ ಕಾರ್ಮಿಕರು, ಅನಕ್ಷರಸ್ಥರು, ದಮನಿತ ಜನ ಸಮುದಾಯಗಳು ತಮ್ಮ ವಿಮೋಚನೆಗಾಗಿ ನಡೆಸುತ್ತಿರುವ ಕ್ರಾಂತಿಕಾರಿ ಹೋರಾಟಗಳಿಗೆ ಮುಂಚೂಣಿ ನಾಯಕತ್ವ ವಹಿಸುವುದು ದೇಶದ ಕಾರ್ಮಿಕರ ಗುರುತರ ಜವಾಬ್ದಾರಿಯಾಗಿದೆ. ಒಂದು ಪ್ರಜಾತಾಂತ್ರಿಕ ಸಮಾಜದ ನಿರ್ಮಾಣದಲ್ಲಿ ಕಾರ್ಮಿಕರ ಮಹತ್ವದ ಪಾತ್ರವನ್ನು ಗ್ರಹಿಸಿ ಮುನ್ನಡೆಯಬೇಕಾಗಿದೆ. ಸ್ವಾಭಿಮಾನಿ, ಸ್ವಾವಲಂಬಿ, ಸದೃಢ ಭಾರತದ ನಿರ್ಮಾಣಕ್ಕೆ ಸಂಘಟಿತ, ಅಸಂಘಟಿತ ಕಾರ್ಮಿಕರ ಮತ್ತು ಶ್ರಮಜೀವಿಗಳ ಹೋರಾಟಗಳು ದಾರಿದೀಪವಾಗಬೇಕಿದೆ.

**ನಾ. ದಿವಾಕರ**
೩೮, ಬ್ಲಾಕ್ ೨೨, 'ಮಧುವನ', ಶ್ರೀರಾಂಪುರ ೨ನೇ ಹಂತ
ಮೈಸೂರು – ೫೭೦ ೦೨೩

## ಅಭಿನಂದನೆ

ಬೇಂದ್ರೆ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ನೀಡುವ **ಅಂಬಿಕಾತನಯ ದತ್ತ** ಪ್ರಶಸ್ತಿಯನ್ನು **ಡಾ॥ ಗುರುಲಿಂಗ ಕಾಪಸೆ** ಅವರಿಗೆ ನೀಡಿ ಗೌರವಿಸಲಾಗಿದೆ. 'ನವಕರ್ನಾಟಕ ಸಾಹಿತ್ಯ ಸಂಪದ ಮಾಲೆ'ಯ ಕೃತಿಯೊಂದರ ಲೇಖಕರೂ ಆದ ಪ್ರಶಸ್ತಿ ಪುರಸ್ಕೃತ ಡಾ॥ ಕಾಪಸೆ ಅವರನ್ನು 'ಹೊಸತು' ಮತ್ತು 'ನವಕರ್ನಾಟಕ' ಬಳಗ ಹಾರ್ದಿಕವಾಗಿ ಅಭಿನಂದಿಸುತ್ತದೆ.

ಚೌತಿ ಚಂದ್ರ ಎಷ್ಟು ಪ್ರಕಾಶಮಾನವಾಗಿರುತ್ತಾನೆಂದರೆ, ಎಷ್ಟೇ ತಪ್ಪಿಸಿಕೊಳ್ಳಬೇಕೆಂದರೂ ಕಣ್ಣಿಗೆ ಬೀಳುತ್ತಾನೆ. ಶ್ರೀಕೃಷ್ಣ ಪರಮಾತ್ಮ ನಂಥವನಿಗೇ ಹಾಲಿನ ಬಟ್ಟಲಲ್ಲಾದರೂ ಕಣ್ಣಿಗೆ ಬಿದ್ದು, ಅಪವಾದ ಭಯದಿಂದ ಬಳಲಿಸಿದವನು ಚೌತಿ ಚಂದ್ರ. ಇಷ್ಟು ಪ್ರಕಾಶಮಾನ, ಆಕರ್ಷಕ ಚಂದ್ರನನ್ನು ವರ್ಷದ ಒಂದು ದಿನವಾದರೂ ಜನ ನೋಡದಂತಹ ಸಂಯಮ ಬೆಳೆಸಿಕೊಳ್ಳಲಿ ಎಂದು ಹಿರಿಯರು ಈ ನಿಯಮ ರೂಪಿಸಿರಬಹುದು. ಮನಸ್ಸಿಗೂ ಮನದ ಕಾಮನೆಗಳಿಗೂ ಚಂದ್ರನಿಗೂ ಗಾಢ ಸಂಬಂಧವಿದೆ ಅಂತ ಜ್ಯೋತಿಷಿಗಳು ನಂಬುತ್ತಾರಲ್ಲ !

# ಚೌತಿ ಚಂದ್ರ – ಬಿದಿಗೆ ಇಂದ್ರ

ಅಂದು ಯುಗಾದಿ. ಹಬ್ಬದ ಸಿಹಿಯೂಟಕ್ಕೆ ಮೊದಲು ಅದೆಷ್ಟೋ ಕೆಲಸಗಳು ಆಗಬೇಕಿವೆ. ಬಾಗಿಲಿಗೆ ಯಜಮಾನರು, ಮಕ್ಕಳು ಸೇರಿ ಮಾವಿನ ಚಿಗುರೆಲೆ – ಬೇವಿನ ಹೂವು–ಎಲೆ ಸೇರಿಸಿ ಚೆಂದದ ತೋರಣ ಮಾಡಿದ್ದಾರೆ. ಈ ಹಸಿರೆಲೆಯ ತೋರಣ ನೋಡುತ್ತಿದ್ದಂತೆ ಮನಸ್ಸಿಗೆ ಮುದ, ಎಲ್ಲವೂ ಶುಭವೆಂಬ ಭಾವ. ಎಲ್ಲರೂ ಸ್ನಾನ ಮುಗಿಸಿ ಹೊಸ ಬಟ್ಟೆ ಧರಿಸಿದ್ದೇವೆ. ದೇವರ ಪೂಜೆಗೆ ಅಣಿಯಾಗಿದೆ.



ಹುಚ್ಚು ಮನಸ್ಸು ! ಎಷ್ಟು ಬೇಗ ಬಾಲ್ಯದ ಯುಗಾದಿ ಹಬ್ಬದ ಸಂಭ್ರಮ ಸಿಹಿ ನೆನಪಿನಲ್ಲಿ ಮುಳುಗಿಬಿಟ್ಟಿದೆ ! ೫೦ ವರ್ಷಗಳ ಹಿಂದೆ "ನಂಗೆ ಹೊಚಾ ಅಂಗಿ, ನಂಗೆ ಹೊಚಾ ಅಂಗಿ" ಅಂತ ಮುದ್ದು ಮುದ್ದಾಗಿ ತೊದಲುವ ಪುಟ್ಟ ತಮ್ಮನ ಜೊತೆ ಅಣ್ಣ–ಅಕ್ಕ–ನಾನು ಹೊಸ ಬಟ್ಟೆಗಾಗಿ ಗಲಾಟೆ ಮಾಡುತ್ತಿದ್ದುದು ನೆನಪಾಗುತ್ತದೆ. ಮನಸ್ಸಿಗೆ ಬಂದಾಗ ಹೊಸ ಬಟ್ಟೆ ಕೊಳ್ಳುವ ಈಗಿನ ಪರಿಸ್ಥಿತಿಗೂ ಹಬ್ಬದಲ್ಲಿ ಮಾತ್ರ ಹೊಸ ಬಟ್ಟೆ ಸಿಗುತ್ತಿದ್ದ ಬಾಲ್ಯದ ದಿನಗಳಿಗೂ ಇರುವ ವ್ಯತ್ಯಾಸ, ಹೋಲಿಕೆಗಳು ನೆನಪಾಗುತ್ತವೆ.

ಅದೋ, ಅಜ್ಜ ಸ್ನಾನ ಮಾಡಿ ಕೆಂಪು ಮಡಿ ಉಟ್ಟಾಗಿದೆ. ಈಗ ದೇವರ ಪೂಜೆ ಪ್ರಾರಂಭ. ಹೂವಳ್ಳಿಯ ಐವತ್ತು ವರ್ಷದ ಹಿಂದಿನ ಪೂಜೆಯ ಪ್ರತಿ ವಿವರಗಳೂ ಎಷ್ಟು ಸ್ಪಷ್ಟವಾಗಿ ಕಣ್ಣ ಮುಂದೆ ಬರುತ್ತಿವೆ ಗೊತ್ತಾ ? ದೇವರ ನೈವೇದ್ಯಕ್ಕೆ ಕೇಸರಿಭಾತ್, ಚಿತ್ರಾನ್ನ ... ಮುಂತಾಗಿ ಅದರ ಜೊತೆಗೆ ಬೆಳ್ಳಿಯ ದೊನ್ನೆಯಲ್ಲಿ "ಗುಳಿಗೆಗಳು !". ದೊನ್ನೆ ಬಾಳೆಎಲೆಯಿಂದ ಮಾಡುತ್ತಾರಲ್ಲವೆ ? ಅಜ್ಜನ ಬಳಿ ಮುತ್ತಜ್ಜನ ಕಾಲದ ೨ ಬೆಳ್ಳಿಯ ದೊನ್ನೆಗಳು ಇದ್ದವು. ಅದರಲ್ಲಿ ಯುಗಾದಿಯ ವಿಶೇಷದ ಗುಳಿಗೆಗಳನ್ನು ನೈವೇದ್ಯಕ್ಕೆ ಇಡಲಾಗುತ್ತಿತ್ತು. "ಏನೀ ಗುಳಿಗೆಗಳು ?" ಅಂತ ಅಚ್ಚರಿಯಾಗುತ್ತಿದೆ ಯಲ್ಲವೆ ? ಬಹಳ ಜನ ಯುಗಾದಿಯಂದು ಬೇವು–ಬೆಲ್ಲದ ಮಿಶ್ರಣವನ್ನು ಸೇವಿಸುತ್ತಾರಷ್ಟೆ ! ಅಜ್ಜನ ಮನೆಯವರು ಯಾವ ಕೆಲಸ ಮಾಡಿದರೂ ಅದಕ್ಕೊಂದು ಕಲಾತ್ಮಕ ರೂಪ ಕೊಟ್ಟೇ ಕೊಡುತ್ತಾರೆ. ಇಲ್ಲೂ ಹಾಗೆ ! ಕಹಿಬೇವಿನ ಹೂವು–ಚಿಗುರೆಲೆ, ಮೆಣಸಿನಕಾಳು, ಜೀರಿಗೆಯನ್ನು ತುಪ್ಪದಲ್ಲಿ ಹುರಿದು, ಅದಕ್ಕೆ ಬೆಲ್ಲದ ಪುಡಿ ಸೇರಿಸಿ ಚಿಕ್ಕ ಚಿಕ್ಕ ಗೋಲಗಳಂತೆ ಮಾಡುತ್ತಿದ್ದರು. ಅದನ್ನು ಬೆಳ್ಳಿ ದೊನ್ನೆಯಲ್ಲಿ ಹಾಕಿ ದೇವರ ಮುಂದೆ ಅಜ್ಜಿ ಇಡುತ್ತಿದ್ದಳು. ಈ ಗುಳಿಗೆಯ ರುಚಿ ತಿಳಿಯಲು ಆತುರಪಡಬೇಡಿ.

ಅದಕ್ಕೂ ಮೊದಲು ಯುಗಾದಿ ಸ್ಪೆಶಲ್ ಕೇಸರಿಭಾತ್, ಚಿತ್ರಾನ್ನಗಳ ಬಗೆಗೂ ನಿಮಗೆ ಹೇಳಲೇಬೇಕು. ಶಿರ್ಶಿ ಪೇಟೆಯಿಂದ ಅಜ್ಜಿ ಆರಿಸಿ ತಂದ ಪರಿಮಳದ ಸಣ್ಣಕ್ಕಿ, ಶುದ್ಧ ಕೇಸರಿ ಎಳೆಗಳ ಪುಟ್ಟ ಪೆಟ್ಟಿಗೆ, ಕಾಶ್ಮೀರದಿಂದಲೇ ಅಂಗಡಿಯವ ತರಿಸಿದ್ದಂತೆ ! ೨೦ ಎಳೆಗಳ ಪುಟ್ಟ ಪೆಟ್ಟಿಗೆಗೆ ೧೦೦ ರೂ. ೫೦ ವರ್ಷಗಳ ಹಿಂದಿನ ರೂಪಾಯಿ. ಮನೆಯಲ್ಲೇ ಕಾಯಿಸಿದ ಹೆರೆತುಪ್ಪ ಹಾಕಿ ಮಾಡಿದ ಕೇಸರಿಭಾತ್. ಧಾರಾಳವಾಗಿ ಸಕ್ಕರೆ ಹಾಕಿ ಮಾಡಿದ ಈ ಪಕ್ವಾನ್ನಕ್ಕೆ ಹಸಿ ಗೇರುಬೀಜ ಹಾಕಿದರೆ ಅದರ ರುಚಿಯೇ ಬೇರೆ. ಅಚ್ಚರಿಯೆಂದರೆ ಅಜ್ಜನ ಗೇರು ಬೆಟ್ಟದಲ್ಲಿ ಅದೇ ಹೊತ್ತಿಗೆ ಗೇರು ಮರಗಳು, ಹೂ – ಮಿಡಿ – ಕಾಯಿಗಳಿಂದ ತುಂಬಿರುತ್ತಿದ್ದವು. ಇನ್ನೂ ಹಣ್ಣಾಗದ ಗೇರುಬೀಜ, ಅದರ ಹೊರ ಕವಚ ಇನ್ನೂ ಮೃದು – ಹಸಿರಾಗಿರುತ್ತಿತ್ತು. ಅಮ್ಮ ಅಂಗಳದಲ್ಲಿ ಮೆಟ್ಟುಗತ್ತಿ ಹಾಕಿ ಕುಳಿತು ಹಸೀ ಗೇರುಬೀಜವನ್ನು ಸೀಳಿ ಹಾಕಿದರೆ ಹಿಡಿ (ಪೊರಕೆ)ಕಡ್ಡಿಯಿಂದ ಕವಚದಿಂದ ಬೀಜವನ್ನು ಬೇರ್ಪಡಿಸುವ ಕೆಲಸ ಮಕ್ಕಳದು. ಕೊಬ್ಬರಿ ಎಣ್ಣೆ ಕೈಗೆ ಸವರಿಕೊಳ್ಳದೆ ಬೀಜ ಮುಟ್ಟಿದರೆ ಕೈ ಚರ್ಮವೆಲ್ಲ ಸುಟ್ಟು, ಮರುದಿನ ಹಳೇ ಚರ್ಮ ಕಪ್ಪಾಗಿ ಸುಲಿದು ಹೋಗಿ ಹೊಸ ಚರ್ಮ ಬರತೊಡಗುತ್ತದೆ. ಈ ಹಸೀ ಬೀಜವನ್ನು ಚೆನ್ನಾಗಿ ತೊಳೆದು ಕೇಸರಿಭಾತ್‌ಗೆ ಸೇರಿಸಿದರೆ ಆಯ್ತು.

ಈ ಕೇಸರಿಭಾತ್ ಜೊತೆಗೆ ಚಿತ್ರಾನ್ನವಿರಲೇಬೇಕು. ಹೇಗೂ ಅಜ್ಜನ ಮೂಲೆಮನೆ ತೋಟದಲ್ಲಿ ಹಲವಾರು ಲಿಂಬೆಹಣ್ಣಿನ ಗಿಡಗಳಿದ್ದವು. ಮುಕ್ರಿ ಆಳು ಕಾಳನನ್ನು ಕರೆದು ಮೂಲೆ ತೋಟದಿಂದ ಲಿಂಬೆಹಣ್ಣುಗಳನ್ನು ಮತ್ತು ಒಗ್ಗರಣೆ ಸೊಪ್ಪು ತರುವಂತೆ ಒತ್ತಿ–ಒತ್ತಿ ಹೇಳುತ್ತಿದ್ದರು. ಯಾಕೆ ಗೊತ್ತಾ ? ಈ ಕಾಳ ಸ್ವಲ್ಪ ಮುಗ್ಧ, ಸ್ವಲ್ಪ ಮೂರ್ಖ. ಒಮ್ಮೆ ಕರಿಬೇವು ತಾ ಅಂದಾಗ ಬೆಟ್ಟ ಎಲ್ಲಾ ಅಲೆದು ಬೇವಿನ ಮರವೇರಿ, ಬೇವಿನೆಲೆಗಳ ರಾಶಿ ತಂದಿದ್ದ. ಇನ್ನೊಮ್ಮೆ ಕಹಿಬೇವು

**ವಿಜಯಾ ಶ್ರೀಧರ್**

ಬೇಕು ಅಂದಾಗ ತೋಟಕ್ಕೆ ಹೋಗಿ ಕರಿಬೇವಿನ ಎಸಳು ನಾಲ್ಕಾರು ತಂದಿದ್ದ. ಆಮೇಲಿಂದ ಅಜ್ಜಿ ಒಗ್ಗರಣೆ ಸೊಪ್ಪು ಅಂತ ಕರಿಬೇವಿಗೆ ಹೇಳಿ ಅವನ ಗೊಂದಲ ನಿವಾರಿಸಿದ್ದಳು.

ಯುಗಾದಿ ಹಬ್ಬದಂದು ಮಾತ್ರ ಕರಿಬೇವು – ಕಹಿಬೇವು ಬೇಕೇ ಬೇಕಾಗುತ್ತಿತ್ತು. ಅಜ್ಜಿ–ಅಮ್ಮ ಅಡಿಗೆ ತಯಾರು ಮಾಡಿದ ಮೇಲೆ ಅಜ್ಜ ಇನ್ನೊಮ್ಮೆ ಸ್ನಾನ ಮಾಡಿ ಕೆಂಪು ಮಡಿ ಉಟ್ಟು ದೇವರ ಪೂಜೆ ಪ್ರಾರಂಭ ಮಾಡುತ್ತಿದ್ದ. ಪೂಜೆ ನಂತರ ತೀರ್ಥ – ಹೂ ಕೊಡುತ್ತಿದ್ದ. ಹಿರಿಯರಿಗೆ ನಮಸ್ಕರಿಸಿದ ನಂತರ ಎಲ್ಲರಿಗೂ ಒಂದೊಂದು 'ಗುಳಿಗೆ' ಸಿಗುತ್ತಿತ್ತು. ಕಹಿ–ಸಿಹಿ–ಖಾರದ ಈ ಪುಟಾಣಿ ಉಂಡೆಗಳು ಒಂಥರಾ ರುಚಿಯಾಗಿರುತ್ತಿದ್ದವು.

ಕೆಲವರಿಗೆ ಕಹಿ, ಕೆಲವರಿಗೆ ಸಿಹಿ, ಕೆಲವೊಮ್ಮೆ ಖಾರ ಜಾಸ್ತಿಯಾಗಿರುತ್ತಿತ್ತು. ಜೀವನವೇ ಹಾಗಲ್ಲವೇ ? ನೋವು–ನಲಿವು ಎಲ್ಲರಿಗೂ ಇದ್ದದ್ದೇ ! ಪ್ರಮಾಣದಲ್ಲಿ ಹೆಚ್ಚು–ಕಡಿಮೆ, ಅಷ್ಟೆ !! ಯುಗಾದಿಯಂದು ನಮಗೆ ಸಿಕ್ಕ ಗುಳಿಗೆ ಸಿಹಿಯಿದ್ದರೆ ೬ ವರ್ಷ ಸುಖ, ಕಹಿಯಾಗಿದ್ದರೆ ದುಃಖ ಹೆಚ್ಚು, ಖಾರವಿದ್ದರೆ...? ಬಾರದ ಅನುಭವ, ಅಂದರೆ ಸಿಹಿ–ಕಹಿ ಅಲ್ಲದ ವಿಶಿಷ್ಟ ಅನುಭವಗಳು ಜಾಸ್ತಿ ಅಂತ ನಿರ್ಧರಿಸುತ್ತಿದ್ದೆವು. ಉಪ್ಪು ಸರಳವಾದ ಭವಿಷ್ಯ ತಿಳಿಯುವ ಉಪಾಯ ಅಲ್ಲವೆ ? ಎಲ್ಲಾ ಹುಡುಗಾಟಿಕೆ !!




ಮಧ್ಯಾಹ್ನ ಸಿಹಿಯೂಟ ಮಾಡಿ ಅಜ್ಜನ ಮನೆಯ ದೊಡ್ಡ ಒಳದಲ್ಲಿ ಎಲ್ಲರೂ ಸಾಲಾಗಿ ಮಲಗಿ ಅಜ್ಜಿಯ ಅನುಭವಗಳನ್ನು ಕೇಳುವುದೇ ಒಂದು ಸೊಗಸು. ಅಜ್ಜಿ ಈ ಸಂಸಾರಕ್ಕೆ ಮೊದಲ ಸೊಸೆಯಾಗಿ ಬಂದಾಗ ಕೇವಲ ೧೩ ವರ್ಷ. ಹತ್ತಾರು ಜನರ ಕುಟುಂಬಕ್ಕೆ ಯುಗಾದಿ ಹಬ್ಬದಂದು ಬೆಳಿಗ್ಗೆ ಅತ್ತೆಯ ಜೊತೆಗೆ ನೂರಾರು ಚಪಾತಿ ಮಾಡಬೇಕಿತ್ತು. ಮಾಡಿ–ಮಾಡಿ ಕೈ ಸೋತ ಅತ್ತೆ ಸ್ವಲ್ಪ ಹೊತ್ತು ಎದ್ದು ಹೋದಾಗ, ಅಜ್ಜಿ, ಹಿಟ್ಟಿನ ಮುದ್ದೆಗಳನ್ನು ಕಿಟಕಿಯಿಂದ ಹೊರಗೆ ಎಸೆದು ಬಿಡುತ್ತಿದ್ದಳಂತೆ. ಅಲ್ಲೇ ಅಡ್ಡಾಡುತ್ತಿದ್ದ ಹಸುಗಳು ಅವನ್ನು ತಿಂದುಬಿಡುತ್ತಿದ್ದವಂತೆ. ಆದರೆ ಎಲ್ಲರಿಗೂ ಚಪಾತಿಗಳು ಸಿಗುತ್ತಿದ್ದವೋ ಇಲ್ಲವೋ ? ಅರವತ್ತು ವರ್ಷದ ಅಜ್ಜಿ ತನ್ನ ಹದಿನಾರರ ಕತೆ ಹೇಳುತ್ತಿದ್ದರೆ ನಮಗೆ ನಗು–ಅಳು ಎರಡೂ ಬರುತ್ತಿತ್ತು.

ಸಂಜೆ ವೇಳೆ ಮತ್ತೆ ಹೊಸ ಉಡುಪು ಧರಿಸಿ ಅಲಂಕರಿಸಿಕೊಂಡು ದೇವಸ್ಥಾನಕ್ಕೆ ಹೋಗುವ ಸಂಭ್ರಮ. ಅಲ್ಲಿ ಜೋಯಿಸರಿಂದ ಯುಗಾದಿ ಭವಿಷ್ಯ ಕೇಳಿಕೊಂಡು ಬೀದಿಗೆ ಬಂದರೆ ಅಲ್ಲಿ ಇನ್ನೊಂದು ಮೋಜು. ಅಂದೇ ಬಿದಿಗೆ ಬಂದರೆ ಚಂದ್ರನನ್ನು ಹುಡುಕುವ ಆಟ. ಮರುದಿನ ಬಿದಿಗೆ ಬಂದರೆ ಆ ದಿನ ಚಂದ್ರನಿಗಾಗಿ ಹುಡುಕಾಟ. ಬಿದಿಗೆ ದಿನ ಮೂರು ಸಂಜೆಯ ವೇಳೆ ಎಲ್ಲರ ಮೊಗ ಗಗನದತ್ತ. ಎಲ್ಲರೂ ಹೊಸ ಬಟ್ಟೆ ಧರಿಸಿ, ಹೂ ಮುಡಿದು (ಗಂಡಸರೂ ಜುಟ್ಟು ಬಿಟ್ಟು, ಪರಿಮಳದ ಮಲ್ಲಿಗೆ ದಂಡೆ ಮುಡಿಯುವ ಪರಿಪಾಠ ಒಂದು ಕಾಲದಲ್ಲಿ ಇತ್ತು !) ಎಲ್ಲರೂ ಬಿದಿಗೆ ಚಂದ್ರನನ್ನು ಹುಡುಕಲು ಆತುರ ಪಡುವವರೇ !

ಈ ದೃಶ್ಯ ಯುಗಾದಿ ಹಬ್ಬದ ಸಂದರ್ಭದಲ್ಲಿ ನೋಡುವಾಗ ಥಟ್ಟನೆ ಗಣೇಶ ಚತುರ್ಥಿಯ ಸಂಜೆ ಗಣೇಶ ದರ್ಶನಕ್ಕೆ ಹೊರಟಾಗಿನ ದೃಶ್ಯ ಕಣ್ಣ ಮುಂದೆ ಬಂದು ಬಿಡುತ್ತದೆ. ಆ ದಿನ ಎಲ್ಲರೂ ಚೌತಿ ಚಂದ್ರ ಎಲ್ಲಿ ಕಣ್ಣಿಗೆ ಬಿದ್ದುಬಿಡುತ್ತಾನೋ ಎಂದು ಹೆದರಿ ತಲೆ ತಗ್ಗಿಸಿ ನಡೆಯಲು ಹರಸಾಹಸ ಮಾಡುತ್ತ ಓಡಾಡುವದೇ ಒಂದು ಮಜಾ. ಯಾವಾಗಲೂ ತಲೆ ಎತ್ತಿ, ಅಹಂಕಾರದಿಂದ ಮೆರೆಯುವ ಜನರೂ ಆ ದಿನ ತಗ್ಗಿ–ಬಗ್ಗಿ ನಡೆಯುತ್ತಾರೆ ! ಇದರ ಮಧ್ಯದಲ್ಲಿಯೇ ಕೆಲವು ಕಿಡಿಗೇಡಿಗಳು, "ಆ ಮರದಲ್ಲಿ ಹಾವು ನೋಡು, ಈ ಗಿಡದಲ್ಲಿ ಹಣ್ಣು ನೋಡು" ಎಂದು ಸುಳ್ಳು ಸುಳ್ಳೇ ಕೂಗುತ್ತಾರೆ. ಎಲ್ಲರೂ ಗಾಬರಿಯಲ್ಲಿ ತಲೆ ಎತ್ತಿ ಗಗನದಲ್ಲಿ ಹೊಳೆಯುವ ಚೌತಿ ಚಂದ್ರ ಕಣ್ಣಿಗೆ ಬಿದ್ದು, ಚಂದ್ರನನ್ನು ನೋಡಿದ ಶಾಪಕ್ಕೆ ಗುರಿಯಾಗುವ ಸಂಕಟದಿಂದ ಈ ಹುಡುಗರಿಗೆ ಹಿಡಿಶಾಪ ಹಾಕುತ್ತಿದ್ದರು.

ಚೌತಿ ಚಂದ್ರಮನನ್ನು ನೋಡದಿರುವುದಕ್ಕೆ ಇರುವ ಅಪವಾದದ ಭಯ ಭೀತಿಯ ಗಣೇಶ ಶಾಪದ ಕತೆ ಎಲ್ಲರಿಗೂ ತಿಳಿದದ್ದೇ ! ಆದರೆ ಬಿದಿಗೆ ಚಂದ್ರಮ, ಆತನೇ ಈ ದಿನದ ಮಟ್ಟಿಗೆ 'ಇಂದ್ರ' ನನ್ನು ನೋಡಲೇಬೇಕಾದ ನಂಬಿಕೆಯ ಹಿಂದಿನ ಕತೆ ಏನು ? ಪೌರಾಣಿಕ ಹಿನ್ನೆಲೆ ನಾನರಿಯೆ ! ಆದರೆ ಜೀವನ ಕಲಿಸಿದ ಅನುಭವದ ಪಾಠದಿಂದ ನಾನು ಈ ಆಚರಣೆಗೆ ಅರ್ಥ ಕಲ್ಪಿಸಿಕೊಂಡಿದ್ದೇನೆ.

ಒಂದು ಚೌತಿಯಂದು ತನ್ನ ಅರಮನೆಯ ಉದ್ಯಾನವನದಲ್ಲಿ ಶ್ರೀಕೃಷ್ಣ ವಿಹರಿಸುತ್ತಿದ್ದ. ಏನೋ ರಾಜಕಾರ್ಯದ ಭಾರ ತಲೆ ಮೇಲೆ ಕುಳಿತಿತ್ತು. ಮಡದಿ ರುಕ್ಮಿಣಿ ಹಾಲು ತುಂಬಿದ ಬೆಳ್ಳಿ ಬಟ್ಟಲು ತಂದು ಶ್ರೀಕೃಷ್ಣನಿಗೆ ನೀಡಿದಳು. ನೀಲ ಗಗನದಲ್ಲಿ ತೇಲುತ್ತಿದ್ದ ಚೌತಿ ಚಂದ್ರನ ಬಿಂಬ ಹಾಲಿನ ಬಟ್ಟಲಲ್ಲಿ ಕಾಣಿಸಿತು. ಕೃಷ್ಣ ಬೆದರಿದ, ರುಕ್ಮಿಣಿ ಬೆದರಿದಳು. ಏನೋ ಅಪವಾದ ಕಟ್ಟಿಟ್ಟ ಬುತ್ತಿ ಎಂದು ಇಬ್ಬರಿಗೂ ಅರ್ಥವಾಗಿತ್ತು. ಮುಂದೆ ನಡೆದ ಶ್ಯಮಂತಕ ಮಣಿಯ ಕತೆ ಗೊತ್ತು ತಾನೆ ? ಕೃಷ್ಣನೇ ಕಳ್ಳ ಎಂಬ ಅಪವಾದ ಬಂತು. ಆದರೆ ಕೃಷ್ಣ ಧೀರ. ಶ್ಯಮಂತಕ ಮಣಿ, ಅದರ ಒಡೆಯ ಸತ್ರಾಜಿತನಿಗೇ ಸಿಗುವಂತೆ ಹೋರಾಡಿ, ಸತ್ಯಭಾಮೆಯನ್ನು ಮಡದಿಯಾಗಿ ಪಡೆದ. ಜೊತೆಗೆ ಶ್ಯಮಂತಕಮಣಿಯೂ ಉಡುಗೊರೆ ರೂಪದಲ್ಲಿ ದೊರೆಯಿತು. ಬಹುಶಃ ಇದಕ್ಕೆಲ್ಲ ೬–೮ ತಿಂಗಳುಗಳೇ ಬೇಕಾಗಿರಬಹುದು. ಅಷ್ಟರಲ್ಲಿ ಯುಗಾದಿ ಹಬ್ಬ ಬಂದಿರಬಹುದು. ಮಡದಿಯರೊಡನೆ ಬಿದಿಗೆ ಚಂದ್ರನನ್ನು ನೋಡಿ ನಲಿದಿರಬಹುದು, ಈಗ ಅಪವಾದದ ಗ್ರಹಣ ಕಳೆದು ನೆಮ್ಮದಿಯ ನಗೆ ನಕ್ಕಿರಬಹುದು, ಅಲ್ಲವೇ ?

ಚೌತಿ ಚಂದ್ರ ಎಷ್ಟು ಪ್ರಕಾಶಮಾನವಾಗಿರುತ್ತಾನೆಂದರೆ, ಎಷ್ಟೇ ತಪ್ಪಿಸಿಕೊಳ್ಳ ಬೇಕೆಂದರೂ ಕಣ್ಣಿಗೆ ಬೀಳುತ್ತಾನೆ. ಶ್ರೀಕೃಷ್ಣ ಪರಮಾತ್ಮನಂಥವನಿಗೇ ಹಾಲಿನ ಬಟ್ಟಲಲ್ಲಾದರೂ ಕಣ್ಣಿಗೆ ಬಿದ್ದು, ಅಪವಾದ ಭಯದಿಂದ ಬಳಲಿಸಿದವನು ಚೌತಿ ಚಂದ್ರ. ಇಷ್ಟು ಪ್ರಕಾಶಮಾನ, ಆಕರ್ಷಕ ಚಂದ್ರನನ್ನು ವರ್ಷದ ಒಂದು ದಿನವಾದರೂ ಜನ ನೋಡದಂತಹ ಸಂಯಮ ಬೆಳೆಸಿಕೊಳ್ಳಲಿ ಎಂದು ಹಿರಿಯರು ಈ ನಿಯಮ ರೂಪಿಸಿರಬಹುದು. ಮನಸ್ಸಿಗೂ ಮನದ ಕಾಮನೆಗಳಿಗೂ ಚಂದ್ರನಿಗೂ ಗಾಢ ಸಂಬಂಧವಿದೆ ಅಂತ ಜ್ಯೋತಿಷಿಗಳು ನಂಬುತ್ತಾರಲ್ಲ !

ಬಿದಿಗೆ ಚಂದ್ರನನ್ನು ಹುಡುಕುವುದು ಅಷ್ಟು ಸುಲಭವಲ್ಲ. ಅದರಲ್ಲೂ ಮೋಡ ಗಳಿದ್ದರಂತೂ ಕೇಳುವುದೇ ಬೇಡ. ಆದರೂ ಭಾವುಕ ಜನ ಕಣ್ಣು – ಮನಸ್ಸು – ಬುದ್ಧಿ ಯನ್ನು ಸೂಕ್ಷ್ಮಗೊಳಿಸಿಕೊಂಡು ಗಗನದಲ್ಲಿ ಮೂಡುತ್ತಿರುವ ರೇಖೆಯಂತಹ ಬಿದಿಗೆ ಚಂದ್ರನನ್ನು ಗುರುತಿಸುತ್ತಾರೆ. ಪರಸ್ಪರರಿಗೆ ತೋರಿಸುತ್ತ ನಿಧಿ ಸಿಕ್ಕಂತೆ ಸಂಭ್ರಮಿಸುತ್ತಾರೆ. ಚೌತಿ ಚಂದ್ರನನ್ನು ಕಂಡ ಅಪವಾದ ಬಿದಿಗೆ ಚಂದ್ರನನ್ನು ನೋಡಿ ಪರಿಹಾರವಾಯ್ತು ಅಂದುಕೊಳ್ಳುತ್ತಾರೆ. "ಬಿದಿಗೆ ಚಂದ್ರ ಬಂದ ನೋಡು, ದೀಪ ಹಚ್ಚಿದಂತೆ ಜೋಡು" ಎಂದು ಅಂಬಿಕಾತನಯದತ್ತ ವಾಣಿ ಎಷ್ಟು ಔಚಿತ್ಯಪೂರ್ಣವೆಂದು ಅಚ್ಚರಿಪಡುತ್ತಾರೆ.

ಯುಗಾದಿಗೂ ಕೋಗಿಲೆಗಳಿಗೂ ಅದೇನು ನಂಟೋ, ನಿಸರ್ಗವೇ ಹೇಳಬೇಕು. ವರ್ಷವಿಡೀ ಎಲ್ಲೋ ಅಡಗಿದ ಕೋಗಿಲೆಯ ಇನಿದನಿ, ಮುಂಜಾವಿನ ಸಕ್ಕರೆಯ ನಿದ್ರೆಗೆ ಜೋಗುಳ ಹಾಡಿದಂತೆ ಕಿವಿಗೆ ಬಿದ್ದರೆ, ಓಹ್ ! ಇನ್ನು ಯುಗಾದಿ ಬಂತು ಎಂದು ತಾನೇ ಅರ್ಥ. ಯುಗಾದಿ ಬಂತು, ಇನ್ನು ಚೈತ್ರಕಾಲ, ವಸಂತದ ಹಬ್ಬ ಅಂತ ಕೋಗಿಲೆಗಳು ಹಾಡುತ್ತವೆಯೋ ? ಅಥವಾ ಕೋಗಿಲೆಯ ಹಾಡಿಗೆ ನಿದ್ರಿಸುತ್ತಿರುವ ನಿಸರ್ಗ ದೇವಿಗೆ ಎಚ್ಚರವಾಗುತ್ತದೋ ? ಬಲ್ಲವರಾರು ?

ಯುಗಾದಿ ಅಂದ ಕೂಡಲೇ ಇದೆಲ್ಲ ನೆನಪಾಗಿ ಬಿಡುತ್ತದೆ. ಯುಗಾದಿಯಂದು ಸಿಹಿ–ಕಹಿಗಳ ಮಿಶ್ರಣ ತಿನ್ನಬೇಕೆಂಬ ನಿಯಮ ಮಾಡಿದ ಹಿರಿಯರ ಬುದ್ಧಿವಂತಿಕೆಗೆ ತಲೆ ಬಾಗುತ್ತದೆ. ನಮ್ಮ ಎಲ್ಲ ಹಬ್ಬಗಳಲ್ಲಿ, ಉಳಿದ ಧರ್ಮಗಳ ಹಬ್ಬಗಳಲ್ಲೂ ಕೂಡ ಸಿಹಿ ಪದಾರ್ಥವೇ ವಿಶೇಷ. ಆದರೆ ಯುಗಾದಿಯಲ್ಲಿ ಮಾತ್ರ ಕಹಿಬೇವು, ಸಿಹಿಬೆಲ್ಲದ ಮಿಶ್ರಣವೇ ಪ್ರಧಾನ. ನೋವು–ನಲಿವು, ಕತ್ತಲು–ಬೆಳಕು, ಉನ್ನತಿ–ಅವನತಿ ಇವೆಲ್ಲ ಜೀವನದಲ್ಲಿ ಹಾಸುಹೊಕ್ಕಾಗಿವೆ. ಅದನ್ನು ಅರ್ಥ ಮಾಡಿಕೊಳ್ಳಲು, ಸಮಭಾವದಿಂದ ಸ್ವೀಕರಿಸಲು ಇದೊಂದು ವರ್ಷದ ಆದಿಯ ಹಬ್ಬ. ನವ–ನವೋನ್ಮೇಷಶಾಲಿ ಪ್ರಕೃತಿಯಂತೆ ನಮಗೂ ಪ್ರತಿ ಯುಗಾದಿಗೆ ಹೊಸ ಜನ್ಮ, ಹೊಸ ಬಾಲ್ಯ, ಹೊಸ ಹರೆಯ, (ಹೊಸ ಅರಿವು !) ಬರಲಿ ಎಂದು ವರಕವಿ ಬೇಂದ್ರೆಯವರಂತೆ ನಾವು ಬಯಸೋಣ !!

ವಿಜಯಾ ಶ್ರೀಧರ್
ಕೇರಾಫ್ : ಡಾ॥ ಕೆ. ಆರ್. ಶ್ರೀಧರ್, ೧ನೇ ಮುಖ್ಯರಸ್ತೆ, ರಾಜೇಂದ್ರನಗರ, ಶಿವಮೊಗ್ಗ–೫೭೭ ೨೦೧

# ಕಮರದಿರಲಿ ಕಾರ್ಮಿಕರ ಕರುಳ ಕೂಸ ಕನಸುಗಳು

ಕಳಕೇಶ ಡಿ. ಗುಡ್ಲಾನೂರ

ಎತ್ತ ನೋಡಿದರೂ ಮುಗಿಲೆತ್ತರದ ರೈಸ್‌ಮಿಲ್‌ಗಳು, ಹಸಿರು ಸೀರೆ ಸಿಂಗರಿಸಿಕೊಂಡ ನೆಲದವ್ವ, ಹೆಬ್ಬಾವಿನಂತೆ ಮಲಗಿರುವ ರಾಜ್ಯ ಹೆದ್ದಾರಿಯ ಮೇಲೆ ಭತ್ತದ ಕಣಜಕ್ಕೆ ಕನ್ನಹಾಕಿ ಕದ್ದೊಯ್ಯುತ್ತಿರುವ ಲಾರಿಗಳು... ಹೀಗೆ ಸದಾ ಸದ್ದುಗದ್ದಲವಿರುವ ಕೊಪ್ಪಳ ಜಿಲ್ಲೆಯ ಕಾರಟಗಿ. ಇದು ಕೇವಲ ಅನ್ನದ ಬಟ್ಟಲಲ್ಲ, ಲಕ್ಷ್ಮೀಸುತರ ತೂಗುತೊಟ್ಟಿಲೂ ಹೌದು! ಈ ಊರಿನ ಆಸುಪಾಸು ರಟ್ಟೆಯನ್ನೇ ನಂಬಿಕೊಂಡು ಬಿಸಿಲ ತೊಟ್ಟಿಲಲ್ಲಿ ಕಸು ಕಳೆದುಕೊಂಡು ಹಸಿವಿನಿಂದ ಬದುಕಿನ ಬಂಡಿ ಎಳೆಯುತ್ತಿರುವ ರೈಸ್ ಮಿಲ್ ಕೂಲಿಕಾರ್ಮಿಕರ ಕರುಳ ಕೂಸುಗಳ ಕಾರುಣ್ಯದ ಕಥೆ ; ವ್ಯಥೆ ಹೊಸದೊಂದು ವಿಸ್ಮಯಲೋಕವನ್ನೇ ತೆರೆದಿಡುತ್ತದೆ.

ವಿದೇಶಿ ಸಂಸ್ಕೃತಿಗೆ ಮಾರುಹೋಗಿ ಶಿಕ್ಷಣವನ್ನೂ 'ವ್ಯಾಪಾರ'ವಾಗಿಸಿಕೊಂಡ ಬಂಡವಳಿಗ ಭರಾಟೆಯಲ್ಲಿರುವ ಆಧುನಿಕ ಕಾಲಘಟ್ಟದಲ್ಲಿ ಶಾಲೆಗಳೆಂದರೆ, ಪಕ್ಕನೆ ಕಣ್ಮುಂದೆ ಬರುವ ಚಿತ್ರಣ... ಕಣ್ಣು ಕುಕ್ಕುವಂತಹ ಬಣ್ಣಬಣ್ಣದ ಸಮವಸ್ತ್ರಗಳು, ಕಾಲಿಗೆ ಕಪ್ಪನೆ ಶೂಗಳು, ಹೊಟ್ಟೆಯನ್ನೆ ಹಿಸುಕುವಂಥ ಬೆಲ್ಟ್‌ಗಳು, ಕುತ್ತಿಗೆಯಲ್ಲಿ ಬಿಗಿದಿರುವ ಟೈ ಎಂಬ ಉರುಲು, ಇಷ್ಟಲ್ಲದೆ ಹೆಗಲ ಮೇಲೆ ಹೆಣಭಾರದ ಪುಸ್ತಕದ ದೊಡ್ಡ ಚೀಲ, ಭಾರವಾದ ವಾಟರ್ ಬಾಟಲ್, ಊಟದ ಕ್ಯಾರಿಯರ್ ಇತ್ಯಾದಿ ಇತ್ಯಾದಿ... ನೋಡಲು ಸಾಲದು ಎರಡು ಕಣ್ಣುಗಳು.

ಹರಿದ ಗೋಣಿಚೀಲ ಅಥವಾ ಪ್ಲಾಸ್ಟಿಕ್ ಚೀಲದಲ್ಲಿ ತುಂಬಿಕೊಂಡ ಪಾಟಿಗಂಟನ್ನು ಹೆಗಲಿಗೇರಿಸಿಕೊಂಡು ಶಾಲೆಗೆ ಹಾಜರಾಗಿ ಆಟ-ಪಾಠಗಳನ್ನು ಚಟುವಟಿಕೆಯಿಂದ ಕಲಿಯುವುದರೊಂದಿಗೆ ಇಂಗ್ಲಿಷ್ ಪದಗಳನ್ನು ಹೇಳುವುದರಲ್ಲಿ ಕಾನ್ವೆಂಟ್ ಕಂದಗಳಿಗೆ ಸವಾಲ್ ಎಸೆಯುತ್ತಾರೆ ! ಪ್ರತಿಭಾ ಕಾರಂಜಿಯ ಕ್ವಿಜ್ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ 'ಹುಲುಗ' ಎಂಬ ಹುಡುಗ ಒಂದು ಕೈಯಲ್ಲಿ ಬಹುಮಾನ ಹಿಡಿದು ಮತ್ತೊಂದು ಕೈಯಲ್ಲಿ ಕುಂಡಿ ಕಾಣಬಾರದೆಂಬ ಕಾರಣಕ್ಕಾಗಿ ಹರಿದ ಚಡ್ಡಿಯನ್ನು ಮತ್ತೊಂದು ಕೈಯಿಂದ ಮುಚ್ಚಿಕೊಂಡು ಬಹುಮಾನ ಸ್ವೀಕರಿಸುವಾಗ ಅಲ್ಲಿದ್ದ ಘಟಾನುಘಟಿಗಳೆಲ್ಲಾ ಈತನನ್ನು ಆಸೆಗಣ್ಣಿನಿಂದ ನೋಡುತ್ತಿದ್ದರೆ ಇನ್ನೂ ಕೆಲವರ ಕಣ್ಣಾಲಿಗಳು ತುಂಬಿಕೊಂಡಿದ್ದವು. ವಾರಪೂರ್ತಿ ಅರ್ಧಹೊಟ್ಟೆ ತಂಗಳನ್ನ ಉಂಡರೂ... ''ಸಾರ್ ಇವತ್ತು ನಮ್ ಮನೀಗೆ ಊಟಕ್ಕ ಬರ್ರೀ...'' ಎಂದು ಬುಧವಾರದ ಬಾಡೂಟಕ್ಕೆ ಶಿಕ್ಷಕರನ್ನು ಆಹ್ವಾನಿಸುವ ಈ ಮಕ್ಕಳ ಜೀವನಪ್ರೀತಿ ದೊಡ್ಡದು. ಅದಕ್ಕೊಂದು ಸಲಾಮು !



ಹಳದಿ ವಾಹನವೇರಿ 'ರೊಕ್ಕದ ಶಾಲೆ'ಗೆ ಹೊರಟ ಉಳ್ಳವರ ಮಕ್ಕಳ ಸಾಲುಸಾಲು ಒಂದು ಕಡೆಯಾದರೆ; ಮತ್ತೊಂದು ಕಡೆಗೆ ಮೈಗೆ ಸೋಪು, ತಲೆಗೂದಲಿಗೆ ಎಣ್ಣೆ ಕಾಣದ ಹತ್ತಿಕಾಳಿನಂತಹ ಬಿಸಿಯೂಟವನ್ನೇ ಮೃಷ್ಟಾನ್ನವೆಂದು ನಂಬಿದ, ಗುಂಡಿ ಇಲ್ಲದ, ಪಿನ್ ಹಾಕಿಕೊಂಡ ಅರ್ಧಂಬರ್ಧ ಹರಿದ ಒಂದೇ ಒಂದು ಜೊತೆ ಉಚಿತ ಶಾಲಾ ಸಮವಸ್ತ್ರಕ್ಕೆ ಅವ್ವನ ಸೂಜಿ ಕೈಯಿಂದ ತ್ಯಾಪಿ ಹಾಕಿಸಿಕೊಂಡು ಹ್ಯಾಪಿಯಾಗಿ ಸದಾ ಮೂಗಿನಲ್ಲಿ ಸಿಂಬಳ ಸುರಿಸುತ್ತ ಕಾರ್ಮಿಕರ ಮಕ್ಕಳಿಗಾಗಿಯೇ ತೆರೆಯಲ್ಪಟ್ಟ ಬೇವಿನಹಾಳ ಕ್ರಾಸ್‌ನ ಸರಕಾರಿ ಪ್ರಾಥಮಿಕ ಶಾಲೆಗೆ ಉರಿಬಿಸಿಲಿನಲ್ಲಿ ಬರಿಗಾಲಿನಲ್ಲಿ ಬರುವ ಪುಟ್ಟಪೋರರು ಹರಿದ ಬಟ್ಟೆಯೊಳಗೆ ನಮಗೆ ಬೆತ್ತಲೆ ದೇಹ ಕಾಣುತ್ತಿಲ್ಲ, ಬತ್ತದ ಬದುಕು ಕಾಣುತ್ತಿದೆ. ಈ ಮಕ್ಕಳ ಅಂಗಿಗೆ 'ಗುಂಡಿ' ಇರದಿರಬಹುದು ಆದರೆ ಗುಂಡಿಗೆಯೊಳಗೆ ಕನಸು, ಕಸವು, ಪ್ರತಿಭೆ ಎಲ್ಲವೂ ಇದೆ. ಗುಡಿಸಲಿನಲ್ಲಿ ಅರಳುತ್ತಿರುವ ಗುಲಾಬಿಗಳಿವು, ಚಿಮಣಿ ಬೆಳಕಿನೊಡನೆ ಬೆಂದು ಬೆಳಗುತ್ತಿರುವ ರತ್ನಗಳಿವು.

ಇನ್ನೂ ಈ ಮಕ್ಕಳ ಪಾಲಕರು ಬಡ ಕೂಲಿಕಾರ್ಮಿಕರು. ಮಿಲ್ ಮು(ಹಿ)ಂಭಾಗದ ಗುಡಿಸಲು ತಗಡಿನ ಶೆಡ್ಡುಗಳೇ ಇವರ ಪಾಲಿನ ಪ್ಯಾಲೆಸ್‌ಗಳು! ಅಕ್ಷರಲೋಕದ ಕನಸುಗಾರಿಕೆಯೂ ಸಹ ಇವರಿಗಿಲ್ಲ. ಬಹುತೇಕ ವರ್ತಮಾನದ ತಲ್ಲಣಗಳು ಅವರ ಕನಸುಗಳನ್ನು ಸುಟ್ಟಹಾಕಿರಬಹುದೇ ? ಜಗದ ಯಾವ ವಿಶ್ವವಿದ್ಯಾಲಯವೂ ಕಲಿಸಲಾಗದ ವಿದ್ಯೆಯನ್ನು ಹಸಿದ ಹೊಟ್ಟೆಯಿಂದ ಬಸಿದು ಬಂಡಾಗುತ್ತಿರುವ ಬದುಕು ಕಲಿಸುತ್ತದೆಯಲ್ಲವೆ ? ಅಕ್ಷರ ಅಭಾವದಿಂದ ಇವರಲ್ಲಿ ಮೂಢನಂಬಿಕೆ ತಾಂಡವವಾಡುತ್ತಿದೆ. ಮಿಲ್ ಮಾಲೀಕರು ಎಷ್ಟೇ ಕಡಿಮೆ





ಸಂಬಳ ಸೌಲಭ್ಯ ನೀಡಿದರೂ ಇವರು ಪ್ರಶ್ನಿಸುವ ಹಾಗಿಲ್ಲ, ಒಂದು ವೇಳೆ ಪ್ರಶ್ನಿಸಿದರೆ ಮರುದಿನವೇ ಅವರ ಕೆಲಸಕ್ಕೆ ಕತ್ತರಿ! ಹೀಗಾಗಿಯೇ ಅವರು ದನಿ ಇರದ ಧ್ವನಿಯಿಂದ 'ಧನಿ'ಯನ್ನು ಆರಾಧಿಸುತ್ತಾರೆ. ಜೊತೆಗೆ ಸಾಲ ಮಾಡಿ ಸಾರಾಯಿ ಬಾಟ್ಲಿ ತಂದ್ರೂ ಸಮಪಾಲು ಮಾಡಿಕೊಂಡು ಸವಿಯುತ್ತಾರೆ ಸ್ತ್ರೀ ಪುರುಷರು ಒಟ್ಟೊಟ್ಟಿಗೆ. ಇದಕ್ಕವರು 'ದಣಿವು ದೂರವಾಗಲು ಕುಡಿಯುತ್ತೇವೆಂಬ' ನೆಪಮುದ್ರೆ ಒತ್ತುತ್ತಾರೆ. ಇದು ಸತ್ಯವೂ ಇರಬಹುದೇ?

'ಎದ್ದೇಳಂಗೆ ಕೋ...ಡಿ ಸಾಲಿಗೆ ಹೊತ್ತಾತು ನಿಮ್ ಮಾಸ್ತಾರು ಬೈತಾರ ನೋಡು ಶಾಲಿ ತಪ್ಸಿದ್ರ' ಅಂತ ಎಚ್ಚರಿಸಿ 'ತಗೋ ರಾತ್ರಿ ಅನ್ನ-ಬ್ಯಾಳಿ ಐತಿ ಉಂಡು ವೋಗು...ನಾವು ರಾತ್ರಿ ಮಿಲ್‌ನ್ಯಾಗಿಂದ ಬರೋಮಟಾ ಅಳಬಾರ್ದು...ಜಾಣ ಅಲ್ವಾ ನನ್ ಬಂಗಾರ, ನನ್ ಚಿನ್ನ...' ಅಂತ ಮುದ್ದಿಸಿ ಗುಡಿಸಿಲಿನ ಕೀಲಿಕೈಯನ್ನು ಮಕ್ಕಳ ಕೈಗಿಟ್ಟು 'ಜ್ವಾಕಿ ಕಳಕೋ ಬ್ಯಾಡ ಕೀಲಿನ...' ಎನ್ನುತ್ತಾ ಪಾಲಕರು ಮಿಲ್ ಹಾದಿ ಹಿಡಿಯುತ್ತಿದ್ದಂತೆಯೇ ಗಂಡು ಹುಡ್ಗರು ಉಡದಾರಕ್ಕೆ, ಹೆಣ್ಣು ಹುಡ್ಗೀರು ಕೈಬಳೆಗೆ ಕೀಲಿಕೈಯನ್ನು ಗಂಟುಹಾಕಿಕೊಳ್ಳುತ್ತಾ ಹರಿದ ಗೋಣಿಚೀಲ ಅಥವಾ ಪ್ಲಾಸ್ಟಿಕ್ ಚೀಲದಲ್ಲಿ ತುಂಬಿಕೊಂಡ ಪಾಟಿಗಂಟನ್ನು ಹೆಗಲಿಗೇರಿಸಿಕೊಂಡು ಶಾಲೆಗೆ ಹಾಜರಾಗಿ ಆಟ-ಪಾಠಗಳನ್ನು ಚಟುವಟಿಕೆಯಿಂದ ಕಲಿಯುವುದರೊಂದಿಗೆ ಇಂಗ್ಲಿಷ್ ಪದಗಳನ್ನು ಹೇಳುವುದರಲ್ಲಿ ಕಾನ್ವೆಂಟ್ ಕಂದಗಳಿಗೆ ಸವಾಲ್ ಎಸೆಯುತ್ತಾರೆ! ಪ್ರತಿಭಾ ಕಾರಂಜಿಯ ಕ್ವಿಜ್ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ 'ಹುಲುಗ' ಎಂಬ ಹುಡುಗ ಒಂದು ಕೈಯಲ್ಲಿ ಬಹುಮಾನ ಹಿಡಿದು ಮತ್ತೊಂದು ಕೈಯಲ್ಲಿ ಕುಂಡಿ ಕಾಣಬಾರದೆಂಬ ಕಾರಣಕ್ಕಾಗಿ ಹರಿದ ಚಡ್ಡಿಯನ್ನು ಮತ್ತೊಂದು ಕೈಯಿಂದ ಮುಚ್ಚಿಕೊಂಡು ಬಹುಮಾನ ಸ್ವೀಕರಿಸುವಾಗ ಅಲ್ಲಿದ್ದ ಘಟಾನುಘಟಿಗಳೆಲ್ಲಾ ಈತನನ್ನು ಆಸೆಗಣ್ಣಿನಿಂದ ನೋಡುತ್ತಿದ್ದರೆ ಇನ್ನೂ ಕೆಲವರ ಕಣ್ಣಾಲಿಗಳು ತುಂಬಿಕೊಂಡಿದ್ದವು.



ಇನ್ನೂ ಕಲಿಕೆಯ ವೇಗ ನಿಧಾನಗತಿ ಇರುವ ಕೆಲವು ಮಕ್ಕಳನ್ನು, "ಯಾಕ್ರೋ, ಹೋಮ್‌ವರ್ಕ್ ಬರಕೊಂಡ ಬಂದಿಲ್ರೋ...?" ಅಂತ ಪ್ರೀತಿ ತುಂಬಿದ ಸಿಟ್ಟಿನಿಂದ ಕೇಳಿದರೆ ಆ ಮಕ್ಕಳು ಹಸಿಯಾದ ಒರತೆ ಕಣ್ಣಿಂದ, "ಕಾಪಿ ಇಲ್ಲರೀ... ಪೆನ್ ಇಲ್ಲರೀ... ಪೆನ್ನ್ ಕಟ್‌ಕಟ್ ಮೂಡತೈತಿರೀ... ನಮ್ ಮನ್ಯಾನ್ ಕರೆಂಟ್ ಕಟ್ ಮಾಡ್ಯಾರ್... ದಿಗೀಗೆ ಎಣ್ಣಿ ಇರ್ಲ್ರೀ...ನಮ್ಮ ಅಪ್ಪಗ ಮಿಲ್‌ನ್ಯಾಕ ಬುತ್ತಿಕೊಡಾಕ ಹೋಗಿದ್ದೆ. ಅದ್ಕ ಹೋಮ್‌ವರ್ಕ್ ಬರೆದಿಲ್ಲ ಸಾರ್" ಎಂದು ಮೆಲ್ಲನೆ ಗುನುಗುತ್ತಾ ಗದರಿಸಲೆಂದೇ ಹಿಡಿದುಕೊಂಡಿರುವ ಶಿಕ್ಷಕರ ಕೈಕೋಲಿಗೆ ಅವರು ತಮ್ಮ ಕೌಟುಂಬಿಕ ಸಮಸ್ಯೆಗಳ ಸರಮಾಲೆಯನ್ನು ವರ್ಗಾಯಿಸುತ್ತಾರೆ.

ಕ್ಲಾಸ್‌ವರ್ಕ್‌ಗೆ ಬೇರೆ, ಹೋಮ್‌ವರ್ಕ್‌ಗೆ ಬೇರೆ, ವಿಷಯಕ್ಕೊಂದೊಂದು 'ಪಕ್ಕಾ ಪುಸ್ತಕ' ಮಾಡುವ ಮಕ್ಕಳನ್ನು ನೀವು ನೋಡಿರಬಹುದು. ಆದರೆ ಇರುವ ಏಕೈಕ 'ನೋಟ್‌ಬುಕ್'ನ್ನು ಎಲ್ಲಾ ವಿಷಯಗಳಿಗೂ ಬಳಸುವ ಈ ಮಣ್ಣಿನ ಅಸಲಿ ಪ್ರತಿಭೆಗಳಿವು.

ಸಂದರ್ಭ ಬಂದಾಗ ಲೋಕದ ಸಮಸ್ಯೆಗಳಿಗೆಲ್ಲಾ ಟ್ಯಾಗ್ ಹಾಕುವ ಹಾಗೇ ಶಾಲೆಯ ಹೊರಗಡೆ ಉಳ್ಳವರ ಮಕ್ಕಳು ಸ್ವಲ್ಪ ಬರೆದು ಹರಿದು ಬಿಸಾಡಿದ ಖಾಲಿ ಬಿಳಿಹಾಳೆಗಳನ್ನು ಗುಜರಿಗೆಸೆಯದೆ ಚೂಪು ತಂತಿಯಿಂದ ಬಿಗಿದು ಹೊಸಹೊಸ ನೋಟುಬುಕ್ ಗಳನ್ನು ಸ್ವತಃ ತಯಾರಿಸಿಕೊಳ್ಳುವ ಇವರ ಸೃಜನಶೀಲತೆಯನ್ನು ಮೆಚ್ಚಲೇಬೇಕು. ಅಷ್ಟೇ ಅಲ್ಲ, ೮-೯ ವರ್ಷದ ಈ ಮಕ್ಕಳು ಸಂಜೆ ಮನೆ ಸೇರಿ ಕಸಮುಸರಿ, ನೀರು, ಸಮಯ ಬಂದರೆ ಒಲೆಗೆ ಬೆಂಕಿಹಾಕಿ 'ಅನ್ನ'ಕ್ಕೂ ಇಡುತ್ತಾರೆ ಅವ್ವ ಬರುವುದ ರೊಳಗಾಗಿ. ಜೊತೆಗೆ ಶಾಲೆ ಸೂಟಿ ಇದ್ದಾಗ ಬಗಲಿಗೆ ಜೋಳಿಗೆ ಹಾಕಿಕೊಂಡು ಬತ್ತ (ನೆಲ್ಲು) ಆರಿಸಲು ತೆರಳುತ್ತಾರೆ. ವ್ಹಾ...! ಇದೆಂಥ ಬದುಕಿನ ಪಾಠಗಳ ತಾಲೀಮು ಅಲ್ಲವೇ? ಇವೇ ನಮ್ಮ ಸರಕಾರಿ ಶಾಲಾ ಬಡ ಮಕ್ಕಳ ಸ್ಪೆಶ್ಯಾಲಿಟಿಗಳು.

ವಾರಪೂರ್ತಿ ಅರ್ಧಹೊಟ್ಟೆ ತಂಗಳನ್ನ ಉಂಡರೂ... "ಸಾರ್ ಇವತ್ತು ನಮ್ ಮನೀಗೆ ಊಟಕ್ಕ ಬರ್ರೀ..." ಎಂದು ಬುಧವಾರದ ಬಾಡೂಟಕ್ಕೆ ಶಿಕ್ಷಕರನ್ನು ಆಹ್ವಾನಿಸುವ ಈ ಮಕ್ಕಳ ಜೀವನಪ್ರೀತಿ ದೊಡ್ಡದು. ಅದಕ್ಕೊಂದು ಸಲಾಮು!

ಒಟ್ಟಾರೆ ಜಗದ ಎಲ್ಲಾ ಕೂಲಿಕಾರ್ಮಿಕರ ಕರುಳ ಕೂಸುಗಳ ಬದುಕು ಈ ಕಾರಟಗಿ ಸುತ್ತಲಿನ ಮಕ್ಕಳ ಸತ್ಯಕಥನಕ್ಕೆ ಹೊರತಾಗಿಲ್ಲ. ಕಾರ್ಮಿಕರ ಬೆವರ ಹನಿಯಿಂದ ಬಿದ್ದ ಮುತ್ತಿನ ಮಣಿಯಂತಿರುವ ಈ ಮಕ್ಕಳಿಗೆ ಒಂದಿಷ್ಟು ಓದಿಗೆ ಬೇಕಾದ ಸಲಕರಣೆಗಳು, ಮೂಲಭೂತ ಸೌಲಭ್ಯಗಳು, ಕರುಳ ಕೂಸುಗಳು ಕಮರಿಹೋಗದಂಥ ಪೂರಕ ಪರಿಸರ ದೊರೆತರೆ ಇವರ ಮುಂದಿನ ಭವಿಷ್ಯವೇ ಬದಲಾಗುತ್ತದೆ. ಏಕೆಂದರೆ ಭವಿಷ್ಯದ ಬಗೆಗೆ ಚಿಂತಿಸದೆ ಹೋದರೆ ಇವರಿಗೆ ಭವಿಷ್ಯವೇ ಇಲ್ಲ! ಹೌದಲ್ಲವೇ?

**ಕಳಕೇಶ ಡಿ. ಗುಡ್ಲಾನೂರ**
'ಅಕ್ಷರ', ಎ. ಡಿ. ನಗರ, ಮುಂಡರಗಿ, ಗದಗ ಜಿಲ್ಲೆ

# ಪಶುವೈದ್ಯನ ಆತ್ಮಕಥನಗಳು

ಎಚ್. ಕೆ. ರಾಮಚಂದ್ರಮೂರ್ತಿ

ಮನುಷ್ಯ ಹಾಗೂ ಪ್ರಾಣಿಪಕ್ಷಿಗಳ ಸಹವಾಸ ಸಂಬಂಧಗಳು ಅನಾದಿಕಾಲದಿಂದಲೂ ಬೆಳೆದು ಬಂದಿವೆಯಷ್ಟೆ. ಪ್ರಾಚೀನ ಯುಗದಲ್ಲಿ ಮಾನವನು ಪ್ರಾಣಿಪಕ್ಷಿಗಳನ್ನು ಆತ್ಮರಕ್ಷಣೆಗಾಗಿಯೂ ತನ್ನ ಆಹಾರಕ್ಕಾಗಿಯೂ ಕೊಲ್ಲುತ್ತಿದ್ದ. ಆದರೆ ಕ್ರಮೇಣ ಮನುಷ್ಯನ ಬದುಕು ವಿಕಾಸಗೊಂಡು ಅವನು ನಾಗರಿಕತೆಯ ಶಿಖರವನ್ನು ಹಂತಹಂತವಾಗಿ ಏರುವಾಗ ಪ್ರಾಣಿಪಕ್ಷಿಗಳನ್ನು ಪಳಗಿಸಿ ಸಾಕುತ್ತ, ಕೇವಲ ಅಗತ್ಯವಾದಾಗ ಮಾತ್ರ, (ಅದರಲ್ಲೂ ಮುಖ್ಯವಾಗಿ ವನ್ಯಮೃಗಗಳನ್ನು) ಕೊಲ್ಲುವ ಪರಿಪಾಠ ಬೆಳೆಯುತ್ತ ಬಂತು. ಮನುಷ್ಯನ ಸಾಮಾಜಿಕ ವಿಕಾಸದಲ್ಲಿ ದನಕರುಗಳನ್ನು, ಮೃಗಪಕ್ಷಿಗಳನ್ನು ಜತೆಯಲ್ಲಿ ಇಟ್ಟುಕೊಂಡು ಅವುಗಳನ್ನು ಪ್ರೀತಿಯಿಂದ ನೋಡಿಕೊಳ್ಳುವಾಗ, ವಿಕಾಸದ ಆ ಹಂತ ನಾಗರಿಕತೆಯ ಒಂದು ಮಹತ್ತರ ನೆಲೆಯನ್ನು ಮುಟ್ಟಿತ್ತು.

ಅಂದಿನಿಂದ ಇಂದಿನವರೆಗೆ ಪ್ರಾಣಿಗಳ ಬಗ್ಗೆ ಮಾನವ ಸಂವೇದನಾಶೀಲತೆ, ಕನಿಕರ, ಪ್ರೀತಿ ಬೆಳೆಸಿಕೊಂಡು ಅವು ತನ್ನ ಬದುಕಿನ ಅವಿಭಾಜ್ಯ ಅಂಗವೆಂದೇ ಭಾವಿಸುತ್ತಾ ಬಂದಿದ್ದಾನೆ. ಪ್ರತಿಯೊಂದು ಸಾಹಿತ್ಯದಲ್ಲೂ ಪ್ರಾಣಿದಯೆ, ಕರುಣೆ, ಪ್ರೀತಿ ಮುಂತಾದ ಭಾವನೆಗಳನ್ನು ಬಹು ಶ್ರೇಷ್ಠ ಮೌಲ್ಯಗಳೆಂದೇ ಪರಿಭಾವಿಸಲಾಗುತ್ತಿದೆ. ಹಲವು ಮತಧರ್ಮಗಳು ಪ್ರಾಣಿದಯೆಯನ್ನು ಹೆಚ್ಚಾಗಿ ಸಮರ್ಥಿಸಿವೆ. 'ಜೀವ ದಯೆ ಜೈನ ಧರ್ಮಂ' ಎಂಬ ಮಾತಂತೂ ಸರ್ವವಿದಿತ... ಪ್ರಾಣಿಗಳ ಕೃತಜ್ಞತೆ, ಮೂಕಪ್ರೇಮ, ತಮ್ಮನ್ನು ಪ್ರೀತಿಸಿದವರಿಗಾಗಿ ಆತ್ಮಸಮರ್ಪಣೆ ಕುರಿತ ನೂರಾರು ಕಥೆಗಳನ್ನು ನಾವು ಓದಿದ್ದೇವೆ, ಕಣ್ಣೀರು ಮಿಡಿದಿದ್ದೇವೆ.

He Prayeth well who loveth well  
Both man and bird and beast  
He Prayeth best who loveth best  
All things both great and small  
for the dear God who loveth us  
He made and loveth all

ಕೋಲ್‌ರಿಜ್ ಕವಿಯ ಈ ಮಾತುಗಳನ್ನು ಕೇಳದಿರುವವರಾರು ? ಡಾ॥ ಶ್ವಾಯಿಟ್ಜರ್‌ನ 'Reverence for Life' ಪರಿಕಲ್ಪನೆ ಸಕಲ ಸಹೃದಯರ ಅಂತಃಕರಣದಲ್ಲಿ ಚಿರಂತನವಾಗಿ ನೆಲೆಸಿದೆ...

ಆಧುನಿಕ ಸಮಾಜದಲ್ಲಿ ಪ್ರಾಣಿಗಳ ಜೀವರಕ್ಷಣೆಯ ಜತೆಗೆ ಅವುಗಳ ಯೋಗಕ್ಷೇಮವನ್ನೂ ಕಾಪಾಡಲು ಅತ್ಯಂತ ಹೆಚ್ಚಿನ ಗಮನ ಕೊಡಲಾಗುತ್ತದೆ.

ಜೇಮ್ಸ್ ಹೆರಿಯಟ್ ಇಂಗ್ಲೆಂಡಿನಲ್ಲಿ ಒಬ್ಬ ಸುಪ್ರಸಿದ್ಧ ಪಶುವೈದ್ಯ – ಲೇಖಕ, ಮಾನವತಾವಾದಿ. ಅವನ ಅಪಾರ ಕೀರ್ತಿಗೆ ಅವನು ಬರೆದಿರುವ ಜಗದ್ವಿಖ್ಯಾತ, ಪ್ರಾಣಿಲೋಕ ಕುರಿತ ಆತ್ಮಕಥನಗಳು ಮತ್ತು ನೆನಪುಗಳೇ ಸಾಕ್ಷಿಯಾಗಿವೆ.

ಜೇಮ್ಸ್ ಹೆರಿಯಟ್ ಸ್ಕಾಟ್ಲೆಂಡಿನಲ್ಲಿ ಹುಟ್ಟಿ ಬಾಲ್ಯ ಹಾಗೂ ಯೌವನದ ಬಹುತೇಕ ಕಾಲವನ್ನು ಅಲ್ಲೇ ಕಳೆದ. ಗ್ಲಾಸ್‌ಗೊ ವಿಶ್ವವಿದ್ಯಾನಿಲಯದ ವೆಟರ್ನರಿ ಕಾಲೇಜಿನಲ್ಲಿ ಓದಿ ಎಂ.ಆರ್.ಸಿ.ವಿ.ಎಸ್. ಉನ್ನತ ಡಿಗ್ರಿ ಪಡೆದ. ಯಾರ್ಕ್‌ಷೈರ್ ಕೌಂಟಿಯಲ್ಲಿ ೧೯೩೦ರ ದಶಕದಲ್ಲಿ ಪಶುವೈದ್ಯನಾಗಿ ತನ್ನ ವೃತ್ತಿ ಮುಂದುವರಿಸಿದ. ಮೊದಲು ಸೀಗ್ ಫ್ರೆಡ್‌ಫರ್‌ನಾನ್ ಎಂಬ ಪ್ರಸಿದ್ಧ ಪಶುವೈದ್ಯನ ಜತೆ ಸೇರಿ ಮಹತ್ತರ ಕೆಲಸ ಮಾಡಿದ. ಆಮೇಲೆ ಅವನ ಪಾರ್ಟ್‌ನರ್ ಆದ. ಆಧುನಿಕ ಕಾಲದ ಔಷಧಿಗಳು ವೈದ್ಯಕೀಯ ಸಲಕರಣೆಗಳು ಇಲ್ಲದ ಆ ಕಾಲದಲ್ಲಿ ವೈದ್ಯರ ವೃತ್ತಿ ಅತ್ಯಂತ ಸಾಹಸಮಯ ಕಷ್ಟಗಳಿಂದ ಕೂಡಿತ್ತು. ಅವನು ಲೇಖನ ವೃತ್ತಿಗೆ ಕಾಲಿಟ್ಟಾಗ ಅವನಿಗೆ ಆಗಲೆ ೫೦ ವರ್ಷಗಳಾಗಿದ್ದವು. ವೃತ್ತಿಗೆ ಸಂಬಂಧಿಸಿದ ನೂರಾರು ಸಿಹಿ ಕಹಿ, ಅನುಭವಗಳ ನೆನಪಿನಿಂದ ಸಂಪತ್ಸಮೃದ್ಧಿಗೊಂಡ ಅವನು ಬರೆದ ಮೊದಲ ಗ್ರಂಥ 'All creatures great and small' ಅವನಿಗೆ ವಿಶ್ವದಾದ್ಯಂತ ಜನಪ್ರಿಯತೆ ಗಳಿಸಿಕೊಟ್ಟಿತು. ಅವನ ಇತರ ಕೃತಿಗಳು : 'All things bright and beautiful', 'All things wise and wonderful', 'The Low god made them all', James Herriot's `Yorkshire', Every Living thing.' ೧೯ನೆಯ ಶತಮಾನದ ಸಿಸಿಲ್ ಫ್ರಾನ್ಸಿಸ್ ಅಲೆಕ್ಸಾಂಡರ್ ಎಂಬ ಕವಿಯ ಕವನವೊಂದು ಅವನ ಈ ಗ್ರಂಥಗಳ ಹೆಸರಿಗೆ ಸ್ಫೂರ್ತಿ ಒದಗಿಸಿತ್ತು. ಅವನ ಮೊದಲ ಪುಸ್ತಕ ಪ್ರಕಟವಾದಾಗ ಅವನಿನ್ನೂ ಯಾರ್ಕ್‌ಷೈರ್‌ನಲ್ಲೇ ವಾಸಿಸುತ್ತಿದ್ದ. ಅವನ ರೂಪವತಿ ಪತ್ನಿ ಹೆಲೆನ್ ಹಾಗೂ ಇಬ್ಬರು ಮಕ್ಕಳು ಅವನ ಬದುಕಿಗೆ ಸುಖಶಾಂತಿಗಳನ್ನು ಒದಗಿಸಿದ್ದರು. ಯಾರ್ಕ್‌ಷೈರ್‌ನಲ್ಲಿ ಅವನೊಬ್ಬ ಪುರಾಣ ಪ್ರಸಿದ್ಧ ವ್ಯಕ್ತಿಯಾಗಿದ್ದುದು ಆಶ್ಚರ್ಯವೇನಲ್ಲ. ಪ್ರೌಢ ವಿಮರ್ಶಕರು ಪೂರ್ವೋಕ್ತ ಅವನ ಬರವಣಿಗೆಯನ್ನು 'ಲೇಖನ ವೃತ್ತಿಯ ಅನನ್ಯ ಪವಾಡ'ವೆಂದು ಕೊಂಡಾಡಿದರು. ಇವು ಒಂದು ರೀತಿಯ 'ಅಕ್ಷಯ ಪಾತ್ರೆ'ಗಳು. ಯಾವ ಓದುಗನಿಗೆ ಯಾವ ಅಂಶ ಪ್ರಿಯವೋ ಅದನ್ನು ಅವನು ಬಯಸಿ ಪಡೆಯಬಹುದು. ರಸನೇಂದ್ರಿಯಕ್ಕೆ ಕಟ್ಟುತ್ಸಾಹ,






ಸದಭಿರುಚಿಯ ಹಾಸ್ಯ–ವಿನೋದಗಳು, ಕರುಣೆ, ವೈಚಾರಿಕ ಚಿಂತನೆ, 'ರೋಮಾನ್ಸ್' ತೀವ್ರ ಒಳನೋಟ –ಸೀಳುನೋಟಗಳ ಅದ್ಭುತ ಮೋಡಿಕಾರತನ ಇಲ್ಲಿನ ನಿರೂಪಣೆಗಳಲ್ಲಿ ಕಾಣಸಿಗುತ್ತವೆ. It is vicarious living with one of the happiest and most admirable of people ! ಬೇರೆ ಹಲವು ಲೇಖಕರು ಅಪಾರ ಯಶಸ್ಸಿಗೆ ಭಾಜನರಾಗಿರಬಹುದು. ಆದರೆ ಈ ಚೈತನ್ಯಪೂರ್ಣ ಲೇಖಕ ಸಾಧಿಸಿರುವ ಬರವಣಿಗೆಯ ಸಂಯಮ, ಚೇತೋಹಾರಿ ಮಾತುಗಳ ಬಳಕೆ ಹಲವರಿಗೆ ಎಟುಕಲಾರದು. ಎಲ್ಲಕ್ಕಿಂತ ಮಿಗಿಲಾಗಿ ನಮ್ಮ ಲಕ್ಷ್ಯ ಸೆಳೆಯುವ ಅಂಶವೆಂದರೆ, ಜೇಮ್ಸ್ ಹೆರಿಯಟ್ ವೃತ್ತಿಯಲ್ಲಿ ಒಬ್ಬ ಪಶುವೈದ್ಯ – and a glorious veterenarian ! ಬರವಣಿಗೆಗಿಂತ ದಿನ ನಿತ್ಯದ ಬದುಕು ಕಷ್ಟಸಾಧ್ಯವೆನ್ನುವುದಾದರೆ ಈ ಲೇಖಕನ ಮಾನಸಿಕ, ದೈಹಿಕ ಶಿಸ್ತು, ಸಹನೆ, ಸಹೃದಯತೆ, ಅಂತಃಕರಣ ಅಪೂರ್ವವಾದುವೆನ್ನಬಹುದು.

ಚಿರಸ್ಮರಣೀಯವಾದ ಈ ಗ್ರಂಥಗಳಲ್ಲಿ ಹಾಸ್ಯ, ವೇದನೆ, ಕಣ್ಣೀರು ಬೆರೆತ ಮಂದಹಾಸ ಉಕ್ಕಿಸುವ ನೂರಾರು ಘಟನೆಗಳು ಕಿಕ್ಕಿರಿದು ತುಂಬಿವೆ. ಕಷ್ಟನಿಷ್ಠುರಗಳು, ಸುಖಸಂತೋಷಗಳು ಬೆರೆತ ಬದುಕನ್ನು ಒಪ್ಪಿ ಸ್ವೀಕರಿಸುವ ಮನೋಭಾವ ಶ್ಲಾಘನೀಯವೆನಿಸುತ್ತದೆ.

ರಾಬ್‌ಸನ್ ಎಂಬುವನ ಕುರಿ ಕೊಪ್ಪದ ಹಿತಮಿತ ವರ್ಣನೆಗಳು, ಅವನ ಕುರಿಯ 'ಪ್ರಸವ'ದ ವಿವರಗಳು, ದಪ್ಪ ತಲೆಯ ಮರಿ ತಾಯಿಯ ಜನನಾಂಗದಲ್ಲಿ ಸಿಕ್ಕಿಕೊಂಡು ಅದನ್ನು ಹೆರಿಯಟ್ ನಿಭಾಯಿಸುವ ರೋಮಾಂಚಕ ವಿವರಗಳು, ಕುರಿಯ 'ವ್ಯಕ್ತಿತ್ವ'ದ ಮನರಂಜಕ ಚಿತ್ರ, ನಾಯಿ ಬೇಟೆಯಾಡಿದ ನಂತರ ಅರಿವಳಿದುಬಿದ್ದ ೫೦ ಕುರಿಗಳ ಭೀಕರ ದೃಶ್ಯ – ರಕ್ತವಿಲ್ಲ, ಗಾಯಗಳಾಗಿಲ್ಲ ! ಹೆರಿಯಟ್ 'ಕ್ಯಾಲ್ಸಿಯಂ' ಸೂಜಿಮದ್ದು ಕೊಟ್ಟು ಅವುಗಳನ್ನು ಉಪಚರಿಸುವ ಹೃದಯಸ್ಪರ್ಶಿ ಘಟನೆ, ಈವೆನ್ ಎಂಬ ವೈದ್ಯ ಗರ್ಭಪಾತವಾಗಲಿದ್ದ ಕುರಿಯ ಯೋನಿಗೆ ಸಕ್ಕರೆ ಸುರಿದು ಗರ್ಭವನ್ನು ಉಳಿಸಿದ ನಾಟಕೀಯ ಸಂದರ್ಭ, ರಿಚರ್ಡ್ ಕಾರ್ಮೊಡಿ ಎಂಬ ಚಿತ್ರ – ವಿಚಿತ್ರ ವೈದ್ಯಕೀಯ ವಿದ್ಯಾರ್ಥಿ ಅನನ್ಯ ಕೀರ್ತಿ ಸಾಧಿಸಿ ದೇಶವಿಖ್ಯಾತ ವೈದ್ಯನಾಗಿ ವಿಜೃಂಭಿಸುವ ಸನ್ನಿವೇಶ, ಮಿಸೆಸ್ ಬಾಂಡ್ ಎಂಬುವಳು ಸಾಕುತ್ತಿದ್ದ ನೂರಾರು ಹೆಸರಿನ ಬೆಕ್ಕುಗಳು, ಮಿಸೆಸ್ ಕುಕ್ (ಅವಳ ನಿಜವಾದ ಹೆಸರು ಡೂಲೆ) – ಅವಳ ಸೂಜಿಮದ್ದಿನ 'ಹುಚ್ಚು', ಇವೆಲ್ಲ ಸ್ವಾರಸ್ಯಕರ ಘಟನೆಗಳಿಗೆ ಶಿಖರಪ್ರಾಯವಾಗಿ ಬರುವ ಅತ್ಯಂತ ವಿನೋದಮಯ ಹೆರಿಯಟ್ – ಹೆಲೆನ್‌ರ ವಿಚಿತ್ರ ರೀತಿಯ Courtship, ಮದುವೆ, ಮತ್ತು 'ಮಧುಚಂದ್ರ' (Honey moon) ಇವು ಹೆರಿಯೆಟ್ ಬಖೈರಿನಲ್ಲಿ ಬರುವ ಅತ್ಯಮೂಲ್ಯ ಮುತ್ತಿನಂಥ ಘಟನೆಗಳು. ಹೆಸರಾಂತ ವಿಮರ್ಶಕ–ಪ್ರಕಾಶಕ ನೊಬ್ಬನು ಹೇಳುವಂತೆ, "Perhaps once in a decade books like these come along, simple tales... told with such pathos, humour and warmth."

**ಎಚ್. ಕೆ. ರಾಮಚಂದ್ರಮೂರ್ತಿ**
೧೦೨, ಶ್ರಾವಂತಿ ಪ್ಯಾಲೆಸ್, ಸಿ. ಆರ್. ಲೇಔಟ್, ೩ನೆಯ ಅಡ್ಡರಸ್ತೆ, ಜೆ.ಪಿ. ನಗರ, ೧ನೇಯ ಫೇಸ್, ಬೆಂಗಳೂರು – ೭೮




# ಅದು ನಿಮ್ಮದೇ ತಪ್ಪು



ಇಂಗ್ಲಿಷ್ ಮೂಲ : **ಡಿ. ಜೆ. ಎನ್‌ರೈಟ್**
ಕನ್ನಡಕ್ಕೆ : **ಪ್ರೊ॥ ಶಂಕರಗೌಡ ಸಾತ್ಮಾರ**
೫೨, ಡಾ॥ ರಾಧಾಕೃಷ್ಣನ್ ನಗರ
ಗೋಕುಲ ರಸ್ತೆ, ಹುಬ್ಬಳ್ಳಿ – ೫೮೦ ೦೩೦

**ಆ**ಗಲಿ, ನೀವು ಅವುಗಳೊಂದಿಗೆ ಆಟ ಆಡಬಹುದು
ಅಲ್ಲಿ ಅವುಗಳಲಿ ಅಪಾಯವಿಲ್ಲ.
ಅವು ಕೇವಲ ಶಬ್ದಗಳಾಗಿವೆ.
ಶಬ್ದಗಳು ಮಾತ್ರ ನಿಜವಾಗಲೂ ಒಳ್ಳೆಯವು, ಯಾರೋ ಹೇಳಿದ್ದರು.
ಮತ್ತೆ ಕೂಡ ಯಾರೋ ಹೇಳಿದ್ದರು;
ಕೋಲುಗಳು ಮತ್ತು ಕಲ್ಲುಗಳು ಹಾಗೆ ಈ
ಶಬ್ದಗಳು ನಿಮ್ಮ ಮೂಳೆಗಳನ್ನು ಮುರಿಯುವುದಿಲ್ಲ.

(ಅದೊಂದು ಪ್ರಾಸವೆಂದು ಕರೆದಿದೆ. ಕಾಲ–ಕಾಲಕ್ಕೆ
ಆಟವಾಡಲು ಪ್ರಾಸವು ಕೂಡ ಚೆನ್ನಾಗಿರುವುದು.)

ಏನು ? ಅವು ಹೊಲಸಾಗಿವೆಯೇ ?
ನಿಮ್ಮನ್ನು ಪರಚಿವೆಯೇ ? ಮತ್ತೆ ಕಚ್ಚಿವೆಯೆ ?
ನನ್ನನು ಸಹಿಸಿ, ಈ ಪ್ರದೇಶದ ತುಂಬೆಲ್ಲ ರಕ್ತ ಚಲ್ಲಿದೆ
ಮತ್ತು ಮೂಳೆಗಳು ಮುರಿದಿವೆ.

ನಾ ಅವುಗಳನು ಬಿಟ್ಟಾಗ ಅವು ಸರಿಯಾಗಿ ಪಳಗಿದ್ದವು
ಅವು ತಿಂದಿರುವ ಪದಾರ್ಥವು ಅವುಗಳೊಂದಿಗೆ ಹೊಂದದಂತಿರಬೇಕು
ನೀವು ತಿಳಿದಂತೆ ಹೊಸ ಅರ್ಥವನೂ ನೀವು ತಿನ್ನಿಸಿರಬೇಕು ?
ಹಾಗಿದ್ದರೆ ಆಶ್ಚರ್ಯವಿಲ್ಲ.

# ಕನ್ನಡ ಶಾಲೆಗಳ ಅಳಿವು - ಉಳಿವಿನ ಸುತ್ತ







ಕನ್ನಡ ಶಾಲೆಗಳ ಅಥವಾ ಮಾತೃಭಾಷಾ ಮಾಧ್ಯಮದ ಶಾಲೆಗಳ ಅಳಿವು-ಉಳಿವಿನ ಪ್ರಶ್ನೆ ಮೂಲಭೂತವಾಗಿ ಮಾಧ್ಯಮಕೇಂದ್ರಿತ ಪ್ರಶ್ನೆ ಮಾತ್ರವಾಗಿದೆ. ಇದರ ನಿರಾಕರಣೆಯ ಯಾವುದೇ ವಾದಗಳು ಜಾರಿಗೊಳ್ಳುವ ತಂತ್ರಗಳಾಗಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯದ ಬಗೆಗೆ ಕಾಳಜಿಯಿರುವವರು ಆಶಾವಾದಿಗಳಾಗಿ ಹೆಜ್ಜೆ ಇಡುವ ಎಲ್ಲಾ ಅವಕಾಶಗಳು ಲಭ್ಯ ಇವೆ. ಇದು ಬಂಡವಾಳಶಾಹಿ ಪ್ರಜಾಸತ್ತಾತ್ಮಕ ವ್ಯವಸ್ಥೆಯಾಗಿರುವುದರಿಂದ ಈ ನಡೆ ಕೊಂಚ ಕಠಿಣವಾದರೂ ನಿರೀಕ್ಷಿತ ಗುರಿ ಮುಟ್ಟುವುದು ಸಾಧ್ಯ. ಅದಕ್ಕೆ ಈಗಾಗಲೇ ಪ್ರಸ್ತಾಪಿಸಿರುವಂತೆ ಹದಿನೆಂಟು ವರ್ಷ ವಯಸ್ಸಿಗೆ ಮತ ಚಲಾಯಿಸುವ ಹಕ್ಕನ್ನು ಪಡೆದು ದೇಶದ ಭವಿಷ್ಯವನ್ನು ರೂಪಿಸುವ ಹಲವರಲ್ಲಿ ಕೆಲವರಾದರೂ ಮೊದಲಿಗೆ ಯಾವುದು ಸರಿಯಾದ ಮಾಧ್ಯಮ ಎಂಬ ತಾತ್ವಿಕ ನೆಲೆಯಲ್ಲಿ ಕ್ರಿಯೆ ಮತ್ತು ಚಿಂತನೆಯನ್ನು ವ್ಯಾಪಕಗೊಳಿಸಬೇಕಿದೆ. ಇದು ಸಾಧ್ಯ. ಯಾವುದೂ ಅಸಾಧ್ಯವಲ್ಲ.



**ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**

**ಕ**ನ್ನಡ ಶಾಲೆಗಳ ಸಂಖ್ಯೆ ದಿನೇ ದಿನೇ ಕುಸಿಯುತ್ತಿದೆ. ಇದು ಕೇವಲ ಕನ್ನಡ ಶಾಲೆಗಳ ಕುಸಿತವೇ ? ಅಥವಾ ಕನ್ನಡದ ಕುಸಿತವೇ ? ಇದಕ್ಕೆ ಮೂಲಭೂತ ಸೌಕರ್ಯಗಳ ಕೊರತೆ ಕಾರಣವೇ ? ಅಥವಾ ಆಂಗ್ಲ ಭಾಷಾ ವ್ಯಾಮೋಹ ಕಾರಣವೇ ? ಇಂತಹ ಶಾಲೆಗಳ ಕುಸಿತ ಕೇವಲ ಗಡಿ ಶಾಲೆಗಳ ಪ್ರಶ್ನೆಯೇ ಅಥವಾ ಒಳನಾಡಿನ ಶಾಲೆಗಳ ಪ್ರಶ್ನೆಯೂ ಆಗಿದೆಯೇ ? ಕನ್ನಡ ಶಾಲೆಗಳ ಕಲಿಕೆಯಿಂದ ಉದ್ಯೋಗ ಸಿಗುವುದಿಲ್ಲವೇ ? ಅಥವಾ ಇಂಗ್ಲಿಷ್ ಮಾಧ್ಯಮದ ಶಾಲೆಗಳ ಕಲಿಕೆಯಿಂದ ಮಾತ್ರ ಉದ್ಯೋಗ ಸಿಗುತ್ತದೆಯೇ ? ಅಥವಾ ಉದ್ಯೋಗ ಸಿಗುವುದಕ್ಕೂ ಅಥವಾ ಸಿಗದಿರುವುದಕ್ಕೂ ಅಥವಾ ಸಿಗಬೇಕಾದ ಉದ್ಯೋಗ ಮೂಲಭೂತವಾಗಿ ಅಸ್ತಿತ್ವದಲ್ಲಿ ಇರುವುದಕ್ಕೂ ಇಲ್ಲದಿರುವುದಕ್ಕೂ ವ್ಯತ್ಯಾಸಗಳಿವೆಯೇ ? ಕನ್ನಡ ಶಾಲೆಗಳೆಂದರೆ ಕೇವಲ ಸರ್ಕಾರಿ ಶಾಲೆಗಳೇ ಅಥವಾ ಖಾಸಗಿ ಶಾಲೆಗಳನ್ನು ಸಹ ಇಲ್ಲಿ ಸೇರಿಸಿಕೊಳ್ಳಬಹುದೇ ? ಇತ್ಯಾದಿ ಅನೇಕಾನೇಕ ಪ್ರಶ್ನೆಗಳು ಕನ್ನಡ ಶಾಲೆಗಳು ಮತ್ತು ಮಾತೃಭಾಷಾ ಮಾಧ್ಯಮದ ಸುತ್ತ ಇವೆ. ಇವುಗಳನ್ನು ಪೋಷಕರು, ಅಧಿಕಾರಿಗಳು, ಸ್ವತಃ ಶಿಕ್ಷಕರು ತಮಗೆ ತೋಚಿದಂತೆ ಚರ್ಚಿಸುತ್ತಾರೆ. ಅದಕ್ಕೆ ಸಮೃದ್ಧವಾದ ಭೂಮಿಕೆಯನ್ನು ಸ್ವತಃ ಸರ್ಕಾರವೇ ತನ್ನ ದ್ವಂದ್ವ ನೀತಿಯಿಂದ ನಿರ್ಮಿಸಿಕೊಟ್ಟಿದೆ. ಅದು ಎರಡು ಭಾಷಾ ಮಾಧ್ಯಮಗಳ ಅನುಷ್ಠಾನದಲ್ಲಿದೆ. ಒಂದು, ಮಾತೃಭಾಷಾ ಮಾಧ್ಯಮ. ಇನ್ನೊಂದು, ಅನ್ಯದೇಶೀಯ ಭಾಷಾ ಮಾಧ್ಯಮ. ಮಾತೃಭಾಷಾ ಮಾಧ್ಯಮದಲ್ಲಿ ಕನ್ನಡ, ತೆಲುಗು, ತಮಿಳು, ಉರ್ದು, ಮರಾಠಿ, ಮಲಯಾಳ ಮುಂತಾದ ಭಾಷೆಗಳು ಕರ್ನಾಟಕದ ಮಟ್ಟಿಗೆ ಇದ್ದರೆ ಅನ್ಯದೇಶೀಯ ಭಾಷಾ ಮಾಧ್ಯಮದಲ್ಲಿ ಇಂಗ್ಲಿಷ್ ಭಾಷೆ ಮಾತ್ರ ಇದೆ. ಇಂತಹ ಎರಡು ಭಾಷಾ ಮಾಧ್ಯಮಗಳೂ ಸರ್ಕಾರದಿಂದ ಅನುಷ್ಠಾನದಲ್ಲಿವೆಯೆಂದರೆ ಸರ್ಕಾರಕ್ಕೆ ಸ್ವತಃ ಯಾವ ಒಂದು ಮಾಧ್ಯಮದ ಹಿನ್ನೆಲೆಯ ತಾತ್ವಿಕ ನೆಲೆಗಳು ಮತ್ತು ಪರಿಣಾಮಗಳ ಬಗ್ಗೆ ಸಹ ಸ್ಪಷ್ಟವಾಗಿ ಅರಿವಿಲ್ಲ ಎಂಬುದು ವೇದ್ಯವಾಗುತ್ತದೆ. ಸರ್ಕಾರಕ್ಕೆ ಸ್ಪಷ್ಟವಾಗಿ ಅರಿವಿಲ್ಲದಾಗ ಶಿಕ್ಷಣತಜ್ಞರ ಸಲಹೆ ಪಡೆಯಬೇಕಾದ್ದು ಅನಿವಾರ್ಯ. ಆದರೆ ಇಲ್ಲಿ ಶಿಕ್ಷಣತಜ್ಞರ ಮುಖವಾಡದಲ್ಲಿ ಶಿಕ್ಷಣೋದ್ಯಮಿಗಳು ಇದ್ದಾರೆ. ಇವರಿಗೆ ಲಾಭ–ನಷ್ಟ ಪ್ರಶ್ನೆ ಮುಖ್ಯವಾಗಿ ಪೋಷಕರ ನಾಡಿಮಿಡಿತ ಅರಿತು ಸಾಗುತ್ತಾರೆ. ತಮ್ಮ ಪ್ರಭಾವವನ್ನು ಬಳಸಿ ಸರ್ಕಾರದಲ್ಲಿ ತಮಗೆ ಅನುಕೂಲಕರವಾದ, ಗೊಂದಲಮಯವಾದುದಾದರೂ ಪರವಾಗಿಲ್ಲ, ಗೊಂದಲಮಯ ನೀತಿಯನ್ನೇ ಅನುಷ್ಠಾನಕ್ಕೆ ತರುತ್ತಾರೆ. ಇಂತಹ ಗೊಂದಲಪುರದಲ್ಲಿ ಸರ್ಕಾರ, ಉದ್ಯಮಿಗಳು, ಪೋಷಕರು ಮತ್ತು ಸ್ವತಃ ಶಿಕ್ಷಕರು ಇದ್ದಾರೆ. ಆದ್ದರಿಂದ ಕನ್ನಡ ಶಾಲೆಗಳ ಅಳಿವು ಮತ್ತು ಉಳಿವಿನ ಪ್ರಶ್ನೆ ಕೇವಲ ಕನ್ನಡ ಶಾಲೆಗಳ ಪ್ರಶ್ನೆಯಾಗಿ ಉಳಿಯುವುದಿಲ್ಲ. ಅದು ಕನ್ನಡದ ಪ್ರಶ್ನೆಯೂ ಆಗುತ್ತದೆ. ಬಂಡವಾಳಕೋರರ ಪ್ರಶ್ನೆಯೂ ಆಗುತ್ತದೆ.

**ಕನ್ನಡ ಶಾಲೆಗಳ ಅವನತಿಗೆ ಮೂಲಭೂತ ಸೌಕರ್ಯಗಳು ಕಾರಣವೇ ?**

ಕೆಲವರು ವಾದಿಸುತ್ತಾರೆ; ಕನ್ನಡ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆಯಿದೆಯೆಂದು; ಹಾಗಾಗಿ ತಮ್ಮ ಮಕ್ಕಳನ್ನು ಅಲ್ಲಿಗೆ ಸೇರಿಸುವುದಿಲ್ಲವೆಂದು.

ಇದು ನಿಜವೇ ಆದಲ್ಲಿ ಇವರ ದೃಷ್ಟಿಯಲ್ಲಿ ಖಾಸಗಿ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಯಿಲ್ಲವೆಂದಾಯ್ತು ಅಥವಾ ಇಂತಹ ಸೌಕರ್ಯಗಳ ಕೊರತೆಯ ಪ್ರಮಾಣ ಖಾಸಗಿ ಶಾಲೆಗಳಲ್ಲಿ ಕಡಿಮೆ ಎಂದಂತಾಯ್ತು. ಇಂಥವರು ಎಲ್ಲ ಖಾಸಗಿ ಶಾಲೆಗಳಲ್ಲಿ ಇರುವ ಶಿಕ್ಷಕರಿಗೆ ಕನಿಷ್ಠ ವಿದ್ಯಾರ್ಹತೆ ಇರುವುದು ವಾಸ್ತವವೇ ಎಂಬುದನ್ನು ಯೋಚಿಸು ವುದಿಲ್ಲ. ಅಂತೆಯೇ ಸರ್ಕಾರಿ ಶಾಲೆಗಳಲ್ಲಿ ಇರುವ ಶಿಕ್ಷಕರಿಗೆ ಅಂತಹ ವಿದ್ಯಾರ್ಹತೆ ಇರುತ್ತದೆ ಎಂಬ ತಿಳುವಳಿಕೆ ತಮಗೆ ಮುಖ್ಯವೇ ಆಗುವುದಿಲ್ಲ. ಅಂತೆಯೇ ಇವರ ದೃಷ್ಟಿಯಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇಲ್ಲದಿರುವ ಖಾಸಗಿ ಕನ್ನಡ ಶಾಲೆಗಳಿಗೆ ತಮ್ಮ ಮಕ್ಕಳನ್ನು ಸೇರಿಸಲು ಸ್ವತಃ ಇಚ್ಛೆಯಿದೆಯೋ ? ಇದನ್ನಾದರೂ ಎದೆ ಮುಟ್ಟಿ ಕೊಂಡು ಹೇಳಬೇಕು.

ಈ ಹಿಂದಿನ ದಶಕಗಳಿಗೆ ಹೋಲಿಸಿದಾಗ ಇತ್ತೀಚಿನ ದಶಕಗಳಲ್ಲಿ ಸರ್ಕಾರಿ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳ ಪ್ರಮಾಣ ಹೆಚ್ಚಿದೆ. ಆದರೆ ಒಂದು ಅವೈಜ್ಞಾನಿಕ ನೀತಿಯಂತೂ ಇನ್ನೂ ಮನೆ ಮಾಡಿಕೊಂಡಿದೆ. ಅದೇಂದರೆ ವಿದ್ಯಾರ್ಥಿ–ಶಿಕ್ಷಕರ ಅನುಪಾತಕ್ಕೆ ಸಂಬಂಧಿಸಿದ್ದು. ಅದರ ಪ್ರಕಾರ ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಇಪ್ಪತ್ತು ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕ; ಅಂತೆಯೇ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮೂವತ್ತು ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕ ಇರಬೇಕು ಎಂಬುದು. ಇದು ಅತ್ಯಂತ ಅವೈಜ್ಞಾನಿಕ ನೀತಿ ಎಂಬುದು ನನ್ನ ಸ್ಪಷ್ಟ ಅಭಿಪ್ರಾಯ. ಕಾರಣವೆಂದರೆ, ಈ ಅನುಪಾತದ ಇಪ್ಪತ್ತು ಅಥವಾ ಮೂವತ್ತು ವಿದ್ಯಾರ್ಥಿಗಳು ಒಂದೇ ತರಗತಿಯವರಾಗಿರಬಹುದು ಅಥವಾ ಎರಡು, ಮೂರು ಅಥವಾ ನಾಲ್ಕು ತರಗತಿಯವರೂ ಆಗಿರಬಹುದು. ಇಂತಹ ಕನಿಷ್ಠ ಎರಡು ತರಗತಿಗಳಿಗೆ ಒಬ್ಬ ಶಿಕ್ಷಕ ಇದ್ದರೆ ಈ ಬಹು ತರಗತಿಗಳನ್ನು ಏಕಕಾಲಕ್ಕೆ ಈ ಶಿಕ್ಷಕ ನಿಭಾಯಿಸುವುದಾದರೂ ಹೇಗೆ ? ಇದು ಏಕಕಾಲಕ್ಕೆ ಎರಡು ದೋಣಿಗಳ ಮೇಲಿನ ಯಾನವಲ್ಲವೇ ? ಒಂದು ತರಗತಿಯ ಮೇಲೆ ಶಿಕ್ಷಕನಿಗೆ ಬೋಧನಾ ಲಕ್ಷ್ಯವಿದ್ದಾಗ ಇನ್ನೊಂದು ತರಗತಿಯವರು ದಂಗೆ ಏಳುವುದಿಲ್ಲವೇ ? ಆದ್ದರಿಂದ ವಿದ್ಯಾರ್ಥಿ – ಶಿಕ್ಷಕರ ಕಿರಿಯ ಮತ್ತು ಹಿರಿಯ ಶಾಲೆಗಳ ಈ ೩೦ : ೧ ಮತ್ತು ೨೦ : ೧ ಎಂಬ ಅನುಪಾತವೇ ಅತ್ಯಂತ ಅವೈಜ್ಞಾನಿಕವಾದುದಾಗಿದೆ. ಹಾಗಾಗಿ ಇದನ್ನು ನಿರ್ಮೂಲನಗೊಳಿಸಿ ತರಗತಿಗೊಬ್ಬ ಶಿಕ್ಷಕ ಎಂಬ ನೀತಿಯನ್ನು ಅಳವಡಿಸಿಕೊಳ್ಳಬೇಕು.

ಇದರೊಂದಿಗೆ ಅಭಿವೃದ್ಧಿಹೀನ ಶಾಲೆಗಳಲ್ಲಿ ಇನ್ನೊಂದು ಸಮಸ್ಯೆ ಎದ್ದು ಕಾಣುತ್ತದೆ. ಅದು ಎರಡು ತರಗತಿಗಳಿಗೊಂದು ಕೊಠಡಿ ಎಂಬುದು. ಇದು ಸಹ ಅವೈಜ್ಞಾನಿಕ ವ್ಯವಸ್ಥೆ. ಇದರ ಜಾಗದಲ್ಲಿ ತರಗತಿಗೊಂದು ಕೊಠಡಿ ಎಂಬ ನೀತಿ ಮತ್ತು ವ್ಯವಸ್ಥೆ ಏರ್ಪಡಬೇಕು.

ಇಂತಹ ಕೊರತೆಗಳು ಎಲ್ಲಿವೆಯೆಂದರೆ ವಿಶೇಷವಾಗಿ ಕಡಿಮೆ ವಿದ್ಯಾರ್ಥಿಗಳು ಇರುವ ಶಾಲೆಗಳಲ್ಲಿ. ಹಾಗಾಗಿ ಕಡಿಮೆ ವಿದ್ಯಾರ್ಥಿಗಳು ಇರುವ ಶಾಲೆಗಳನ್ನು ಸಹ ಉಪೇಕ್ಷಿಸದೆ ಪರಿಷ್ಕೃತ ನೀತಿಗೆ ಅನುಸಾರ ಅಪೇಕ್ಷಿತ ಸಂಖ್ಯೆಯ ಶಿಕ್ಷಕರನ್ನು ಮತ್ತು ಕೊಠಡಿಗಳನ್ನು ಸರ್ಕಾರ ಕಲ್ಪಿಸಬೇಕು. ಈ ನಿಟ್ಟಿನಲ್ಲಿ ಕೆಲವು ಖಾಸಗಿ ಶಾಲೆಗಳು ಸಹ ಇವೆ.

ಇಂತಹ ಮೂಲಭೂತ ಸೌಕರ್ಯಗಳನ್ನು ಬೊಟ್ಟುಮಾಡಿ ತೋರಿಸುವವರು ಈಗಾಗಲೇ ಹೇಳಿರುವಂತೆ ಅಂತಹ ಸೌಕರ್ಯಗಳ ಕೊರತೆ ಇಲ್ಲದ ಸರ್ಕಾರಿ ಕನ್ನಡ ಶಾಲೆಗಳಿಗೆ ಅಥವಾ ಖಾಸಗಿ ಕನ್ನಡ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸಲು ಇಚ್ಛಿಸುತ್ತಾರೆಯೇ ? ಇಲ್ಲ. ಇಂಗ್ಲಿಷ್ ಮಾಧ್ಯಮದ ಶಾಲೆಯ ಅವಕಾಶ ಇರುವವರು ಮತ್ತು ಇಂತಹ ಶಾಲೆಗಳಿಗೆ ಸೇರಿಸುವ ಕನಿಷ್ಠ ಆರ್ಥಿಕ ಬಲ ಇರುವವರು ಇಂದು ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮಕ್ಕಾಗಲೀ ಸರ್ಕಾರಿ ಶಾಲೆಗಳಿಗಾಗಲೀ ಕಳುಹಿಸುತ್ತಿಲ್ಲ. ಹಾಗಾಗಿ ಪೋಷಕರ ಶಾಲಾ ಆಯ್ಕೆಗೆ ಇರುವ ಮುಖ್ಯ ಮಾನದಂಡ ಮೂಲಭೂತ ಸೌಕರ್ಯವಲ್ಲ; ಬದಲಿಗೆ ಭಾಷಾ ಮಾಧ್ಯಮವಾಗಿದೆ. ಅಲ್ಲಿ ಕನ್ನಡ ಅಥವಾ ಮಾತೃಭಾಷಾ ಮಾಧ್ಯಮಕ್ಕಿಂತ ಇಂಗ್ಲಿಷ್ ಭಾಷಾ ಮಾಧ್ಯಮ ಮತ್ತು ಅದರ ಬಗೆಗಿನ ವ್ಯಾಮೋಹ ಹಾಗೂ ಅದರಲ್ಲಿ ಕಲಿತರೆ ಮಾತ್ರ ಇಂಗ್ಲಿಷ್ ಕಲಿಕೆ ಸಾಧ್ಯ; ಇಲ್ಲವಾದರೆ ಇಲ್ಲ. ಅದು ಕನ್ನಡ ಮಾಧ್ಯಮದಲ್ಲಿ ಜ್ಞಾನಾರ್ಜನೆ ಸಾಧ್ಯವಿಲ್ಲ; ಇಂಗ್ಲಿಷ್‌ಅನ್ನು ಒಂದು ಪತ್ರಿಕೆಯನ್ನಾಗಿ ಕಲಿಯುವುದು ಸಹ ಸಾಧ್ಯವಿಲ್ಲ ಎಂಬ ತಿಳುವಳಿಕೆಯೇ ಕಾರಣವಾಗಿದೆ.

**ಗಡಿ ಶಾಲೆಗಳ ತಲ್ಲಣಗಳು ಕನ್ನಡ ಮಾಧ್ಯಮದ ಅವನತಿಗೆ ಕಾರಣವೇ ? :** ಕೆಲವು ಗಡಿ ಶಾಲೆಗಳಲ್ಲಿ ಸಾರಿಗೆ ಮತ್ತು ನೀರಿನ ಸೌಲಭ್ಯದ ಕೊರತೆ ಇರುವುದು ನಿಜ. ಇಂತಹ ಸಮಸ್ಯೆ ಬಾಗೇಪಲ್ಲಿ, ಗುಡಿಬಂಡೆ, ಗೌರಿಬಿದನೂರು ಮುಂತಾದ ಕೋಲಾರ, ಚಿಕ್ಕಬಳ್ಳಾಪುರದ ಗಡಿಪ್ರದೇಶದ ಶಾಲೆಗಳಲ್ಲಿದೆ. ಇದು ವಿಸ್ತೃತ ನೆಲೆಯಲ್ಲಿ ಪಶ್ಚಿಮ ಕರ್ನಾಟಕದ ಜಿಲ್ಲೆಗಳಲ್ಲಿ ಆಂಧ್ರಕ್ಕೆ ಹೊಂದಿಕೊಂಡ ಪ್ರದೇಶಗಳಲ್ಲಿಯೂ ಇದೆ. ಇದರಿಂದ ಕನ್ನಡ ಶಾಲೆಗಳು ತಲ್ಲಣವನ್ನು ಅನುಭವಿಸುತ್ತಿವೆ ಎಂಬ ಒಂದು ಸಣ್ಣ ವಾದವಿದೆ. ಇಂತಹ ಶಾಲೆಗಳಲ್ಲಿ ಕಲಿಯುವ ಮಕ್ಕಳು ಕನ್ನಡ ಭಾಷೆಯನ್ನು ಕೇಳಿದಾಗ ಗಾಬರಿಗೊಳ್ಳುವುದೂ ಉಂಟು ಎಂಬ ಉದ್ಗಾರವನ್ನು ಕೇಳಿದ್ದೇನೆ. ಉಳಿದಂತೆ ಈ ಮಕ್ಕಳಿಗೆ ಕನ್ನಡೇತರವಾದ ತಮ್ಮ ನೆಲದ ಭಾಷೆಯಲ್ಲಿಯೇ ಕನ್ನಡವನ್ನು ಹೇಳಿಕೊಡಬೇಕಾದ ಪರಿಸ್ಥಿತಿಯಿದೆ ಎಂದು ಹೇಳುತ್ತಾರೆ. ಇದು ಭಾಗಶಃ ನಿಜವೂ ಹೌದು. ಯಾವುದೇ ದ್ವಿಭಾಷಿಕ ಪ್ರದೇಶದ ಸಹಜ ಸಮಸ್ಯೆ ಇದು. ಇದು ಕೇವಲ ಕನ್ನಡ – ತೆಲುಗು ದ್ವಿಭಾಷಿಕ ಪ್ರದೇಶವಾದ ಕೋಲಾರ, ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಮಾತ್ರ ಸಂಬಂಧಿಸಿರದೆ ಕನ್ನಡ – ಕೊಡವದ ಕೊಡಗು, ಕನ್ನಡ – ತುಳುವಿನ ದಕ್ಷಿಣ ಕನ್ನಡ ಮತ್ತು ಉಡುಪಿ, ಕನ್ನಡ – ಕೊಂಕಣಿಯ ಉತ್ತರಕನ್ನಡ, ಕನ್ನಡ – ಮರಾಠಿಯ ಬೆಳಗಾವಿ, ಉರ್ದು – ಕನ್ನಡದ ಬಿಜಾಪುರ, ಬೀದರ್, ಗುಲ್ಬರ್ಗ, ತಮಿಳು – ಕನ್ನಡದ ಕೆ.ಜಿ.ಎಫ್ ಮತ್ತು ಬೆಂಗಳೂರಿನ ಕೆಲವು ಪ್ರದೇಶಗಳು – ಇವುಗಳಿಗೆ ಸಹ ಸಂಬಂಧಿಸಿದೆ. ಇವುಗಳನ್ನು ತಲ್ಲಣಗಳೆಂದು ಕರೆಯಬಹುದೇ ? ಎಂಬ ಪ್ರಶ್ನೆಯೂ ಇದೆ. ಆದರೆ ಮೂಲಭೂತವಾಗಿ ಇಲ್ಲಿ ಕಾಣುವ ಪ್ರಶ್ನೆಯೆಂದರೆ ಇಲ್ಲಿ ಮೊದಲಿಗೆ ಪ್ರಸ್ತಾಪಿಸಿದ ಸಾರಿಗೆ ಮತ್ತು ನೀರಿನ ಸಮಸ್ಯೆ ನಿವಾರಣೆಯಾದ ಮಾತ್ರಕ್ಕೆ ಈ ಪ್ರದೇಶಗಳ ಪೋಷಕರು ತಮ್ಮ ಮಕ್ಕಳನ್ನು ಕನ್ನಡ ಅಥವಾ ಮಾತೃಭಾಷಾ ಮಾಧ್ಯಮದ ಶಾಲೆಗಳಿಗೆ ಕಳುಹಿಸು ತ್ತಾರೆಯೇ ? ಇದು ಈ ಶಾಲೆಗಳಿಗೆ ಮೀರಿದ ಆ ಪ್ರದೇಶದ ಎಲ್ಲರಿಗೂ ಇರುವ ಸಮಸ್ಯೆಯಲ್ಲವೇ ? ಅಂತೆಯೇ ಕನ್ನಡಕ್ಕೆ ಅಪರಿಚಿತವಾದ ಮಕ್ಕಳು ಕನ್ನಡ ಮಾಧ್ಯಮಕ್ಕೆ ಪರ್ಯಾಯವಾಗಿ ತಮ್ಮದೇ ಆದ ಮಾತೃಭಾಷಾ ಮಾಧ್ಯಮವನ್ನು ಒತ್ತಾಯಿ ಸುತ್ತಿವೆಯೇ ? ಅಥವಾ ಇಂಗ್ಲಿಷ್ ಮಾಧ್ಯಮವನ್ನು ಅಪೇಕ್ಷಿಸುತ್ತಿವೆಯೇ ?



ಈ ಹಿನ್ನೆಲೆಯಲ್ಲಿ ಗಡಿಪ್ರದೇಶದ ಶಾಲೆಗಳಲ್ಲಿರುವ ಸಾರಿಗೆ, ನೀರು ಮತ್ತು ದ್ವಿಭಾಷಿಕತೆಯ ಸಮಸ್ಯೆ ಮೇಲ್ನೋಟಕ್ಕೆ ಕಾಣುವ ಸಮಸ್ಯೆಯಾದರೂ ಮೂಲಭೂತವಾಗಿ ಇರುವ ಸಮಸ್ಯೆ ಬೇರೆಯೇ ಆಗಿದೆ. ಅದು ಮಾತೃಭಾಷಾ ಮಾಧ್ಯಮದ ಬಗೆಗೆ ಇರುವ ಕೀಳರಿಮೆ ಮತ್ತು ಇಂಗ್ಲಿಷ್ ಭಾಷಾ ಮಾಧ್ಯಮದ ಬಗೆಗೆ ಇರುವ ಮೇಲರಿಮೆ, ವ್ಯಾಮೋಹ ಮತ್ತು ಆ ಮಾಧ್ಯಮದ ಕಲಿಕೆಯಿಂದ ಮಾತ್ರ ಉದ್ಯೋಗ ಲಭ್ಯ ಎಂಬ ಮೂಢನಂಬಿಕೆ.

**ಸರ್ಕಾರದ ದ್ವಂದ್ವ ನೀತಿ :** ಮಕ್ಕಳಿಗೆ ತಾಯಿಯ ಎದೆಹಾಲಿನಂತೆ ವಿದ್ಯಾರ್ಥಿಗಳಿಗೆ ಮಾತೃಭಾಷಾ ಮಾಧ್ಯಮ ಶ್ರೇಯಸ್ಕರ ಎಂಬುದು ಎಲ್ಲ ಶಿಕ್ಷಣತಜ್ಞರ ಅಭಿಪ್ರಾಯ. ಮಹಾತ್ಮ ಗಾಂಧಿ ಸಹ ಇದನ್ನೇ ಹೇಳುತ್ತಾರೆ. ಹೀಗಿರುವಾಗ ಸರ್ಕಾರ ಇದನ್ನು ತನ್ನ ಶಿಕ್ಷಣ ನೀತಿಯ ಭಾಗವನ್ನಾಗಿ ಯಾವಾಗಲೋ ಮಾಡಿಕೊಳ್ಳಬೇಕಿತ್ತು. ಆದರೆ ಈವರೆಗೂ ಇದನ್ನು ತನ್ನ ನೀತಿಯ ಭಾಗವನ್ನಾಗಿ ಮಾಡಿಕೊಂಡಿಲ್ಲವೆಂದರೆ ಅದಕ್ಕೆ ಬೌದ್ಧಿಕ ದಿವಾಳಿತನ ಇದೆ ಎಂಬುದು ಸ್ಪಷ್ಟವಾಗುತ್ತದೆ. ಇದರೊಂದಿಗೆ ಸರ್ಕಾರ ಶಿಕ್ಷಣ ತಜ್ಞರೊಂದಿಗೆ ಸಮಾಲೋಚಿಸಿ ತನ್ನ ನೀತಿಯನ್ನು ರೂಪಿಸಿಕೊಳ್ಳುತ್ತಿಲ್ಲ. ಬದಲಿಗೆ ಶಿಕ್ಷಣವನ್ನು ಬಂಡವಾಳ ಕ್ಷೇತ್ರವನ್ನಾಗಿ ಮಾಡಿಕೊಂಡ ಶಿಕ್ಷಣೋದ್ಯಮಿಗಳೊಂದಿಗೆ ಸಮಾಲೋಚಿಸಿ ತನ್ನ ನೀತಿಯನ್ನು ರೂಪಿಸಿಕೊಳ್ಳುತ್ತಿದೆ. ಆದ್ದರಿಂದಲೇ ಉಳ್ಳವರಿಗೆ ಇಂಗ್ಲಿಷ್ ಮಾಧ್ಯಮ, ನಿರ್ಗತಿಕರಿಗೆ ಮಾತೃಭಾಷಾ ಮಾಧ್ಯಮ ಎಂಬ ಸನ್ನಿವೇಶ ನಿರ್ಮಾಣವಾಗಿರುವುದು. ಈ ಹಿಂದೆ ನಾವು ಬ್ರಿಟಿಷರ ಗುಲಾಮಗಿರಿಯಲ್ಲಿ ಇದ್ದುದರಿಂದ ಆ ಚಾರಿತ್ರಿಕ ಸಂಸ್ಕಾರದ ಫಲವಾಗಿ ಇಂದು ಅವರನ್ನು ಬಿಟ್ಟರೂ ಅವರ ಭಾಷೆಯನ್ನು ಬಿಡುತ್ತಿಲ್ಲ. ಅಂಥವರನ್ನು ಕೇಳಿಕೊಂಡು ಸರ್ಕಾರವು ತನ್ನ ನೀತಿಯನ್ನು ರೂಪಿಸುವುದೆಂದರೆ ಕೋಳಿಯನ್ನು ಕೇಳಿ ಮಸಾಲೆಯನ್ನು ಅರೆಯುವುದೆಂದೇ ಅರ್ಥ. ಇನ್ನೊಂದೆಡೆ ಸರಿಯಾದ ನೀತಿ ರೂಪಿಸುವ ಸರ್ಕಾರವೆಂಬ ಬೆಕ್ಕಿಗೆ ಗಂಟೆ ಕಟ್ಟುವವರಾರು ? ಎಂಬ ಪ್ರಶ್ನೆ ಉದಿಸಿದೆ.

ಅಂತಿಮವಾಗಿ ಕನ್ನಡ ಶಾಲೆಗಳು ಉಳಿಯಬೇಕು ಮತ್ತು ಬೆಳೆಯಬೇಕು ಎಂಬ ಕಾಳಜಿ ಕರ್ನಾಟಕದ ಆರು ಕೋಟಿ ಕನ್ನಡಿಗರಲ್ಲಿಯೂ ಇದೆ. ಆದರೆ ಅದು ತನ್ನ ಮಕ್ಕಳನ್ನು ಹೊರತುಪಡಿಸಿ ಇತರರ ಮಕ್ಕಳಿಂದ ಮಾತ್ರ ಆಗಬೇಕು ಎಂಬ ನಿಲುವು ಸಹ ಅಲ್ಲಿ ಅಷ್ಟೇ ಗಟ್ಟಿಯಾಗಿದೆ. ಇಂತಹ ಪರಿಸ್ಥಿತಿ ಬದಲಾಗಬೇಕು. ಬದಲಾಗಲು ಸಾಧ್ಯ. ಸಮಾನಮನಸ್ಕರು ಸಂಘಟಿತ ಮತ್ತು ಕಾರ್ಯಕ್ರಮದ ನೆಲೆಯಲ್ಲಿ ಜನಾಭಿಪ್ರಾಯ ಮೂಡಿಸಬೇಕು. ಕನ್ನಡದ ಬಗೆಗೆ ಮಾತನಾಡುವವರು "ಗಂಡುಸಾದರೆ ನಿನ್ನ ಬಲಿ ಕೊಡುವೆಯೇನು ?" ಎಂದು ಕನ್ನಡಾಂಬೆ ಬೇಂದ್ರೆಯ ಪದ್ಯದಲ್ಲಿ ಕನ್ನಡಿಗರಿಗೆ ಕೇಳುವಂತಹ ಮರ್ಮಾಘಾತವಾದಂತಹ ಮಾತುಗಳನ್ನು ತಮಗೆ ತಾವೇ ಕೇಳಿಕೊಳ್ಳಬೇಕು. ಆಗ ಕನ್ನಡದ ಬಗೆಗೆ "ಮೇಲೆ ಮೇಲೆ ಮಾಡ್ತೀನಿ, ಏನ್ ಕೊಡ್ತೀಯ ಗೌಡ" ಎಂಬ ನೀತಿಯ ನೆಲೆಯಲ್ಲಿಯ ಮೇಲ್ಪದರದ ಕಾರ್ಯ ನಿಂತು ಮೂಲಭೂತ ಸ್ತರದಲ್ಲಿ ಮಾಡುವ ಕಾರ್ಯ ಆರಂಭವಾಗುತ್ತದೆ. ಅಂತಹ ಕಾರ್ಯದ ನೆಲೆಗೆ ಮೊದಲಿಗೆ ಕನ್ನಡದ ಹೆಸರನ್ನು ಹೇಳುವವರು ಧುಮುಕಬೇಕು. ಅವರು ಕನ್ನಡ ಕಾರ್ಯಕರ್ತರಾಗಿರಬಹುದು, ಪೋಷಕರಾಗಿರಬಹುದು, ಜನಪ್ರತಿನಿಧಿಗಳಾಗಿರಬಹುದು, ಅಧಿಕಾರಿಗಳಾಗಿರಬಹುದು ಅಥವಾ ಇನ್ನಾರಾದರೂ ಆಗಿರಬಹುದು. ಆಗ ಅವರು ಆಡುವ ಮಾತಿಗೆ ಘನತೆ ಬರುತ್ತದೆ. ಅಂತಹವರ ನಡೆಯ ಬಗೆಗೆ ಜನರಿಗೆ ವಿಶ್ವಾಸವೂ ಮೂಡುತ್ತದೆ. ಆಗ ಕನ್ನಡ ಅಥವಾ ಮಾತೃಭಾಷಾ ಮಾಧ್ಯಮದ ಶಾಲೆಗಳು ಸೊರಗದೆ ಅರಳುತ್ತವೆ. ಅವು ಸರ್ಕಾರಿ ಶಾಲೆಗಳಿರಬಹುದು ಅಥವಾ ಖಾಸಗಿ ಶಾಲೆಗಳಿರಬಹುದು. ಅದೇ ಸಂದರ್ಭದಲ್ಲಿ ಸರ್ಕಾರವೂ ಸಹ ಮಾತೃಭಾಷಾ ಮಾಧ್ಯಮ ಒಂದನ್ನೇ ನೆಲೆಗೊಳಿಸಬೇಕು. ಅದು ಖಾಸಗಿ ಮತ್ತು ಸರ್ಕಾರಿ ಶಾಲೆಗಳೆರಡಕ್ಕೂ ಸಾಮಾನ್ಯವಾಗಿ ಅನ್ವಯವಾಗುತ್ತದೆ. ಇಂತಹ ಮಾಧ್ಯಮವನ್ನು ಅಳವಡಿಸಿಕೊಂಡ ಪ್ರಾಥಮಿಕ ಶಿಕ್ಷಣದ ಕಡೆಯ ತರಗತಿಯ ಪರೀಕ್ಷೆಯನ್ನು ತಾವೇ ಸಾರ್ವತ್ರಿಕ ಪರೀಕ್ಷೆಯನ್ನಾಗಿ ನಡೆಸಬೇಕು. ಇಲ್ಲಿಯ ಕಲಿಕೆ ಪರಿಣಾಮಕಾರಿ. ಮಾತೃಭಾಷಾ ಮಾಧ್ಯಮದ ಶಿಕ್ಷಣದ ಭಾಗವಾಗಿ ಇಂಗ್ಲಿಷನ್ನು ಸಹ ಒಂದು ಭಾಷೆಯನ್ನಾಗಿ ಕಲಿಯುವ ವ್ಯವಸ್ಥೆ ಇಲ್ಲಿ ಇದ್ದೇ ಇರುತ್ತದೆ. ಇಂತಹ ಕಲಿಕೆ ಕಲಿಕೆಯ ಹಂತದವರೆಗೂ ಪರಿಣಾಮಕಾರಿ. ಅನಂತರದ ಹಂತದಲ್ಲಿ ಒದಗುವ ಉದ್ಯೋಗದ ಪ್ರಶ್ನೆ, ಅದು ಅನಂತರದ ಪ್ರಶ್ನೆ. ಅದರ ಲಭ್ಯತೆ ಮತ್ತು ಅಲಭ್ಯತೆ ಸರ್ಕಾರ ಮತ್ತು ಖಾಸಗಿ ರಂಗದ ಒಳಗೆ ಇರುವ ನೀತಿ ಮತ್ತು ಉದ್ಯೋಗಾವಕಾಶಗಳ ಪ್ರಶ್ನೆಯಾಗಿರುತ್ತದೆ. ಇಲ್ಲಿ ಇನ್ನೊಂದು ವಿಚಾರ ಗಮನಾರ್ಹ ಎನ್ನಿಸುತ್ತದೆ. ಅದು ಕನ್ನಡ ಶಾಲೆಗಳು ಎಂದರೆ ಮಾತೃಭಾಷಾ ಮಾಧ್ಯಮದ ಶಾಲೆಗಳು ಎಂದರ್ಥ. ಕರ್ನಾಟಕದಲ್ಲಿ ಕನ್ನಡೇತರ ಮಾತೃಭಾಷಾ ಮಾಧ್ಯಮದ ಶಾಲೆಗಳು ಇರಲು ಅವಕಾಶವಿರುವುದು ನಿಜವಾದರೂ ಅಂತಹ ಶಾಲೆಗಳ ಸಂಖ್ಯಾ ಪ್ರಮಾಣ ಕಡಿಮೆ. ಅಂತಹ ಶಾಲೆಗಳಲ್ಲಿ ಕನ್ನಡವು ರಾಜ್ಯಭಾಷೆಯಾಗಿರುವುದರಿಂದ ಅದನ್ನು ಒಂದು ಭಾಷಾ ಪತ್ರಿಕೆಯನ್ನಾಗಿ ಕಡ್ಡಾಯಗೊಳಿಸುವುದು ಸಾಧ್ಯವಿದೆ. ಈ ಮೂಲಕ ಕನ್ನಡ ಮಾಧ್ಯಮವನ್ನು ಮತ್ತು ಅನ್ಯಭಾಷಾ ಮಾಧ್ಯಮದಲ್ಲಿ ಕನ್ನಡವನ್ನು ಸಾರ್ವತ್ರಿಕಗೊಳಿಸಬಹುದಾಗಿದೆ. ಈ ಮೂಲಕ ಕನ್ನಡ ಶಾಲೆಗಳಲ್ಲಿ ಮತ್ತು ಕನ್ನಡೇತರ ಶಾಲೆಗಳಲ್ಲಿ ಕನ್ನಡವು ಉಳಿಯುತ್ತದೆ. ಹೀಗೆ ಕನ್ನಡ ಉಳಿದಾಗ ಮಾತ್ರ ಸಾಹಿತ್ಯ, ಸಂಸ್ಕೃತಿ, ಪರಂಪರೆ ಎಲ್ಲವೂ ಉಳಿಯುವುದು ಸಾಧ್ಯ. ಹಾಗಾಗಿ ಎಲ್ಲಾ ಸಂವಾದಗಳಿಗೆ, ಪ್ರಗತಿಗೆ ಪೂರಕವಾದ ಕನ್ನಡ ಉಳಿಯಬೇಕು. ಆಗ ಕನ್ನಡದ ನೆಲ ಗಟ್ಟಿಯಾಗಬೇಕು. ಆ ನೆಲೆಯಲ್ಲಿ ಪಂಪ, ಬಿ.ಎಂ.ಶ್ರೀ. ಮೊದಲಾದ ಅಸಂಖ್ಯ ನುಡಿ ಚಿಂತಕರು ಕನ್ನಡವನ್ನು ಬೆಳೆಸಿದ, ಸಂಗೋಪನೆ ಮಾಡಿದ ಕ್ರಮ ಮಾದರಿಯಾಗಬೇಕು. ಇಲ್ಲವಾದಲ್ಲಿ ಕನ್ನಡ ಇಲ್ಲವಾಗುತ್ತದೆ. ಕನ್ನಡವೇ ಇಲ್ಲವಾದರೆ ಪಿತ್ರಾರ್ಜಿತ ಸ್ವತ್ತನ್ನು ದಕ್ಕಿಸಿಕೊಳ್ಳಲಾರದ, ಅದನ್ನು ಬೆಳೆಸಿಕೊಳ್ಳಲಾರದ ಸ್ವಾಭಿಮಾನಶೂನ್ಯರು ನಾವೆನಿಸಿ, ಸಹಜ ಕಿಮ್ಮತ್ತು ದೂರವಾಗುತ್ತದೆ. ಇದು ಅಭಿಮಾನದ ಪ್ರಶ್ನೆಯಲ್ಲ. ಶತಮಾನಗಳಿಂದ ವಿಕಸನಗೊಂಡು ಬಂದಿರುವ ಕನ್ನಡವನ್ನು ಇನ್ನಷ್ಟು ವಿಕಸನಗೊಳಿಸುವ ಮತ್ತು ಅಂತಹ ಶ್ರೀಮಂತ ಪರಂಪರೆಯಲ್ಲಿ ಅಭಿವೃದ್ಧಿಯ ಗತಿಯನ್ನು ಇನ್ನಷ್ಟು ಚುರುಕುಗೊಳಿಸುವ ವಿವೇಕ. ಈ ಹಿನ್ನೆಲೆಯಲ್ಲಿ ಕನ್ನಡ ಶಾಲೆಗಳು ಉಳಿಯಬೇಕಿದೆ, ಬೆಳೆಯಬೇಕಿದೆ.

ಹೀಗೆ ಕನ್ನಡ ಶಾಲೆಗಳ ಅಥವಾ ಮಾತೃಭಾಷಾ ಮಾಧ್ಯಮದ ಶಾಲೆಗಳ ಅಳಿವು – ಉಳಿವಿನ ಪ್ರಶ್ನೆ ಮೂಲಭೂತವಾಗಿ ಮಾಧ್ಯಮಕೇಂದ್ರಿತ ಪ್ರಶ್ನೆ ಮಾತ್ರವಾಗಿದೆ. ಇದರ ನಿರಾಕರಣೆಯ ಯಾವುದೇ ವಾದಗಳು ಜಾರಿಗೊಳ್ಳುವ ತಂತ್ರಗಳಾಗಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯದ ಬಗೆಗೆ ಕಾಳಜಿಯಿರುವವರು ಆಶಾವಾದಿಗಳಾಗಿ ಹೆಜ್ಜೆ ಇಡುವ ಎಲ್ಲಾ ಅವಕಾಶಗಳು ಲಭ್ಯ ಇವೆ. ಇದು ಬಂಡವಾಳಶಾಹಿ ಪ್ರಜಾಸತ್ತಾತ್ಮಕ ವ್ಯವಸ್ಥೆಯಾಗಿ ಇರುವುದರಿಂದ ಈ ನಡೆ ಕೊಂಚ ಕಠಿಣವಾದರೂ ನಿರೀಕ್ಷಿತ ಗುರಿ ಮುಟ್ಟುವುದು ಸಾಧ್ಯ. ಅದಕ್ಕೆ ಈಗಾಗಲೇ ಪ್ರಸ್ತಾಪಿಸಿರುವಂತೆ ಹದಿನೆಂಟು ವರ್ಷ ವಯಸ್ಸಿಗೆ ಮತ ಚಲಾಯಿಸುವ ಹಕ್ಕನ್ನು ಪಡೆದು ದೇಶದ ಭವಿಷ್ಯವನ್ನು ರೂಪಿಸುವ ಹಲವರಲ್ಲಿ ಕೆಲವರಾದರೂ ಮೊದಲಿಗೆ ಯಾವುದು ಸರಿಯಾದ ಮಾಧ್ಯಮ ಎಂಬ ತಾತ್ವಿಕ ನೆಲೆಯಲ್ಲಿ ಕ್ರಿಯೆ ಮತ್ತು ಚಿಂತನೆಯನ್ನು ವ್ಯಾಪಕಗೊಳಿಸಬೇಕಿದೆ. ಇದು ಸಾಧ್ಯ. ಯಾವುದೂ ಅಸಾಧ್ಯವಲ್ಲ.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ಸಹ ಪ್ರಾಧ್ಯಾಪಕ, ಕನ್ನಡ ಅಧ್ಯಯನ ವಿಭಾಗ
ಸ್ನಾತಕೋತ್ತರ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
ಕೋಲಾರ – ೫೬೩ ೧೦೧

ಕನಸಿನಲ್ಲೂ ಬೆಚ್ಚಿಬೀಳುತ್ತೇನೆ
ಹಣ ತುಂಬಿರುವ ತಿಜೋರಿಯಲಿ
ಭಾವನೆಗಳ ಹೆಣವಿರುತ್ತದೆ
ದುಬಾರಿ ಬೀಗಗಳು ಗೋರಿಯ
ಕಾವಲಿಗಿರುತ್ತವೆ
ಬಾಗಿಲು ತೆರೆದಾಗಲೆಲ್ಲ ವ್ರಣ ತಿಂದ
ನೊಣಗಳು ಕಿವಿ ತುಂಬ ಕೂಗುತ್ತವೆ
ಬೀಗಗಳನೆಲ್ಲ ಒಡೆದುಹಾಕಬೇಕು
ನಾನು ನನ್ನನ್ನು ತಿಜೋರಿಗಳಿಂದ
ಕಾಪಾಡಿಕೊಳ್ಳಬೇಕು !

**ಗಣೇಶ ಹೊಸ್ಮನೆ**
ಜಾಣ್ಮನೆ – ೫೮೧ ೩೧೫ ಶಿರಸಿ (ಉ.ಕ.)

## ಆಫ್ಘಾನಿಸ್ತಾನ : ಅನಿಶ್ಚಿತತೆಯ ಮುಂದುವರಿಕೆ

**ಮೂ**ರೂವರೆ ದಶಕಗಳಿಂದ ವಿದೇಶೀ ಆಕ್ರಮಣ, ಅಂತರ್ಯುದ್ಧ, ಹಿಂಸಾಚಾರಗಳಲ್ಲಿ ತೊಳಲಾಡುತ್ತಿರುವ ಆಫ್ಘಾನಿಸ್ತಾನಕ್ಕೆ ಮುಕ್ತಿಯೇ ಇಲ್ಲವೆ ? ಬೆಳಗಾದರೆ ಗುಂಡಿನ ದಾಳಿಯ ಸದ್ದನ್ನೇ ಆಲಿಸುತ್ತಿರುವ, ನಿರಂತರ ಸಂಘರ್ಷದಿಂದ ಬೇಸತ್ತಿರುವ ಜನಸಾಮಾನ್ಯರಿಗೆ ಉಳಿಗಾಲ ಎಂದು ? ಇಷ್ಟು ವರ್ಷಗಳು ನಡೆದಿರುವ ಬಡಿದಾಟದಿಂದ ದೇಶದಲ್ಲಿ ಉಳಿದಿರುವುದೇನು ? ಹೀಗೆ ಇಂಥವೇ ಪ್ರಶ್ನೆಗಳೂ ಅಫ್ಘನ್ ಜನತೆ ಹಾಗೂ ಜಗತ್ತಿನ ದೇಶಗಳ ಮುಂದೆ ಇವೆ. ದೇಶವನ್ನು ೨೦೦೧ರಲ್ಲಿ ಆಕ್ರಮಿಸಿಕೊಂಡ ಅಮೆರಿಕದ ಸೇನೆಗಳು ವಾಪಸ್ಸಾಗುವ ಗಡುವು ಎಂದೋ ಮುಗಿದು ಹೋಗಿದೆ. ಈ ವರ್ಷದ ಕೊನೆಯಲ್ಲಾದರೂ ಅಮೆರಿಕ ಸೇನೆ ಹಿಂದಿರುಗುವುದೇ ಎನ್ನುವುದು ಅನುಮಾನವಾಗಿದೆ. ಏಕೆಂದರೆ ಅಮೆರಿಕ ತನ್ನ ಸೇನೆಯನ್ನು ಆಫ್ಘಾನಿಸ್ತಾನದಲ್ಲಿ ಖಾಯಂ ಆಗಿ ಉಳಿಸಿಕೊಳ್ಳುವ ದೀರ್ಘಾವಧಿ ಒಪ್ಪಂದಕ್ಕೆ ಬರಲು ಸನ್ನಾಹ ನಡೆಸಿದೆ. ಇದಕ್ಕೆ ಅಮೆರಿಕ ತಾನೇ ಅಧಿಕಾರ ಸ್ಥಾನದಲ್ಲಿ ಕೂರಿಸಿರುವ ಹಮೀದ್ ಕರ್ಜೈ ಇವರ ವಿರೋಧವಿದೆ. ಆಫ್ಘಾನಿಸ್ತಾನದ ಸರಕಾರ ರಹಸ್ಯವಾಗಿ ತಾಲಿಬಾನ್ ಸಂಘಟನೆಯ ನಾಯಕರುಗಳ ಜೊತೆ ಸಂಪರ್ಕ ಬೆಳೆಸಿ ಸಂಧಾನಕ್ಕೆ ಬರಲು ಪ್ರಯತ್ನ ನಡೆಸಿದೆ ಎಂಬುದು ಅಮೆರಿಕದ ಆರೋಪ. ಅಮೆರಿಕದ ಸೇನೆ ಉಪಸ್ಥಿತಿ ಇದ್ದಾಗ್ಯೂ ಅದು ರಾಜಧಾನಿ ಕಾಬೂಲಿನ ಸುತ್ತಮುತ್ತ ಪ್ರದೇಶಕ್ಕೆ ಮಾತ್ರ ಸೀಮಿತವಾಗಿ ದೇಶದ ಇತರ ಭಾಗಗಳಲ್ಲಿ ತಾಲಿಬಾನ್ ಇಸ್ಲಾಮಿಕ್ ಮೂಲಭೂತವಾದಿಗಳ ಪ್ರಾಬಲ್ಯ ಅಧಿಕವಾಗಿದೆ. ಸಾಕಷ್ಟು ಪ್ರದೇಶಗಳು ತಾಲಿಬಾನ್ ಅಧೀನದಲ್ಲಿವೆ. ಪಾಕಿಸ್ತಾನದಲ್ಲೂ ಪ್ರಬಲವಾಗಿರುವ ಈ ಸಂಘಟನೆ ಅಮೆರಿಕಾಗೆ ದೊಡ್ಡ ತಲೆನೋವಾಗಿ ಪರಿಣಮಿಸಿದೆ.

೧೯೨೬ರಿಂದ ಸುಮಾರು ಅರ್ಧ ಶತಮಾನಗಳ ಕಾಲ ಆಳ್ವಿಕೆ ನಡೆಸಿದ ರಾಜಶಾಹಿ ಆಡಳಿತ ೧೯೭೩ರಲ್ಲಿ ಕ್ಷಿಪ್ರಕ್ರಾಂತಿಯಿಂದಾಗಿ ಪತನಗೊಂಡಾಗಿನಿಂದ ದೇಶದಲ್ಲಿ ಅರಾಜಕತೆ, ಅಂತರ್ಯುದ್ಧ ಪರಿಸ್ಥಿತಿ ಮುಂದುವರಿದಿದೆ. ಪರ್ವತ ಪ್ರದೇಶವಾಗಿರುವ ಆಫ್ಘಾನಿಸ್ತಾನದಲ್ಲಿರುವ ಬೆಟ್ಟದ ಶಿಖರಗಳಷ್ಟೇ ಸಂಖ್ಯೆಯಲ್ಲಿ ನಾನಾ ಬುಡಕಟ್ಟುಗಳೂ ಇವೆ. ಇವನ್ನೆಲ್ಲ ಒಟ್ಟುಗೂಡಿಸುವುದು ಸಾಮಾನ್ಯ ವಿಷಯವಲ್ಲ. ಆದರೂ ೧೭೪೭ರಿಂದ ಆಫ್ಘಾನಿಸ್ತಾನ, ಬ್ರಿಟನ್ ಮತ್ತು ರಷ್ಯಾಗಳ ದಾಳಿಯನ್ನು ವಿರೋಧಿಸಿ ಸ್ವತಂತ್ರ ರಾಷ್ಟ್ರವಾಗಿದ್ದುದು ಅಚ್ಚರಿಯ ಸಂಗತಿ. ರಾಜಶಾಹಿ ಅಳಿದ ನಂತರ ಅಧಿಕಾರದಲ್ಲಿದ್ದ ಆಡಳಿತಕ್ಕೆ ಬೆಂಬಲ ನೀಡಿದ ಸೋವಿಯೆತ್ ಸೇನೆ ಪ್ರವೇಶದಿಂದ ಪ್ರಾರಂಭವಾದ ಅಶಾಂತಿಪರ್ವ ಇವತ್ತಿಗೂ ಮುಂದುವರಿಯುತ್ತಿದೆ. ಶೀತಯುದ್ಧದ ಆ ದಿನಗಳಲ್ಲಿ ಆಫ್ಘಾನಿಸ್ತಾನವು ಒಂದು ಕಣವಾಗಿ ಪರಿಣಮಿಸಿದ್ದು ದುರಂತಕ್ಕೆ ನಾಂದಿಯಾಯಿತು. ವಿದೇಶೀ ಸೈನ್ಯವನ್ನು ಮುಜಾಹಿದ್ದೀನ್‌ಗಳಿಗೆ ಅಮೆರಿಕ ಸರಬರಾಜು ಮಾಡಿದ ಶಸ್ತ್ರಾಸ್ತ್ರಗಳು ಮುಂದೆ ಅದಕ್ಕೇ ಮುಳುವಾಗಿ ಪರಿಣಮಿಸಿತು. ಏಕೆಂದರೆ ಈ ಮುಜಾಹಿದ್ದೀನ್‌ಗಳ ಒಂದು ಭಾಗವೇ ಇಸ್ಲಾಮಿಕ್ ಮೂಲಭೂತವಾದಿ ತಾಲಿಬಾನ್. ಹತ್ತು ವರ್ಷಗಳಾದ ಮೇಲೆ ಅಪಾರವಾದ ನಷ್ಟ ಅನುಭವಿಸಿದ ಸೋವಿಯೆತ್ ಸೇನೆ ಸ್ವದೇಶಕ್ಕೆ ಮರಳಿತು. ಸುಮಾರು ೧೫,೦೦೦ ಸೋವಿಯೆತ್ ಸೈನಿಕರು ಈ ಪ್ರದೇಶದಲ್ಲಿ ಹತರಾದರೆಂದು ಅಂದಾಜು. ಹಾಗಿರುವಾಗ ನಾಗರಿಕರ ಸಾವು ನೋವುಗಳು ಅದರ ಹತ್ತು ಪಟ್ಟಾಗಿರಲು ಸಾಕು ಎಂದು ಸುಲಭವಾಗಿ ಅಂದಾಜು ಮಾಡಬಹುದು. ತದನಂತರ ಮತ್ತೆ ಅಸ್ಥಿರತೆ. ೧೯೯೬ರಲ್ಲಿ ತಾಲಿಬಾನ್‌ಗಳಿಂದ ಅಧಿಕಾರ ಗ್ರಹಣ. ಈ ತಾಲಿಬಾನ್‌ಗಳು ಜನರ ಮೇಲೆ ನಡೆಸಿದ ದಬ್ಬಾಳಿಕೆ, ದೌರ್ಜನ್ಯಗಳ ವಿವರಗಳು ಇಲ್ಲಿ ಅಪ್ರಸ್ತುತ. ಇಸ್ಲಾಮಿಕ್ ಮೂಲಭೂತವಾದಿ ಸಂಘಟನೆಗಳಾದ ಅಲ್‌ಖೈದಾದಂಥವುಗಳಿಗೆ ಆಫ್ಘಾನಿಸ್ತಾನ ಪ್ರಶಸ್ತವಾದ ತಾಣ. ನ್ಯೂಯಾರ್ಕ್‌ನ ವರ್ಲ್ಡ್ ಟ್ರೇಡ್ ಸೆಂಟರ್‌ನ ಮೇಲೆ ೨೦೦೧ರ ಸೆಪ್ಟೆಂಬರ್ ೧೧ರಂದು ಅಲ್‌ಖೈದಾ ನಡೆಸಿದ ವೈಮಾನಿಕ ದಾಳಿಯ ನಂತರ ಅವರನ್ನು ಬಗ್ಗುಬಡಿಯಲು ಅಮೆರಿಕದ ಪ್ರವೇಶ. ತಾಲಿಬಾನ್ ಆಡಳಿತದ ಅಂತ್ಯ. ಇವೆಲ್ಲ ಈಗ ಇತಿಹಾಸ. ಇಕ್ಕಳದಲ್ಲಿ ಸಿಕ್ಕಿಕೊಂಡಿರುವ ಅಮೆರಿಕದ ಸೇನೆಗೆ ಕಾಲ್ತೆಗೆಯಲು ಮಾರ್ಗವೇ ಕಾಣದಾಗಿದೆ. ಒಂದು ಹಂತದಲ್ಲಿ ಅಮೆರಿಕ ಕೂಡ ತಾಲಿಬಾನ್ ಉಗ್ರರೊಂದಿಗೆ ಸಂಪರ್ಕ ಸಾಧಿಸಿ, ಪಶ್ಚಿಮ ಏಶಿಯದ ಕಾತಾರ್‌ನಲ್ಲಿ ಸುದೀರ್ಘ ಸಂಧಾನ ನಡೆಸಿದರೂ ಫಲಕಾರಿಯಾಗಲಿಲ್ಲ.

೨೦೧೪ರ ಕೊನೆಯ ವೇಳೆಗೆ ಅಮೆರಿಕ ಸೇನೆಗಳು ವಾಪಸ್ಸಾಗಬೇಕೆಂದು ಅಮೆರಿಕದಲ್ಲೇ ಹೆಚ್ಚು ಒತ್ತಡ ಇದೆ. ಅಧ್ಯಕ್ಷ ಬರಾಕ್ ಒಬಾಮಾ ಮೊದಲ ಬಾರಿ ಅಧಿಕಾರ ವಹಿಸಿಕೊಂಡಾಗಲೆ ಆಫ್ಘಾನಿಸ್ತಾನದಿಂದ ಸೈನ್ಯವನ್ನು ತೆರವುಗೊಳಿಸುವ ಆಶ್ವಾಸನೆ ನೀಡಿದ್ದರು. ಈಗ ಎರಡನೇ ಅವಧಿಯಲ್ಲೂ ಅದು ಆಶ್ವಾಸನೆಯಾಗಿಯೇ ಉಳಿಯುವುದೇ ನೋಡಬೇಕು. ಇಪ್ಪತ್ತೊಂದನೆ ಶತಮಾನದಲ್ಲಿ ಅಮೆರಿಕ ಆಕ್ರಮಣ ನಡೆಸಿದ ಆಫ್ಘಾನಿಸ್ತಾನ ಮತ್ತು ಇರಾಕ್ ಎರಡೂ ದೇಶಗಳ ದುಸ್ಥಿತಿ ಅವರ್ಣನೀಯ. ಎರಡೂ ದೇಶಗಳಲ್ಲಿ ಒಂದಲ್ಲ ಒಂದು ಆತ್ಮಾಹುತಿ ದಾಳಿಗಳು ನಡೆಯುತ್ತಲೇ ಇವೆ. ಜನಜೀವನ ದುಸ್ತರವಾಗಿದೆ. ಇದಕ್ಕೆ ಕೊನೆ ಯಾವಾಗ ಎನ್ನುವುದು ಪ್ರಶ್ನೆಯಾಗೇ ಉಳಿದಿದೆ.

## ವಿಶ್ವವಾಣಿಜ್ಯ ಸಂಸ್ಥೆಗೆ ಭಾರತದ ವಿರುದ್ಧ ಅಮೆರಿಕ ದೂರು

ಜಾಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳ ಹರಿವಿಗೆ ಮುಕ್ತ ಅವಕಾಶ ಇವೆಲ್ಲ ಆಗಿ ದಶಕಗಳೇ ಆಗಿವೆ. ಅದರ ಪರಿಣಾಮವಾಗಿ ಭಾರತದ ನಗರಗಳಲ್ಲಿ ಕಾಣಿಸಿಕೊಂಡಿರುವ ಮಾಲ್‌ಗಳಲ್ಲಿ ತುಂಬಿ ತುಳುಕುತ್ತಿರುವ ವಿದೇಶೀ ಸರಕುಗಳು ಭಾರತದ ಸಣ್ಣ ಕೈಗಾರಿಕೆಗಳನ್ನು ಮೂಲೆಗುಂಪಾಗಿಸಿರುವುದು ಹೊಸ ಸಂಗತಿ ಏನಲ್ಲ. ಕೆಲ್ಲೋಗ್ ಉಪಾಹಾರದಿಂದ ಹಿಡಿದು ಆರೆಂಜ್ ಜ್ಯೂಸ್‌ವರೆಗೆ ಎಲ್ಲ ಬಗೆಯ ಅಮೆರಿಕನ್ ಬ್ರಾಂಡ್‌ಗಳು ಈಗ ಲಭ್ಯ. ಮ್ಯಾಕ್ ಡೊನಾಲ್ಡ್, ಪೀಜಾ ಹಟ್, ಸಬ್‌ವೇ ಮುಂತಾದ ಜಂಕ್‌ಫುಡ್ ತಿನಿಸುಗಳ ಮಳಿಗೆಗಳು ನಮ್ಮ ನಗರಗಳಲ್ಲಿ ರಾರಾಜಿಸುತ್ತಿವೆ. ಇನ್ನು ವಾಲ್‌ಮಾರ್ಟ್ ಪ್ರವೇಶ ಬಾಕಿ ಇದೆ. ಅಮೆರಿಕದ ಕಡೆ ಮುಖ ಮಾಡಿರುವ ಒಂದು ವಿಭಾಗದ ಜನರನ್ನು ಇವು ತಣಿಸಿದರೆ, ಉಳಿದ ಜನಸಾಮಾನ್ಯರ ಹೊಟ್ಟೆಯ ಮೇಲೆ ತಣ್ಣೀರು ಬಟ್ಟೆಯೇ ಗತಿ. ಮುಕ್ತ ವಾಣಿಜ್ಯ ಅವಕಾಶ ಇದು ಅಮೆರಿಕದ ಮಂತ್ರ, ತಂತ್ರ. ದೇಶೀ ಉತ್ಪಾದನೆಯ ಮೇಲೆ ಇದರ ಪರಿಣಾಮ ಏನಾದೀತು ಎನ್ನುವುದನ್ನು ಯೋಚಿಸದೆ ಕಾಂಗ್ರೆಸ್‌ನ ನರಸಿಂಹರಾವ್ ಸರಕಾರ ಡಂಕಲ್ ಪ್ರಸ್ತಾವಕ್ಕೆ ಸಹಿ ಲಗತ್ತಿಸಿದರು. ಅದರ ಅಂಗವಾಗಿ ಹುಟ್ಟಿಕೊಂಡಿರುವ ಸಂಸ್ಥೆಯೇ ವಿಶ್ವವಾಣಿಜ್ಯ ಸಂಸ್ಥೆ. ಇಂಗ್ಲಿಷಿನಲ್ಲಿ ಸಂಕ್ಷೇಪವಾಗಿ 'ಡಬ್ಲ್ಯುಟಿಓ.' ವಿಶ್ವವ್ಯಾಪಾರ ನಿಯಂತ್ರಣ, ಪೇಟೆಂಟ್‌ಗಳ ರಕ್ಷಣೆ ಮುಂತಾದುವು ಇದರ ವ್ಯಾಪ್ತಿಗೆ ಬರುತ್ತವೆ. ಹಿಂದೊಮ್ಮೆ ನಮ್ಮ ಭಾರತದ ಬಾಸುಮತಿ ಅಕ್ಕಿ, ಬೇವಿನ ಉತ್ಪನ್ನಗಳಿಗೆ ಅಮೆರಿಕ ಪೇಟೆಂಟ್ ಪಡೆಯಲು ನಡೆಸಿದ ಯತ್ನ ಎಲ್ಲರಿಗೂ ತಿಳಿದಿದೆ. ಒಂದಲ್ಲ ಒಂದು ದಿನ ಈ ಪೇಟೆಂಟ್ ಎನ್ನುವುದು ನಮಗೆ ಮುಳುವಾಗಲಿದೆ.

ಈಗ ಬಂದಿರುವುದು ಸೂರ್ಯಶಕ್ತಿ ಬಳಕೆಯಲ್ಲಿ ಬಳಸುವ ಸೋಲಾರ್ ಪ್ಯಾನಲ್‌ಗಳಿಗೆ ಸಂಬಂಧಿಸಿದ ವಿವಾದ. ಭಾರತದಲ್ಲಿ ವಿದ್ಯುಚ್ಛಕ್ತಿ ಉತ್ಪಾದನೆಗೆ ಸೌರಶಕ್ತಿಯ ಬಳಕೆ ಈಚಿನ ವರ್ಷಗಳಲ್ಲಿ ವ್ಯಾಪಕವಾಗಿದೆ. ಬಾಕಿ ಇಂಧನಗಳಿಗೆ ಇದು ಪರ್ಯಾಯ. ಇದೊಂದು ಬಗೆಯಲ್ಲಿ ಅಗ್ಗವೂ ಹೌದು. ಒಮ್ಮೆ ಪ್ಯಾನಲ್‌ಗಳ ಅಳವಡಿಕೆಗೆ ಹಣ ಹೂಡಿದರೆ ಉಳಿದದ್ದೆಲ್ಲ ಪ್ರಕೃತಿದತ್ತ. ಭಾರತದ ನ್ಯಾಷನಲ್ ಸೋಲಾರ್ ಮಿಶನ್ ಸಂಸ್ಥೆಯು ಸೌರಶಕ್ತಿ ಬಳಕೆಯ ಉಸ್ತುವಾರಿ ನೋಡಿಕೊಳ್ಳುತ್ತಿದೆ. ಯೋಜನೆಯ ಮೊದಲ ಹಂತದಲ್ಲಿ ಅಮೆರಿಕದಿಂದ ಈ ಪ್ಯಾನಲ್‌ಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಈಗ ಭಾರತದಲ್ಲೇ ಸಾಕಷ್ಟು ಸೋಲಾರ್ ಪ್ಯಾನಲ್‌ಗಳು ತಯಾರಾಗುತ್ತಿವೆ. ೭೫೦ ಮೆಗಾವಾಟ್‌ಗಳ ಎರಡನೇ ಹಂತದ ಯೋಜನೆಗೆ ಅರ್ಧದಷ್ಟು ಭಾಗಕ್ಕೆ ಭಾರತೀಯ ಪ್ಯಾನಲ್‌ಗಳನ್ನು ಬಳಸಲು ಕಡ್ಡಾಯವಾಗಿಸಿರುವುದು ಅಮೆರಿಕದ ಕಣ್ಣು ಕೆಂಪಾಗಿಸಿದೆ. ಅಮೆರಿಕದ ವಾಣಿಜ್ಯ ಪ್ರತಿನಿಧಿ ನ್ಯಾಷನಲ್ ಸೋಲಾರ್ ಮಿಶನ್‌ನ ನೀತಿಗೆ ತೀವ್ರವಾದ ವಿರೋಧ ವ್ಯಕ್ತಪಡಿಸಿದ್ದಾರೆ. ಭಾರತದ ಈ ನಿರ್ಧಾರದಿಂದ ಅಮೆರಿಕದ ಸೋಲಾರ್ ಉದ್ಯಮಕ್ಕೆ ಸುಮಾರು ೧೧೯ ಮಿಲಿಯ ಡಾಲರುಗಳು ನಷ್ಟವಾಗುವುದಲ್ಲದೆ, ಸುಮಾರು ೧೦,೦೦೦ ಮಂದಿ ಉದ್ಯೋಗ ಕಳೆದುಕೊಳ್ಳುತ್ತಾರೆಂಬುದೇ ಅಮೆರಿಕದ ದೂರು. ಭಾರತದಲ್ಲೇ ಈ ಪ್ಯಾನಲ್‌ಗಳು ತಯಾರಾಗುತ್ತಿರುವಾಗ ಅಮೆರಿಕದ ಹಂಗೇಕೆ ? ಇದು ಪ್ರಶ್ನೆ. ಭಾರತದ ವಾಣಿಜ್ಯ ಸಚಿವರೇನೋ ಈ ವಿಚಾರದಲ್ಲಿ ದೃಢನಿರ್ಧಾರ ಪ್ರಕಟಿಸಿದ್ದಾರೆ. ಭಾರತದ ಉದ್ಯಮಗಳ ರಕ್ಷಣೆ ಸರಕಾರದ ಜವಾಬ್ದಾರಿ. ಅಮೆರಿಕ ಮಾತ್ರ ತಮ್ಮ ಉದ್ಯಮ ಕಾಪಾಡಿಕೊಳ್ಳಲು ಮುಂದಾಗಬಹುದಾದರೆ ಭಾರತ ಏಕೆ ಮಾಡಿಕೊಳ್ಳಬಾರದು. ಅಮೆರಿಕ ವಾಣಿಜ್ಯ ವ್ಯವಹಾರಗಳಲ್ಲಿ ಯಾವತ್ತೂ ತನ್ನ ಹಿತಾಸಕ್ತಿಗಳಿಗೆ ಕುಂದುಬಾರದ ಹಾಗೆ ನೋಡಿಕೊಳ್ಳುತ್ತದೆ, ಇತರರು ಮಾತ್ರ ಹಾಗೆ ಮಾಡಿದಾಗ ಹುಯಿಲೆಬ್ಬಿಸುತ್ತದೆ. ತೀವ್ರವಾಗಿ ಈ ತಾರತಮ್ಯ ವಿರೋಧಿಸದಿದ್ದರೆ ಉಳಿಗಾಲವಿಲ್ಲ.

ಸೀಯಾರ್ಕೆ

# ಧರ್ಮ – ರಾಜಕಾರಣದ ಅಪವಿತ್ರ ಮೈತ್ರಿ

**ವಿಶ್ವಾರಾಧ್ಯ ಸತ್ಯಂಪೇಟೆ**

'ಇಟ್ಟೆಯ ಹಣ್ಣು ತಿಂದ ನರಿ ಸೃಷ್ಟಿಯೆ ತಿರುಗಿತು' ಎಂಬಂತೆ ಮೌಢ್ಯ ನಿಷೇಧ – ೨೦೧೩ರ ವಿಧೇಯಕವನ್ನು ಬೆಳಗಾವಿಯ ಅಧಿವೇಶನದಲ್ಲಿ ಮಂಡಿಸುತ್ತೇನೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದ್ದೊಂದೆ ತಡ ಅಂಡು ಸುಟ್ಟ ಬೆಕ್ಕಿನಂತೆ ಸಂಘಪರಿವಾರಿಗಳು, ಅರ್ಚಕರು, ಭಟ್ಟರು, ಶಾಸ್ತ್ರಿಗಳು, ಕುಲ್ಕರ್ಣಿಗಳು, ಅಯ್ಯಗಳು ಹಾಗೂ ಬಟ್ಟೆಗೆಟ್ಟವರು ನೆಲ ಮುಗಿಲೊಂದಾಗುವಂತೆ ಅರಚಾಡುತ್ತಿದ್ದಾರೆ. ಸನಾತನ, ಪುರಾತನವಾಗಿರುವ, ಕಾಲಾನುಕಾಲದಿಂದ ನಡೆಸಿಕೊಂಡು ಬಂದಿರುವ ತಮ್ಮ ಅನಾಚಾರದ ನಡಾವಳಿಗಳಿಗೆ ಎಲ್ಲಿ ಬ್ರೇಕ್ ಬೀಳುತ್ತದೋ ಎಂದು ದಿಗಿಲುಗೊಂಡಿದ್ದಾರೆ. ಹೇಳಿ ಕೇಳಿ ಮುಖ್ಯಮಂತ್ರಿ ಸಿದ್ದರಾಮಯ್ಯ ಮೌಢ್ಯಗಳನ್ನು ನಂಬದವರು. ಮುಖ್ಯಮಂತ್ರಿ ಖುರ್ಚಿಯಲ್ಲಿ ಕುಳಿತ ಬಹುತೇಕ ಮುಖ್ಯಮಂತ್ರಿಗಳು ಚಾಮರಾಜನಗರಕ್ಕೆ ಹೋಗಲು ಹಿಂಜರಿಯುತ್ತಲೇ ಬಂದಿದ್ದ ಸಂದರ್ಭದಲ್ಲಿ ಅವರು ಆ ನಗರಕ್ಕೆ ಹೋಗಿ ಬಂದು ತಮ್ಮ ದಾಡಸಿತನವನ್ನು ವ್ಯಕ್ತಪಡಿಸಿದವರು. ಕಾಂಗ್ರೆಸ್ ಸರಕಾರ ಅಧಿಕಾರಕ್ಕೆ ಬಂದ ಕೆಲವೆ ತಿಂಗಳುಗಳಲ್ಲಿ ಬಜೆಟ್ ಮಂಡಿಸಲು ಹೊರಟಾಗ ಅವರನ್ನು ಕಾಣಲು ಬಂದ ಕಾವಿಧಾರಿಯೊಬ್ಬನಿಗೆ ಕ್ಯಾರೆ ಅನ್ನದೆ ಮುಂದೆ ನಡೆದು ಹೋದವರು.

ಇಂಥ ವಿಚಾರವಾದಿ ಮುಖ್ಯಮಂತ್ರಿ ಸಿಗುವುದು ಅಪರೂಪ. ಹಾಗಂತ ಸಿದ್ದರಾಮಯ್ಯ ಎಲ್ಲವುಗಳಲ್ಲೂ ಸಂಪೂರ್ಣ ಅಪರಂಜಿಯಂಥ ವ್ಯಕ್ತಿತ್ವ ಎಂದು ನಾನಿಲ್ಲಿ ಹೇಳಲಾರೆ. ಮೌಢ್ಯಗಳ ಮಾರಿಯನ್ನು ಹೊಡೆದೋಡಿಸುವ ನಿಟ್ಟಿನಲ್ಲಿ ಸೂಕ್ತವಾದ ಕ್ರಮ ಕೈಗೊಳ್ಳಬಹುದಾದ ಮುಖ್ಯಮಂತ್ರಿಯೆಂದು ಮಾತ್ರ ಹೇಳಬಲ್ಲೆ. ಈ ಸಂಗತಿ ನನಗಿಂತಲೂ ಸ್ಪಷ್ಟವಾಗಿ ಸಂಘ ಪರಿವಾರಿಗಳಿಗೆ ಹಾಗೂ ಸನಾತನವಾದಿಗಳಿಗೆ ಹೆಚ್ಚು ಮನದಟ್ಟಾಗಿದೆ. ಆದ್ದರಿಂದಲೇ ಅವರಿಗೆ ಸಿದ್ದರಾಮಯ್ಯ ತರಬಯಸುವ ವಿಧೇಯಕದಲ್ಲಿ ತಾವೆಲ್ಲ ಸುಟ್ಟು ಕರಕಲಾಗಿ ಹೋಗುತ್ತೇವೋ ಎಂಬ ಭಯ ಕಾಡತೊಡಗಿದೆ.



ಸಮಾಜದ ಜನಗಳಿಗೆ ತಿಳುವಳಿಕೆ ನೀಡಿ, ಅವರ ಜ್ಞಾನದ ಕ್ಷಿತಿಜವನ್ನು ವಿಸ್ತರಿಸಬೇಕಾದ ಕೆಲ ಪತ್ರಿಕೆಗಳು, ಟಿವಿ ಚಾನಲ್‌ಗಳೂ ಸಹ ಕುತಂತ್ರದಿಂದ ಜನರಲ್ಲಿ ಗೊಂದಲ ಮೂಡಿಸುವ ಹೇಳಿಕೆಗಳನ್ನು ಪ್ರಕಟಿಸುತ್ತಿವೆ. ೨೦೧೩ರ ಮೌಢ್ಯ ನಿಷೇಧದ ಕಾನೂನು ಜಾರಿಗೆ ಬಂದರೆ ನಮ್ಮ ನಮ್ಮ ಮನೆಗಳಲ್ಲೂ ಪೂಜೆ – ಪುನಸ್ಕಾರ ಮಾಡುವಂತಿಲ್ಲ, ಹೆಂಡತಿಗೆ ಗಂಡ ತಾಳಿ ಕಟ್ಟುವಂತಿಲ್ಲ. ಹಣೆಗೆ ಕುಂಕುಮ, ವಿಭೂತಿ, ನಾಮಗಳನ್ನು ಬಳಿದುಕೊಳ್ಳುವಂತಿಲ್ಲ; ನಮ್ಮ ನಮ್ಮ ಆಚಾರ–ವಿಚಾರಗಳನ್ನು ಅನುಸರಿಸುವಂತಿಲ್ಲ ಎಂದು ಗುಮ್ಮವನ್ನು ಬಿಡುತ್ತಿವೆ. ಬ್ರಾಹ್ಮಣೀಕರಣಗೊಂಡ ಪತ್ರಕರ್ತರಂತೂ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹಿಂದುಗಳ ನಂಬಿಕೆಯನ್ನು ಒಡೆಯುವ ಕುತಂತ್ರವೆಂದು ಬೊಬ್ಬೆ ಹೊಡೆದಿದ್ದಾರೆ.

ಸರಕಾರಿ ಶಾಲಾ ಕಾಲೇಜುಗಳಲ್ಲಿ ಶಾರದೆಯ ಪೂಜೆ ಮಾಡುವಂತಿಲ್ಲ; ದೇವಸ್ಥಾನಗಳಲ್ಲಿ ಗಂಟೆ ಬಾರಿಸುವಂತಿಲ್ಲ; ಪೂಜೆಯ ನಂತರ ತೀರ್ಥ ಕೊಡಬಾರದು; ಮುಂದೊಂದು ದಿನ ಸಪ್ತಪದಿ ತುಳಿಯದೆ ರಿಜಿಸ್ಟರ್ ಮದುವೆ ಮಾತ್ರ ಮಾಡಿಕೊಳ್ಳಬೇಕು; ಗಂಡ ಬೇಡ, ಮಗು ಮಾತ್ರ ಬೇಕು; ಕನ್ನಡ ರಾಜ್ಯೋತ್ಸವದಂದು ತಾಯಿ ಭುವನೇಶ್ವರಿ ಅನ್ನಬೇಡಿ ಅಂತಲೂ ಹೇಳಿಬಿಡಬಹುದು; – ಎಂದೆಲ್ಲ ಹೇಳಿ ರಾಜ್ಯದ ಜನತೆಯನ್ನು ಗೊಂದಲದಲ್ಲಿ ಕೆಡವುವ ಪತ್ರಿಕಾ ಬರಹಗಾರರಿದ್ದಾರೆ.

ಇಂಥ ಬರಹಗಾರರ ಮುಖ್ಯ ಉದ್ದೇಶವೆಂದರೆ ಪಟ್ಟಭದ್ರಶಕ್ತಿಗಳು ಎಂದಿನಂತೆ ಮುಂದೆಯೂ ಅನೂಚಾನವಾಗಿ ವಿರಾಜಮಾನವಾಗಿ ಈ ದೇಶದ ಜನಗಳ ತಲೆಯನ್ನು ಆಳುತ್ತಿರಲಿ ಎಂಬುದು. ತಲೆಯಲ್ಲಿ ಮಿದುಳಿರುವ, ಯಾವುದೇ ಕೆಲಸ ಮಾಡಬೇಕಾದರೂ ವಿಚಾರಿಸಿ ಅಳೆದು ತೂಗಿ ನೋಡಿ ಅದನ್ನು ಕಾರ್ಯಗತಮಾಡುವ ತಲೆಗಳಿಗಿಂತ ಎಲ್ಲದಕ್ಕೂ ಹೌದೆಂದು ತಲೆಹಾಕುವ ಕೋಲೆಬಸವಗಳು ಇದ್ದರೆ ತಮ್ಮ ಮೋಸದ ಕೆಲಸವನ್ನು ಸುಲಭವಾಗಿ ಮಾಡಬಹುದು ಎಂಬ ಹಿಕಮತ್ತು ಈ ಅವಿವೇಕಿಗಳದು. ಆತ್ಮಸ್ಥೈರ್ಯವಿಲ್ಲದ, ಬದುಕಿದ್ದೂ ಸತ್ತಂತಿರುವ, ಪ್ರತಿಯೊಂದಕ್ಕೂ ತಮ್ಮ ದೈವವೆಂದು ನಂಬಿ ಕುಳಿತುಕೊಂಡಿರುವ ಜೀವಿಗಳನ್ನು ಇನ್ನೂ ಹೈರಾಣದಲ್ಲಿ ಸಿಲುಕಿಸಿ

**ಧಾರ್ಮಿಕ ಮುಖಂಡರ ಹಾಗೆ ಕೆಲವು ರಾಜಕಾರಣಿಗಳೂ ಸಹ ಮೌಢ್ಯ ನಿವಾರಣೆ ವಿಧೇಯಕದ ವಿರುದ್ಧ ತಮ್ಮ ತೀವ್ರ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮ ದೇಶದ ಬಹುತೇಕ ರಾಜಕಾರಣಿಗಳು ಹಾಗೂ ಧಾರ್ಮಿಕ ನಾಯಕರು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಬಹುಕಾಲದಿಂದಲೂ ಇವರೀರ್ವರ ಕೌಲುಕೂಟ ನಮ್ಮ ದೇಶದ ಜನರ ಮಿದುಳು ಹಾಗೂ ಮನಸ್ಸನ್ನು ಆಳುತ್ತ ಬಂದಿದೆ. ಯಾವುದೇ ರಾಜಕಾರಣಿ ಚುನಾವಣೆಯಲ್ಲಿ ಗೆಲ್ಲುವುದಕ್ಕಾಗಿ ಮೊದಲು ಹಾಗೂ ಗೆದ್ದ ನಂತರ ಭೇಟಿ ಕೊಡುವುದು ಧಾರ್ಮಿಕ ಸ್ಥಳಗಳಿಗೆ. ಆ ಧಾರ್ಮಿಕ ಸ್ಥಳಕ್ಕೆ ಏನಾದರೂ ಹಣ ಸಹಾಯ ಮಾಡಿದರೆ ಸಾಕು ಆಯಾ ಜನಾಂಗದವರನ್ನು ಸಂತೃಪ್ತಿಗೊಳಿಸಬಹುದೆಂದು ಆತ ಭಾವಿಸಿದ್ದಾರೆ. ದೇವಸ್ಥಾನಕ್ಕೆ ಏನಾದರೂ ಸಹಾಯ ಒದಗಿಸಿದರೆ ಹಿಂದುಗಳಿಗೆ, ಮಸೀದಿಗಳಿಗೆ ಸಹಾಯ ಮಾಡಿದರೆ ಮುಸ್ಲಿಂರಿಗೆ, ಚರ್ಚುಗಳಿಗೆ ಸಹಾಯ ಮಾಡಿದರೆ ಕ್ರೈಸ್ತ ಜನಾಂಗಕ್ಕೆ ಉಪಕಾರ ಮಾಡಿದಂತೆ ಎಂದು ತಿಳಿದುಕೊಂಡಿದ್ದಾರೆ. ಇದರಿಂದ ನಮ್ಮ ದೇಶದೆಲ್ಲೆಡೆ ಮಸೀದಿ, ಮಂದಿರ, ಚರ್ಚುಗಳು ಬೆಳೆದಿವೆ. ಅವು ದಿವ್ಯವಾಗಿಯೂ ಭವ್ಯವಾಗಿಯೂ ಕಾಣುತ್ತಿವೆ. ಜೊತೆಗೆ ಅವುಗಳಲ್ಲಿರುವ ಪುರೋಹಿತರು ದಿನ ದಿನಕ್ಕೂ ಬಲಿಷ್ಠರಾಗುತ್ತ ನಡೆದಿದ್ದಾರೆ.**

ತಾವು ಮಾತ್ರ ಸುಖ ಸಂತೃಪ್ತಿಯ ಬದುಕನ್ನು ಕಟ್ಟಿಕೊಳ್ಳಬೇಕೆಂಬ ದುರಾಸೆ ಇವರಿಗೆ. ಕಟುಕನೊಬ್ಬ ಕುರಿಯನ್ನು ಚೆನ್ನಾಗಿ ಮೇಯಿಸುವುದು ತಿನ್ನುವುದಕ್ಕಾಗಿಯೇ ಹೊರತು, ಅದನ್ನು ಉದ್ಧಾರಮಾಡುವ ಲವಲೇಶ ಅಂಶವೂ ಕುರುಬನಲ್ಲಿ ಇರೋದಿಲ್ಲ. ಹಾಗೆಯೇ ಈ ದೇಶದ ಸನಾತನವಾದಿಗಳಿಗೂ ಜನಸಾಮಾನ್ಯರ (ಕುರಿಗಳ) ಪರವಾಗಿ ಇರುವಂತೆ ತೋರಿಸುತ್ತ ಆತನನ್ನು ಕತ್ತಲಲ್ಲಿಯೆ ಇಡಬೇಕೆಂಬ ಹುನ್ನಾರ ವಿರುವುದನ್ನು ಯಾರಾದರೂ ಗಮನಿಸಬಹುದು.

ಇಷ್ಟಕ್ಕೂ ೨೦೧೩ರ ಮೌಢ್ಯ ವಿಧೇಯಕವನ್ನು ಇವರ್‍ಯಾರೂ ಸಂಪೂರ್ಣವಾಗಿ ಗಮನಿಸಿಲ್ಲ, ಓದಿಲ್ಲ. ಕರಡು ಪ್ರತಿಯನ್ನು ಓದಿಲ್ಲದೆ ಕೇವಲ ಕೆಲವು ಮುಖ್ಯಾಂಶಗಳನ್ನು ಪತ್ರಿಕಾ ಮಾಧ್ಯಮಗಳಿಂದ ಅರಿತು ಪ್ರತಿಕ್ರಿಯಿಸುವುದು ಎಷ್ಟು ಸರಿ? ಇಂಥ ಆತುರಾತುರದ ನಿರ್ಧಾರಕ್ಕೆ ಬರಲು ಇರುವ ಮುಖ್ಯ ಕಾರಣವೆಂದರೆ ತಮ್ಮ ಸನಾತನ, ಪುರಾತನ ಅತಾರ್ಕಿಕ ನಂಬಿಕೆಗಳಿಗೆ ಸರಕಾರ ಕೊಡಲಿಪೆಟ್ಟು ನೀಡಿದರೆ ತಾವುಗಳೆಲ್ಲ ಸಮಾಧಿಸ್ಥರಾಗಬಹುದೆಂಬ ಭಯದಿಂದ ಇಂಥ ಜನರು ತಲ್ಲಣಗೊಂಡಿದ್ದಾರೆ. ಇಷ್ಟು ವರ್ಷಗಳ ಕಾಲ ದುಡಿಯದೆ ಆರಾಮವಾಗಿ ದೇವರಿಗೆ ಅರ್ಚನೆ ಮಾಡುತ್ತ ಬದುಕು ಸಾಗಿಸಿದ್ದ ತಮ್ಮ ಬಿಟ್ಟಿ ಉಪಜೀವನಕ್ಕೆ ಕಲ್ಲು ಬೀಳುತ್ತದೆ ಎಂದು ತಲ್ಲಣಗೊಂಡಿದ್ದಾರೆ. ದೇವರು – ಧರ್ಮವನ್ನು ಗುತ್ತಿಗೆ ಹಿಡಿದವರಂತೆ ವರ್ತಿಸುತ್ತ ತಮ್ಮ ಬೇಕಾಬಿಟ್ಟಿ ಜೀವನವನ್ನು ರೂಪಿಸಿಕೊಂಡಿದ್ದ ಶಕ್ತಿಯೆಲ್ಲ ಛಿದ್ರವಾದರೆ ತಾವೇನು ಮಾಡಬೇಕು ಎಂದು ಕಂಗಾಲಾಗಿದ್ದಾರೆ. ಇವರಿಗೆ ಜನಸಾಮಾನ್ಯರಿಗೆ ಟೋಪಿ ಹಾಕಿ, ಭಯ ಹುಟ್ಟಿಸಿ, ಕನಸುಗಳನ್ನು ಬಿತ್ತಿ ಆ ಕನಸಿನ ಸಾಗರದಲ್ಲಿ ಈಜಿ ಗೊತ್ತೇ ಹೊರತು ದುಡಿದು ಗೊತ್ತಿಲ್ಲ.

ಧಾರ್ಮಿಕ ಮುಖಂಡರ ಹಾಗೆ ಕೆಲವು ರಾಜಕಾರಣಿಗಳೂ ಸಹ ಮೌಢ್ಯ ನಿವಾರಣೆ ವಿಧೇಯಕದ ವಿರುದ್ಧ ತಮ್ಮ ತೀವ್ರ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮ ದೇಶದ ಬಹುತೇಕ ರಾಜಕಾರಣಿಗಳು ಹಾಗೂ ಧಾರ್ಮಿಕ ನಾಯಕರು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಬಹುಕಾಲದಿಂದಲೂ ಇವರೀರ್ವರ ಕೌಲುಕೂಟ ನಮ್ಮ ದೇಶದ ಜನರ ಮಿದುಳು ಹಾಗೂ ಮನಸ್ಸನ್ನು ಆಳುತ್ತ ಬಂದಿದೆ. ಯಾವುದೇ ರಾಜಕಾರಣಿ ಚುನಾವಣೆಯಲ್ಲಿ ಗೆಲ್ಲುವುದಕ್ಕಾಗಿ ಮೊದಲು ಹಾಗೂ ಗೆದ್ದ ನಂತರ ಭೇಟಿ ಕೊಡುವುದು ಧಾರ್ಮಿಕ ಸ್ಥಳಗಳಿಗೆ. ಆ ಧಾರ್ಮಿಕ ಸ್ಥಳಕ್ಕೆ ಏನಾದರೂ ಹಣ ಸಹಾಯ ಮಾಡಿದರೆ ಸಾಕು ಆಯಾ ಜನಾಂಗದವರನ್ನು ಸಂತೃಪ್ತಿಗೊಳಿಸ ಬಹುದೆಂದು ಆತ ಭಾವಿಸಿದ್ದಾರೆ. ದೇವಸ್ಥಾನಕ್ಕೆ ಏನಾದರೂ ಸಹಾಯ ಒದಗಿಸಿದರೆ ಹಿಂದುಗಳಿಗೆ, ಮಸೀದಿಗಳಿಗೆ ಸಹಾಯ ಮಾಡಿದರೆ ಮುಸ್ಲಿಂರಿಗೆ, ಚರ್ಚುಗಳಿಗೆ ಸಹಾಯ ಮಾಡಿದರೆ ಕ್ರೈಸ್ತ ಜನಾಂಗಕ್ಕೆ ಉಪಕಾರ ಮಾಡಿದಂತೆ ಎಂದು ತಿಳಿದು ಕೊಂಡಿದ್ದಾರೆ. ಇದರಿಂದ ನಮ್ಮ ದೇಶದೆಲ್ಲೆಡೆ ಮಸೀದಿ, ಮಂದಿರ, ಚರ್ಚುಗಳು ಬೆಳೆದಿವೆ. ಅವು ದಿವ್ಯವಾಗಿಯೂ ಭವ್ಯವಾಗಿಯೂ ಕಾಣುತ್ತಿವೆ. ಜೊತೆಗೆ ಅವುಗಳಲ್ಲಿರುವ ಪುರೋಹಿತರು ದಿನ ದಿನಕ್ಕೂ ಬಲಿಷ್ಠರಾಗುತ್ತ ನಡೆದಿದ್ದಾರೆ.

ಮಸೀದಿ, ಮಂದಿರ, ಚರ್ಚು ಉದ್ಧಾರವಾದರೆ ತಾವು ಉದ್ಧಾರವಾದಂತೆ ಎಂದು ತಿಳಿದು ಕೊಂಡಿರುವ ಮೂಢ ಭಕ್ತರಿಗೆ ಸಲೀಸಾಗಿ ಟೋಪಿ ಹಾಕಬಹುದು. ಮತದಾರ ಜಾಗೃತನಾದರೆ ಆತ ಪ್ರತಿಯೊಂದಕ್ಕೂ ತಮ್ಮನ್ನು ಕೇಳುತ್ತಾನೆ. ನಮ್ಮ ಪ್ರತಿಯೊಂದು ಭ್ರಷ್ಟಾಚಾರಕ್ಕೂ ಕಾರಣ ಕೇಳುತ್ತಾನೆ. ನಾವು ರೂಪಿಸುವ ಪ್ರತಿಯೊಂದು ಕಾನೂನು ಆತನ ತಿಳುವಳಿಕೆಗೆ ಬರುತ್ತದೆ. ತಮ್ಮ ನಡಾವಳಿಗಳನ್ನು ಪ್ರಶ್ನೆ ಮಾಡಲು ತೊಡಗುತ್ತಾನೆ. ತಮ್ಮ ಐಷಾರಾಮಿ ಜೀವನದ ಬಗೆಗೆ ಪ್ರಶ್ನೆ ಮಾಡುತ್ತಾನೆ. ತಾವು ಕಂಡಕಂಡ ಹೆಣ್ಣುಮಕ್ಕಳ ತೋಳತೆಕ್ಕೆಯಲ್ಲಿರುವುದನ್ನು ಆತ ಪ್ರತಿಭಟಿಸುತ್ತಾನೆ. ಜನಪ್ರತಿನಿಧಿಗಳು ಜನರ ಆಳುಗಳೇ ಹೊರತು ರಾಜಮಹಾರಾಜರಲ್ಲ – ಎಂದು ಆತ ಭಾವಿಸುತ್ತಾನೆ ಎಂಬ ಭಯ ಅವರನ್ನು ಕಾಡುತ್ತಿದೆ. ಮಸೀದಿ, ಮಂದಿರ, ಚರ್ಚುಗಳನ್ನು ಕಟ್ಟುತ್ತೇವೆ ಎಂದು ಹೇಳುತ್ತಲೇ ಸಾವಿರಾರು ವರ್ಷ ಜನತೆಯನ್ನು ಆಳುತ್ತಲೇ ಬಂದಿರುವ ರಾಜಕಾರಣಿಗಳು ಇನ್ನೂ ಸಾಕಷ್ಟು ವರ್ಷ ಆಳ್ವಿಕೆ ನಡೆಸಬೇಕೆಂದು ಹೊಂಚುಹಾಕಿದ್ದಾರೆ. ಇಂಥ ಹಿಪಾಕ್ರಿಟ್ ಮನಸ್ಸು ಗಳಿಗೆ ಮಂದಿರ, ಮಸೀದಿ, ಚರ್ಚುಗಳ ಮೇಲೆ ನಂಬಿಕೆಯಿಲ್ಲ. ದೇವರುಗಳೆಂದರೆ ತಾವು ಬಿಟ್ಟಿಯಾಗಿ ಗಳಿಸಿಕೊಂಡ ಆಸ್ತಿಯಲ್ಲಿ ಅಲ್ಪ ಪ್ರಮಾಣದ ಕಪ್ಪ ಕಾಣಿಕೆ ಸಲ್ಲಿಸಿ ಕೃತಾರ್ಥರಾಗಬಹುದೆಂದು ಭ್ರಮಿಸಿದ್ದಾರೆ.

ಆದರೆ ಅವರಿಗೆ ಆ ಮಂದಿರ, ಮಸೀದಿ, ಚರ್ಚು ಗಳಲ್ಲಿ ಜನಸಾಮಾನ್ಯರ ಮನಸ್ಸುಗಳನ್ನು ಬಂಧಿಸಿ ಇಡಬಹುದು ಎಂದು ಖಚಿತವಾಗಿ ಗೊತ್ತಿದೆ. ಆದ್ದರಿಂದಲೆ ಇಂಥ ಕುತಂತ್ರದ ಮನಸ್ಸುಗಳು ಜನಸಾಮಾನ್ಯರು ವಿಜ್ಞಾನದತ್ತ ಮುಖಮಾಡಬಾರದು ಎಂದು ಬಯಸುತ್ತವೆ. ಜನ ಜಾಣರಾದರೆ ತಮ್ಮ ದಡ್ಡತನ ಬಯಲಿಗೆ ಬಿದ್ದು ಅವರೆಲ್ಲ ಬೀದಿಗೆ ಇಳಿದರೆ ತಮ್ಮ ಅಸಲಿ ಬಣ್ಣ ಬಯಲಾಗುತ್ತದೆ ಎಂಬ ಭಯ ಇವರನ್ನು ಕಾಡುತ್ತಿದೆ. ಆದ್ದರಿಂದಲೆ ಇವರೆಲ್ಲ ಮುಗ್ಧ ಜನರ ಧಾರ್ಮಿಕ ಭಾವನೆಯನ್ನು ಉಪಯೋಗಿಸಿಕೊಂಡು ಅವರನ್ನು ಇನ್ನಷ್ಟು, ಮತ್ತಷ್ಟು ಕೆರಳಿಸಿ ಅವುಗಳಲ್ಲಿಯೆ ಕಾಲಹರಣ ಮಾಡಲಿ ಎಂದು ಬಯಸುತ್ತಾರೆ. ಏಕೆಂದರೆ ಇವರು ಸರಳವೂ ಸಾಮಾನ್ಯವೂ ಆದ ಮಾನವೀಯ ನಡವಳಿಕೆಯಿಂದ ಬಹುದೂರ ಸಾಗಿಬಂದಿದ್ದಾರೆ.

ಕೆಲವು ರಾಜಕಾರಣಿಗಳಂತೂ ದುಡ್ಡಿನ ದೌಲತ್ತಿನ ಮೇಲೆ ಅಧಿಕಾರದ ಚುಕ್ಕಾಣಿ ಹಿಡಿದುಕೊಂಡವರು. ಇವರಿಗೆ ನೀತಿ ಸಿದ್ಧಾಂತಗಳು ಬೇಕಿಲ್ಲ. ಹೊಂದಾಣಿಕೆಯೆ ಜೀವನ ಎಂದು ತಿಳಿದು ಕೊಂಡಿರುವ ಇವರಲ್ಲಿ ಬದ್ಧತೆ ಎಂಬುದು ಇಲ್ಲವೇ ಇಲ್ಲ. ಯಾರಿಗೂ ಕೆಟ್ಟವರಾಗಬಾರದು, ಅವರ ಆಟ ಮಾತ್ರ ನಡೆಯಬೇಕೆಂಬ ಊಸರವಳ್ಳಿ ಗುಣದವರು. ಹೀಗಾಗಿ ಇವರು ಯಾವತ್ತೂ ಯಾರೊಂದಿಗೂ ತತ್ವ ಸಿದ್ಧಾಂತಗಳಿಗಾಗಿ ಹೋರಾಟ ಮಾಡಿದವರೆ ಅಲ್ಲ. ಇಂಥ ಊಸರವಳ್ಳಿಗಳು, ಬುದ್ಧಿಹೀನ ರಾಜಕಾರಣಿ ಗಳಿಂದ ಜಗತ್ತು ಬದಲಾವಣೆಯಾಗುತ್ತದೆ ಎಂದು ಬಯಸುವುದೆ ಸರಿಯಾದುದಲ್ಲ.

ಇಂಥ ಊಸರವಳ್ಳಿಯಂಥ ರಾಜಕಾರಣಿಗಳು ಹಾಗೂ ಜನರು ಕತ್ತಲಲ್ಲಿಯೇ ಇರಬೇಕೆಂದು ಬಯಸುವ ಧಾರ್ಮಿಕ ನಾಯಕರು, ಈ ವ್ಯವಸ್ಥೆ ಹೀಗೇ ಮುಂದುವರಿದರೆ ತಮಗೊಂದಿಷ್ಟು ಲಾಭ ಎಂದರಿತ ಮಾಧ್ಯಮಗಳ ಕೌಲುಕೂಟವನ್ನು ಪ್ರಜ್ಞಾವಂತ ಜನಗಳು ಭೇದಿಸಬೇಕು. ನಮ್ಮ ಬುದ್ಧಿ, ಭಾವ, ಮನಸ್ಸುಗಳನ್ನು ನಾವೇ ಆಳಬೇಕೆ ಹೊರತು ಮತ್ತಾರೂ ಅಲ್ಲ ಎಂಬ ಸತ್ಯವನ್ನು ಅರಿತುಕೊಂಡು ನಡೆದುದೇ ಆದರೆ ನಿಜಕ್ಕೂ ಕರ್ನಾಟಕದಲ್ಲಿ ಆಮೂಲಾಗ್ರ ಬದಲಾವಣೆಯೊಂದು ಬರಲಿದೆ. ಅದು ತನ್ನಷ್ಟಕ್ಕೆ ತಾನೇ ಆಗುತ್ತದೆ ಎಂಬ ತಪ್ಪು ತಿಳುವಳಿಕೆಯಲ್ಲಿ ಕೈಕಟ್ಟಿ ಕುಳಿತುಕೊಳ್ಳದೆ ಆ ವಿಧೇಯಕ ಜಾರಿಗಾಗಿ ಕಾರ್ಯಪ್ರವೃತ್ತರಾಗಬೇಕಿದೆ. ಈ ಮೂಲಕ ಜನಸಾಮಾನ್ಯ ತಾನು ಇದುವರೆಗೆ ಕಟ್ಟಿಕೊಂಡ ಕನಸಿನ ಗೋಪುರದಿಂದ ಹೊರಬಂದು ತನ್ನ ಅಜ್ಞಾನದ ತೊಟ್ಟಿಲನ್ನು ತಾನೇ ಮುರಿದು ಹಾಕಬೇಕು. ಸಕಲ ವೇದ ಶಾಸ್ತ್ರಗಳು ತನ್ನ ಉಸಿರಾಟ ಹಾಗೂ ಬೆಳವಣಿಗೆಯನ್ನು ನಿರ್ಬಂಧಿಸಲು ಹಾಕಿದವುಗಳೆಂದು ಅರಿತುಕೊಳ್ಳಬೇಕು. ಸತ್ಯದ ಅಡಿಯಲ್ಲಿ ಸಾಗುವ ಜೀವನ ಶರಣ ಜೀವನ ವಾಗುತ್ತದೆ. ವೈಜ್ಞಾನಿಕ ಜೀವನವಾಗುತ್ತದೆ. ವೈಚಾರಿಕ ಜೀವನವಾಗುತ್ತದೆ. ಇಂಥ ಬದುಕನ್ನು ನಾವು ಇಷ್ಟಪಡುವುದು ತಪ್ಪೆ?

**ವಿಶ್ವಾರಾಧ್ಯ ಸತ್ಯಂಪೇಟೆ**
ಬಸವ ಮಾರ್ಗ ಪ್ರತಿಷ್ಠಾನ ಸತ್ಯಂಪೇಟೆ
ಬಸವ ಮಾರ್ಗ, ಸಿ. ಬಿ. ಕಾಲೋನಿ
ಅಂಚೆ : ಶಹಾಪುರ – ೫೮೫ ೨೨೩, ಯಾದಗಿರಿ ಜಿಲ್ಲೆ

## ಅಭಿನಂದನೆ

**ಕರ್ನಾಟಕ ಮಾಧ್ಯಮ ಅಕಾಡೆಮಿ** ತನ್ನ ಮೂವತ್ತು ವರ್ಷಗಳನ್ನು ಪೂರೈಸಿದ ಸವಿನೆನಪಿಗೆ ಪತ್ರಕರ್ತರಿಗೆ ೨೦೧೨–೨೦೧೩ರ ಸಾಲಿನ ವಿಶೇಷ ಪ್ರಶಸ್ತಿಯನ್ನು ಪ್ರಕಟಿಸಿದೆ. ಅವರಲ್ಲಿ 'ವಿಜಯ ಕರ್ನಾಟಕ' ಪತ್ರಿಕೆಯ ಸಂಪಾದಕರಾದ **ಶ್ರೀ ಸುಗತ ಶ್ರೀನಿವಾಸ ರಾಜು,** ಹಿರಿಯ ಪತ್ರಕರ್ತ **ಶ್ರೀ ಜಿ. ಎನ್. ಮೋಹನ್** ಹಾಗೂ ಕಲಾವಿದರಾದ **ಶ್ರೀ ಬಿ. ಜಿ. ಗುಜ್ಜಾರಪ್ಪ** ಅವರು ಆಯ್ಕೆಯಾಗಿರುವುದು ಸಂತೋಷದ ವಿಚಾರ. ಮೂವರೂ ಪ್ರಶಸ್ತಿ ಪುರಸ್ಕೃತರಿಗೆ 'ನವಕರ್ನಾಟಕ – ಹೊಸತು' ಬಳಗದ ಅಭಿನಂದನೆಗಳು.

ವ್ಯವಸಾಯದ ಬದುಕು ಒಂದು ಜೀವನಕ್ರಮವಾಗಿರುವ ರೈತನಿಗೆ ಹೊಲದಲ್ಲಿ ಕೈ ತುಂಬ ಕೆಲಸವಿರುತ್ತದೆ. ಅವನಿಗೆ ರಾಜಕಾರಣಕ್ಕೆ ಬಿಡುವಿರುವುದಿಲ್ಲ. ಬಾಳಗೊಂದು ನಂಬಿಕೆ, ಬದುಕಿನ ಮೌಲ್ಯಗಳು–ಸೌಂದರ್ಯ ಈ ಎಲ್ಲವೂ ಕೃಷಿ ಜೀವನಕ್ರಮದಲ್ಲೇ ಹಾಸುಹೊಕ್ಕಾಗಿರುತ್ತವೆ. ಬದುಕಿನ ಏರಿಳಿತಗಳು ಎಂದೂ ಒಂದು ಮಿತಿಯನ್ನು ದಾಟುವುದಿಲ್ಲ. ಹಾಗಾಗಿ ವ್ಯವಸಾಯದ ಬದುಕಿನಲ್ಲಿ 'ಯುಗಯುಗಾದಿ ಕಳೆದರೂ ಯುಗಾದಿ ಮರಳ ಬರುತ್ತದೆ.' ಬೇವು ಬೆಲ್ಲವನ್ನು ಸಮಾನವಾಗಿ ಸ್ವೀಕರಿಸಬೇಕಾದ ಅನಿವಾರ್ಯತೆ ಬದುಕಿನ ಒಂದು ಮೌಲ್ಯವಾಗುತ್ತದೆ, ಒಂದು ಹಬ್ಬವಾಗುತ್ತದೆ.

**ಜಿ. ಎಸ್. ಜಯದೇವ**

ನಾನೊಮ್ಮೆ ನಮ್ಮ ಜಿಲ್ಲೆಯ ಸರ್ಕಾರಿ ಅಧಿಕಾರಿಯೊಬ್ಬರನ್ನು ನೋಡಲು ಅವರ ಭವ್ಯ ಬಂಗಲೆಗೆ ಹೋಗಿದ್ದೆ. ಈ ಅಧಿಕಾರಿಗಳು ಇಬ್ಬರು ಧಡೂತಿ ಆಸಾಮಿಗಳನ್ನು ಪ್ರಗತಿಪರ ರೈತರು ಎಂದು ಪರಿಚಯಿಸಿದರು. ಮುಖದಲ್ಲಿ ರಾಜಕೀಯದ ಕಳೆ ತುಂಬಿ ತುಳುಕುತ್ತಿದ್ದ, ಶ್ವೇತ ವಸ್ತ್ರಧಾರಿಗಳಾದ ಇವರನ್ನು "ರೈತರು" ಎಂದು ಪರಿಚಯಿಸಿದರೂ ಹಾಗೆ ಗುರುತಿಸಲು ನನ್ನ ಮನಸ್ಸು ಏಕೋ ಒಪ್ಪುತ್ತಿರಲಿಲ್ಲ. ನಮ್ಮ ಅಧಿಕಾರಿ ಬಹಳ ಹೆಮ್ಮೆಯಿಂದ ಇವರು ದಾಳಿಂಬೆ ಬೆಳೆಗಾರರೆಂದೂ, ನೂರಾರು ಎಕರೆಗಳಲ್ಲಿ ದಾಳಿಂಬೆ ಬೆಳೆಯುತ್ತಿದ್ದಾರೆಂದು ಮತ್ತು ಇವರಿಗೆ ತಾವು ಸಹಾಯ ಮಾಡಿರುವುದಾಗಿ ಹೇಳಿಕೊಂಡರು. ಈ "ರೈತರು" ನಮ್ಮ ಅಧಿಕಾರಿಯ ಕೊರಳಿಗೆ ಹಾಕಿದ್ದ ಕಡುಕೆಂಪು ಗುಲಾಬಿ ಮಾಲೆ ಅಲ್ಲೆ ಟೇಬಲ್ಲಿನ ಮೇಲೇ ಇತ್ತು.

ಆಗ ನನಗೆ ನೆನಪಾಯಿತು – ನಮ್ಮ ಚಾಮರಾಜ ನಗರದ ಸುತ್ತಮುತ್ತ ಸಾವಿರಾರು ಸಣ್ಣ ರೈತರು ತಮ್ಮ ಮೂರು–ನಾಲ್ಕು ಎಕರೆ ಜಮೀನನ್ನು "ಪ್ರಗತಿಪರ ರೈತ"ರಿಗೆ ಮಾರಿ ಗುಳೆಹೋಗುತ್ತಿದ್ದಾರೆ; ಅಭಿವೃದ್ಧಿ ಮಂತ್ರ ಪಠಿಸುವ ನಮ್ಮ ಅಧಿಕಾರಿಗಳು ಈ 'ಪ್ರಗತಿ'ಯನ್ನು ಸಂಭ್ರಮಿಸುತ್ತ ಅಭಿವೃದ್ಧಿಯಾದ ಬಗ್ಗೆ ವರದಿಗಳನ್ನು ತಯಾರಿಸಿ, ಸರ್ಕಾರಕ್ಕೆ ಸಲ್ಲಿಸಿ, ಬಡ್ತಿ ಪಡೆದುಕೊಂಡು ಸುಖವಾಗಿದ್ದಾರೆ. ತಾವು ಹಾಕಿಸಿಕೊಂಡ ಕೆಂಪು ಗುಲಾಬಿ ಹಾರಕ್ಕೆ ಸಣ್ಣ ರೈತರ ರಕ್ತ ಮೆತ್ತಿರುವುದು ಕಣ್ಣಿಗೆ ರಾಚುತ್ತಿದ್ದರೂ ಅದನ್ನು ಗುರುತಿಸಲು ಬೇಕಾದ ಸೂಕ್ಷ್ಮತೆಯನ್ನು ಈ ಅಧಿಕಾರಿ ಈಗಾಗಲೇ ಕಳೆದುಕೊಂಡಿದ್ದರು. ಕನ್ನಡ ಕೂಡ ಸರಿಯಾಗಿ ಮಾತನಾಡಲು ಬರದ ಈ ದಾಳಿಂಬೆ ಬೆಳೆಗಾರರನ್ನು ಮನಸಾರೆ ಹೊಗಳಿದರು. "ನಮ್ಮ ರೈತರಿಗೆ ಇದೆಲ್ಲ ಎಲ್ಲಿ ಸಾಧ್ಯ"? ಎನ್ನುವ ಅವರ ಮಾತಿನಲ್ಲಿ ನಮ್ಮ ಸರ್ಕಾರ ಯಾರಿಗಾಗಿ ಕೆಲಸ ಮಾಡುತ್ತಿದೆ ಎಂಬುದು ಸ್ಪಷ್ಟವಾಗುತ್ತಿತ್ತು. ಸರ್ಕಾರಿ ಕೆಲಸದಲ್ಲೆ ಉಳಿದರೆ ನಾನು ಕೇವಲ ಉಳ್ಳವರಿಗೆ, ಬಲಾಢ್ಯರಿಗೆ ಮಾತ್ರ ಕೆಲಸ ಮಾಡಬೇಕಾಗುತ್ತದೆ, ಸಮಾಜದ ಕೆಳಗಿನ ಸ್ತರವನ್ನು ಮುಟ್ಟುವುದೇ ಇಲ್ಲ ಎಂದರಿತ ಅಧಿಕಾರಿ ಅರುಣ್‌ರಾಯ್ ಅವರು ತಮ್ಮ ಐ.ಎ.ಎಸ್. ನೌಕರಿಯನ್ನು ತೊರೆದು ಸ್ವಯಂಸೇವಾ ಸಂಸ್ಥೆಯೊಂದನ್ನು ಕಟ್ಟಿಕೊಂಡದ್ದು ನೆನಪಿಗೆ ಬಂತು. "ಅಭಿವೃದ್ಧಿ" ಎನ್ನುವ ಪದ ಬಂಡವಾಳಶಾಹಿಗಳ ವಿಕೃತ ಆಶಯಗಳೆಲ್ಲವನ್ನೂ ಪೂರೈಸಬಲ್ಲ ಒಂದು ಮಹಾಮಂತ್ರವಾಗಿಬಿಟ್ಟಿದೆ. ನಮ್ಮ ರಾಜಕಾರಣಿಗಳಂತೂ "ಅಭಿವೃದ್ಧಿ" ಎನ್ನುವ ಕಿಂದರಿಜೋಗಿ ಪುಂಗಿಯನ್ನು ಊದುತ್ತ, ಇಲ್ಲದ ಬಣ್ಣದ ಲೋಕವನ್ನು ಅಮಾಯಕ ಜನರಿಗೆ ತೋರಿಸುತ್ತ

# ಬೇಸಾಯದ ಬದುಕು ಬವಣೆಯಾಯಿತು ಏಕೆ?



ಮರುಳುಮಾಡುತ್ತಿದ್ದಾರೆ. ಮೋದಿಯವರಂತೂ ಕಾರ್ಪೋರೇಟ್ ಸಂಸ್ಥೆಗಳು ಸ್ವತಃ ತಯಾರಿಸಿ ಕೊಟ್ಟಿರುವ ದೊಡ್ಡ ಪುಂಗಿಯನ್ನು ಊದುತ್ತ ದೇಶದ ಉದ್ದಗಲಕ್ಕೂ ಓಡಾಡುತ್ತಿದ್ದಾರೆ.

ಇಷ್ಟಕ್ಕೂ ಈ ಅಭಿವೃದ್ಧಿ ಎನ್ನುವುದು ಜನಗಳ ದೌರ್ಬಲ್ಯವನ್ನೇ ಬಂಡವಾಳ ಮಾಡಿಕೊಂಡು, ಬಂಡವಾಳಶಾಹಿಗಳಿಗೆ ಮತ್ತಷ್ಟು ಶೋಷಣೆ ಮಾಡಲು ಅನುಕೂಲ ಮಾಡಿಕೊಡುತ್ತಿರುವ ಒಂದು ತಂತ್ರ. ಎಲ್ಲಾ ಅಭಿವೃದ್ಧಿ ಹೂಡಿಕೆಗಳೂ ಮುಂದುವರಿದ ಮುನ್ನೂರು ಮಿಲಿಯನ್ ಜನಗಳನ್ನು ಮಾತ್ರ ಮುಟ್ಟುತ್ತಿದೆ. ಹಿಂದೆ ಬಿದ್ದಿರುವ ಎಂಟುನೂರು ಮಿಲಿಯನ್ ಜನರನ್ನು ಇದು ತಲುಪುತ್ತಲೂ ಇಲ್ಲ, ತಲುಪಬೇಕೆಂಬ ನಿರೀಕ್ಷೆಯೂ ಇಲ್ಲ. ಜನಗಳ ಆಸೆ ಬುರುಕುತನವೇ ಈ ವ್ಯಾಪಾರದ ಮೂಲ ಬಂಡವಾಳ. ಹೆಚ್ಚಿನ ಕೆಲವು ರೂಪಾಯಿಗಳ ಗಳಿಕೆಗಾಗಿ ನಮ್ಮ ಜನ ತಮ್ಮ ಮೂಲ ಬೇರುಗಳನ್ನೇ ಕಡಿದುಹಾಕಿ ಜಾಗತೀಕರಣದ ಅಲೆಯಲ್ಲಿ ಒಂದಾಗುವ ಆತುರ ತೋರುತ್ತಿದ್ದಾರೆ. ಈ ಆಸೆಬುರುಕುತನಕ್ಕೆ ಅನುಗುಣವಾಗಿ ಸರ್ಕಾರವೂ ಕಾರ್ಯಕ್ರಮಗಳನ್ನು ರೂಪಿಸುತ್ತಿದೆ. "ಅಭಿವೃದ್ಧಿ" ಎಂದರೆ ಮನುಷ್ಯನಿಗಿಂತಲೂ ತಾಂತ್ರಿಕತೆಗೆ ಆದ್ಯತೆ ನೀಡುವ, ಆಕಾಶದೆತ್ತರಕ್ಕೆ ನಿಲ್ಲುವ, ಶೂನ್ಯತೆಯನ್ನು ಧ್ವನಿಸುವ ಹೆಗ್ಗೋರಿಯಂತಹ ಕಟ್ಟಡಗಳು ಎಂದು ಎಲ್ಲರೂ ಭಾವಿಸುತ್ತಿರುವಂತಿದೆ. ಪೀಳಿಗೆಗಳು ಕಳೆದಂತೆ "ಮನಸ್ಸಿನ ಸಂತೋಷ – ನೆಮ್ಮದಿ –ತೃಪ್ತಿ" ಎಂಬ ಬದುಕಿನ ಬಹು ಮುಖ್ಯ ಅಂಶಗಳು ಎಂದು ಮನುಕುಲಕ್ಕೆ ಮರತೇ ಹೋಗುತ್ತವೆಯೋ ಏನೋ ಎಂದು ಅನ್ನಿಸುತ್ತಿದೆ. 'ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತ'ದ ಈ ಬದುಕಿಗೆ ನಾವು ಒಂದು ವಿಶೇಷವಾದ ಅರ್ಥವನ್ನು ಕಟ್ಟಿಕೊಡ ಬೇಕಾದ ಅಗತ್ಯವಿಲ್ಲದಿದ್ದರೂ ಮನಶ್ಶಾಂತಿ, ನೆಮ್ಮದಿ, ತೃಪ್ತಿಗಳಾದರೂ ಬೇಕಲ್ಲವೇ ? ಹಣಕ್ಕಾಗಿ ನಿರಂತರ ಕ್ಲೇಶದಲ್ಲೇ ಬದುಕುವುದನ್ನು ಬದುಕು ಎಂದು ನಂಬಬೇಕೇ? ಹಣಗಳಿಕೆಗಾಗಿ ಎಂತಹ ಕಷ್ಟಗಳ ಸರಣಿಯನ್ನಾದರೂ ಅನುಭವಿಸಲು ಸಿದ್ಧವಾಗುವಂತಹ ಮನಃಸ್ಥಿತಿಯನ್ನು ನಮ್ಮ ಜಾಗತೀಕರಣದ ಕಾಲ ಸೃಷ್ಟಿಸುತ್ತಿದೆ. ಈ ಬಗ್ಗೆ ಎಚ್ಚರಗೊಳ್ಳಲೂ ಸಹ ಬಿಡುವಿಲ್ಲದಷ್ಟು ಗಾಢವಾಗಿ ಜನ ಈ ಯಾಂತ್ರಿಕ ಬದುಕಿನಲ್ಲಿ ತಮ್ಮನ್ನೇ ತಾವು ತೊಡಗಿಸಿಕೊಂಡಿದ್ದಾರೆ. ಈ ಹುಚ್ಚು ಅಲೆ ನಮ್ಮ ಗ್ರಾಮೀಣ ಬದುಕನ್ನು ಅಸ್ತವ್ಯಸ್ತಗೊಳಿಸುತ್ತಿದೆ. ವ್ಯವಸಾಯವು ಉದ್ಯಮದ ರೂಪ ಪಡೆಯುತ್ತಿರುವುದರಿಂದ ನಮ್ಮ ಗ್ರಾಮೀಣ ಬದುಕು ಹದಗಟ್ಟಿದೆ.

## ರಂಗೋಲಿ



**ಆಗಸದ ಚುಕ್ಕಿಗಳನು**
**ಒಂದೊಂದೇ ತಂದು**

**ಮುಂಬಾಗಿಲಲಿರಿಸಿ**
**ಬಿಳಿ ದಾರದಿ ಪೋಣಿಸಿ**

**ಅಮ್ಮನಿಟ್ಟ ರಂಗೋಲಿ**
**ಅಂಗಳದಿ ನಗಲಿ.**

**ಪ್ರವೀಣಕುಮಾರ ದೈವಜ್ಞಾಚಾರ್ಯ**
ಶಿಕ್ಷಕರು, ಹೂವಿನಹಡಗಲಿ

**ವ್ಯವಸಾಯ ಒಂದು ಜೀವನಕ್ರಮ – ಉದ್ಯಮವಲ್ಲ**

ಭಾರತ ಹಳ್ಳಿಗಳ ದೇಶ. ನಮ್ಮ ಜನಸಂಖ್ಯೆಯ ಶೇಕಡ ೭೩ ಭಾಗದಷ್ಟು ಜನ ನಮ್ಮ ದೇಶದ ಆರೂವರೆ ಲಕ್ಷ ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಅನೇಕ ಸಹಸ್ರ ವರ್ಷಗಳ ಪರ್ಯಂತ ಬೆಳೆದು ಬಂದ ವೈವಿಧ್ಯಮಯವಾದ ಕೃಷಿ ಸಂಸ್ಕೃತಿ ನಮ್ಮದು. ಇದೇ ನಮ್ಮ ಸಾಂಸ್ಕೃತಿಕ ವೈವಿಧ್ಯಕ್ಕೂ ಕಾರಣವೆಂದರೆ ತಪ್ಪಾಗಲಾರದು. ಕೃಷಿ ವೈವಿಧ್ಯ ಕ್ಷೀಣಿಸಿದಂತೆ ನಮ್ಮ ಬಹುರೂಪಿ ಸಂಸ್ಕೃತಿ ಏಕರೂಪದ ಕಡೆಗೆ ಜರಿಯತೊಡಗುತ್ತದೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಮಣ್ಣಿನ ವೈವಿಧ್ಯಕ್ಕೆ ಅನುಗುಣವಾಗಿ ವೈವಿಧ್ಯಮಯವಾದ ಬೆಳೆಗಳನ್ನು ಆಯಾ ಪ್ರದೇಶದ ಜನ ಬೆಳೆಯುತ್ತಿದ್ದರು. ವಿಶಿಷ್ಟ ಪ್ರಾದೇಶಿಕ ಹವಾಮಾನದ ಏರಿಳಿತಗಳು ಪ್ರಾದೇಶಿಕ ಬೆಳೆಗಳಿಗೆ ಸಹಕಾರಿಯಾಗಿದೆ. ವ್ಯವಸಾಯವನ್ನು ಉದ್ಯಮದಂತೆ ಉತ್ಪಾದನೆಯೊಂದನ್ನೇ ಗುರಿಯಾಗಿಟ್ಟುಕೊಂಡು ಹೊರಟರೆ ಆಗ ಪ್ರಾದೇಶಿಕ ಬೆಳೆಗಳನ್ನು ಕಡೆಗಣಿಸುತ್ತೇವೆ. ಪ್ರಾದೇಶಿಕ ತಳಿಗಳು ನಶಿಸಿಹೋಗುತ್ತವೆ. ಇದರರ್ಥ ಉತ್ಪಾದನೆಗೆ ಗಮನಕೊಡಬಾರದು ಎಂದಲ್ಲ. ವೈವಿಧ್ಯಮಯವಾದ ಬೆಳೆಗಳನ್ನು ಆಶ್ರಯಿಸಿ ಬೆಳೆ ತೆಗೆಯುವುದರಿಂದ ನಾವು ನಿಜವಾದ ಆಹಾರ ಭದ್ರತೆಯನ್ನು ಸಾಧಿಸಬಹುದು. ಇಂದು ನಮ್ಮ ದೇಶದ ನೂರಾಇಪ್ಪತ್ತು ಕೋಟಿ ಜನಕ್ಕೆ ಅಕ್ಕಿ ಗೋಧಿ ಎರಡೇ ಧಾನ್ಯಗಳು ಆಧಾರವಾಗಿರಬೇಕೇ ? ಹಿಂದೆ ಐವತ್ತು ಸಾವಿರಕ್ಕೂ ಹೆಚ್ಚು ಭತ್ತದ ತಳಿಗಳು ನಮ್ಮಲ್ಲಿದ್ದವು. ಆದರೆ ಈಗ ಅಧಿಕ ಇಳುವರಿ ತಳಿಗಳನ್ನವಲಂಬಿಸಿ ನಾವು ನಮ್ಮ ಸ್ಥಳೀಯ ತಳಿಗಳನ್ನು ಕಳೆದುಕೊಂಡಿದ್ದೇವೆ. ಮಣ್ಣಿನ ಬಗೆ ಯಾವುದಾದರೂ ಹವಾಮಾನ ಏನೇ ಇದ್ದರೂ ಬಹುರಾಷ್ಟ್ರೀಯ ಕಂಪನಿಗಳು ಕೊಡುವ ತಳಿಗಳ ಬೆಳೆಗಳನ್ನಷ್ಟೇ ನಾವು ದೇಶದ ಉದ್ದಗಲಕ್ಕೂ ಬೆಳೆಯಬೇಕಾಗಿದೆ. ಬೀಜದ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಿರುವ ರೈತ ನಿರಂತರವಾಗಿ ಕಂಪನಿ ಬೀಜಗಳಿಗೆ ಗುಲಾಮನಾಗುತ್ತಿದ್ದಾನೆ. ಉತ್ಪಾದನೆಯಷ್ಟೇ ಗುರಿಯಾಗಿರುವ ವ್ಯವಸಾಯ ಸುಸ್ಥಿರವೂ ಅಲ್ಲ, ಅವರಿಂದ ಸಮತೋಲನ ಆಹಾರವೂ ಸಾಧ್ಯವಿಲ್ಲ.

ನಮ್ಮ ದೇಶದಲ್ಲಿ ವ್ಯವಸಾಯ ಒಂದು ಜೀವನ ಕ್ರಮವಾಗಿ ಬೆಳೆದುಬಂದಿದೆ. ಅನೇಕ ಸಹಸ್ರ ವರ್ಷಗಳಿಂದಲೂ ನಾವು ಸುಸ್ಥಿರವಾದ, ವೈವಿಧ್ಯಮಯವಾದ ಬೇಸಾಯ ಕ್ರಮವನ್ನು ಆಯಾ ಪ್ರದೇಶಗಳ ಮಣ್ಣು – ಹವಾಮಾನಕ್ಕನುಗುಣವಾಗಿ ಅನುಸರಿಸುತ್ತ ಬಂದಿದ್ದೇವೆ. ಇಂತಹ ರೈತನಿಗೆ ವ್ಯವಸಾಯವು ಒಂದು ಉದ್ಯಮವಾಗುವುದಿಲ್ಲ. ವ್ಯವಸಾಯವೇ ಬದುಕು, ಬದುಕೇ ವ್ಯವಸಾಯ ಎಂದಾಗುತ್ತದೆ. ಇವರಿಗೆ ವ್ಯವಸಾಯ ಒಂದು ಜೀವನಕ್ರಮ, ಉದ್ಯಮವಲ್ಲ. ಹಾಗಾಗಿ ವ್ಯವಸಾಯಕ್ಕೆ ಹೊರತಾದ ಬೇರೆ ಖಾಸಗಿ ಜೀವನ ಎಂಬುದು ಇವನಿಗೆ, ಇವನ ಕುಟುಂಬಕ್ಕೆ ಇಲ್ಲ. ಆದರೆ ವ್ಯವಸಾಯವು ಒಂದು ಉದ್ಯಮವಾಗಿ ಬದಲಾಗುತ್ತಿರುವ ಈ ಕಾಲದಲ್ಲಿ ವ್ಯವಸಾಯವೇ ಬೇರೆ, ಖಾಸಗಿ ಬದುಕೇ ಬೇರೆಯಾಗಿ ನಿಲ್ಲುತ್ತವೆ. ಇಂತಹ ಇಬ್ಬಂದಿ ರೈತನಿಗೆ ಖಾಸಗಿ ಬದುಕು ಅಧಿಕಾರಿಗಳಿಗೆ ಗುಲಾಬಿ ಹಾರ ಹಾಕುವ ರಾಜಕಾರಣವಾಗುತ್ತದೆ. ತನ್ನೊಬ್ಬನ ಹಿತವನ್ನಷ್ಟೇ ಗುರಿಯಾಗಿಟ್ಟುಕೊಂಡು ಮಾತನಾಡಿದರೂ ಸಾರ್ವಜನಿಕ ಹಿತಾಸಕ್ತಿಯ ರೂಪುಗೊಡುವ ಚಾಕಚಕ್ಯತೆ ಮೈಗೂಡುತ್ತದೆ. "ಮತ್ತೊಬ್ಬರ ಕೈ ಕೆಸರಾಗಬೇಕು, ತನ್ನ ಬಾಯಿಗೆ ಮಾತ್ರ ಮೊಸರು ಬೇಕು" ಎಂಬ ತತ್ವವನ್ನು ಪಾಲಿಸುತ್ತಾನೆ.

ವ್ಯವಸಾಯದ ಬದುಕು ಒಂದು ಜೀವನಕ್ರಮವಾಗಿರುವ ರೈತನಿಗೆ ಹೊಲದಲ್ಲಿ ಕೈ ತುಂಬ ಕೆಲಸವಿರುತ್ತದೆ. ಅವನಿಗೆ ರಾಜಕಾರಣಕ್ಕೆ ಬಿಡುವಿರುವುದಿಲ್ಲ. ಬಾಳಿಗೊಂದು ನಂಬಿಕೆ, ಬದುಕಿನ ಮೌಲ್ಯಗಳು – ಸೌಂದರ್ಯ ಈ ಎಲ್ಲವೂ ಕೃಷಿ ಜೀವನಕ್ರಮದಲ್ಲೇ ಹಾಸುಹೊಕ್ಕಾಗಿರುತ್ತವೆ. ಬದುಕಿನ ಏರಿಳಿತಗಳು ಎಂದೂ ಒಂದು ಮಿತಿಯನ್ನು ದಾಟುವುದಿಲ್ಲ. ಹಾಗಾಗಿ ವ್ಯವಸಾಯದ ಬದುಕಿನಲ್ಲಿ 'ಯುಗಯುಗಾದಿ ಕಳೆದರೂ ಯುಗಾದಿ ಮರಳಿ ಬರುತ್ತದೆ.' ಬೇವು ಬೆಲ್ಲವನ್ನು ಸಮಾನವಾಗಿ ಸ್ವೀಕರಿಸಬೇಕಾದ ಅನಿವಾರ್ಯತೆ ಬದುಕಿನ ಒಂದು ಮೌಲ್ಯವಾಗುತ್ತದೆ, ಒಂದು ಹಬ್ಬವಾಗುತ್ತದೆ. ಆದರೆ ವ್ಯವಸಾಯವು ಉದ್ಯಮವಾದಾಗ ತಂತ್ರಜ್ಞಾನದ ಅಹಂಕಾರ ಬೇವನ್ನು ಒಪ್ಪುವುದಿಲ್ಲ. ಅದಕ್ಕೆ ಎಲ್ಲವೂ ಬೆಲ್ಲಮಯವಾಗಬೇಕು. ಉದ್ಯಮದ ನಂಬಿಕೆ ಏನೆಂದರೆ ಅಲ್ಲಿ ಎಲ್ಲವೂ ಪ್ಲ್ಯಾನ್ ಪ್ರಕಾರ ನಡೆಯುತ್ತದೆ, ವಿಫಲತೆಗೆ ಅವಕಾಶವೇ ಇಲ್ಲ. ಸರಿಯಾಗಿ ಪ್ಲ್ಯಾನ್ ಮಾಡಿದರೆ, ಕಂಪನಿಗಳು ಹಾಕಿಕೊಟ್ಟಿರುವ ಮಾರ್ಗದರ್ಶನವನ್ನು ಚಾಚೂ ತಪ್ಪದೆ ಅನುಸರಿಸಿದರೆ ಅಧಿಕ ಇಳುವರಿ ನಿಶ್ಚಯ ಎಂದು ಈ ಬಹುರಾಷ್ಟ್ರೀಯ ಕಂಪನಿಗಳು ರೈತರನ್ನು ನಂಬಿಸುತ್ತವೆ. ತಂತ್ರಜ್ಞಾನದ ಸಹಾಯದಿಂದ ಇಡೀ ಪ್ರಕೃತಿಯನ್ನು ಕೈಗೆ ತೆಗೆದುಕೊಳ್ಳೋಣ, ಲಾಭ ಮಾಡೋಣ ಎನ್ನುತ್ತವೆ ಈ ಕಂಪನಿಗಳು. ಇಷ್ಟೆಲ್ಲ ತಯಾರಿ ನಡೆಸಿ ಸಾಲ ಮಾಡಿ ಬಂಡವಾಳ ಹಾಕಿ ಬೆಳೆ ಕೆಟ್ಟುಹೋದರೆ ? ರೈತನಿಗೆ ಆತ್ಮಹತ್ಯೆ ಒಂದೇ ದಾರಿ.

**ಕೃಷಿ ಮತ್ತು ಪಾರಂಪರಿಕ ಜ್ಞಾನ**

ಕೃಷಿಯು ಉದ್ಯಮದ ರೂಪ ಪಡೆದಾಗ ಸಾವಿರಾರು ವರ್ಷಗಳಿಂದ ನಾವು ಬೆಳೆಸಿಕೊಂಡು ಬಂದ ಅನುಭವಾಧಾರಿತ ಜ್ಞಾನದ ಬಳಕೆ ತಪ್ಪಿಹೋಗುತ್ತದೆ. ಆಧುನಿಕ ಕೃಷಿ ವಿಧಾನಗಳು ಬಹುಶಃ ಈ ಹಿಂದಿನ ೧೦೦ ವರ್ಷಗಳ ತಂತ್ರಜ್ಞಾನದ ಪ್ರಗತಿಯನ್ನು ಆಧರಿಸಿ ಬೆಳೆದಿರುವ ಇನ್ನೂ ಶೈಶವಾವಸ್ಥೆ

ಯಲ್ಲಿರುವ ಜ್ಞಾನ. ಸಾವಿರಾರು ವರ್ಷಗಳಿಂದ ನಮ್ಮ ಗ್ರಾಮೀಣ ಸಂಸ್ಕೃತಿಯ ಭಾಗವಾಗಿ ಬೆಳೆದುಬಂದ ಕೃಷಿ ಸಂಬಂಧದ ಪಾರಂಪರಿಕ ಜ್ಞಾನವನ್ನು ನಾವು ಆಧುನಿಕರಾಗುವ ಭರದಲ್ಲಿ ಕಳೆದು ಕೊಳ್ಳುತ್ತಿದ್ದೇವೆ. ಹೀಗೆ ಕಳೆದುಕೊಂಡು ಮತ್ತೆ ಹುಡುಕಲು ಪ್ರಾರಂಭಿಸುತ್ತಿದ್ದೇವೆ. 'ಕೆಟ್ಟ ಮೇಲೆ ಬುದ್ಧಿ ಬಂತು' ಎನ್ನುವ ಹಾಗೆ ಈಗ ನಮಗೆ ಸಾವಯವ ಕ್ರಮದಲ್ಲಿ ಬೆಳೆದ ಹಣ್ಣು, ತರಕಾರಿ, ಧಾನ್ಯಗಳು ಬೇಕು; ಮರೆಯಾಗುತ್ತಿರುವ ನವಣೆ, ಹಾರಕ, ಸಾಮೆ ಮುಂತಾದ ಧಾನ್ಯಗಳು ಮತ್ತು ಸ್ಥಳೀಯ ಜೋಳ ಬೇಕು. ನಂಜನಗೂಡಿನ ರಸಬಾಳೆ ಹಣ್ಣಿನ ಸವಿಯ ನೆನಪು ನಮ್ಮನ್ನು ಕಾಡುತ್ತದೆ. ನಂಜನಗೂಡಿನ ರಸಬಾಳೆ ಸವಿಯಬೇಕಾದರೆ ಈಗ ಆಸ್ಟ್ರೇಲಿಯಾ ದೇಶಕ್ಕೆ ಹೋಗಬೇಕು. ಏಕೆಂದರೆ ಈ ತಳಿಯನ್ನು ಅವರು ತಮ್ಮ ದೇಶಕ್ಕೆ ಕೊಂಡೊಯ್ದು ಬೆಳೆಯುತ್ತಿದ್ದಾರಂತೆ. ಚಿಕ್ಕಮಗಳೂರಿನ ಸುತ್ತಮುತ್ತ ಎಮ್ಮೆ ದಡ್ಡಿ ಕಿತ್ತಳೆ ಹಣ್ಣು ಎಂಬ ಕಿತ್ತಳೆ ಹಿಂದೆ ಅತ್ಯಂತ ಜನಪ್ರಿಯವಾಗಿತ್ತಂತೆ. ಆದರೆ ಈಗ ಅದರ ವಾಸನೆಯೂ ಸಿಗುವುದಿಲ್ಲ.

ಕೃಷಿಯೇ ಜೀವನಕ್ರಮವಾಗಿರುವಾಗ ವ್ಯವಸಾಯ ಪದ್ಧತಿಯಲ್ಲಿ ನಮ್ಮ ಗ್ರಾಮೀಣ ಮಹಿಳೆಯರಿಗೆ ಅವರದೇ ಆದ ಪಾತ್ರವಿತ್ತು, ಸ್ಥಾನವಿತ್ತು. ಹೈಬ್ರಿಡ್ ಬೀಜ, ರಾಸಾಯನಿಕ ಗೊಬ್ಬರ ಮತ್ತು ಕಳೆನಾಶಕಗಳು ಕೃಷಿಕ್ಷೇತ್ರವನ್ನು ಪ್ರವೇಶಿಸಿದ ಮೇಲೆ ಮಹಿಳೆಯರಿಗಿದ್ದ ಪಾರಂಪರಿಕ ಜ್ಞಾನಕ್ಕೆ ಅವಕಾಶವೇ ಇಲ್ಲ. ಹಾಗಾಗಿ ಮಹಿಳೆಯರ ಪಾತ್ರ ಈಗ ಪ್ರಧಾನವೂ ಅಲ್ಲ, ಅದಕ್ಕೆ ಘನತೆಯೂ ಇಲ್ಲ. ಹೆಚ್ಚೆಂದರೆ ಆಕೆ ಕಡಿಮೆ ಬೆಲೆಗೆ ದುಡಿವ ಎರಡನೇ ದರ್ಜೆಯ ಕೂಲಿ ಆಳು, ಅಷ್ಟೆ.

ಜಾಗತೀಕರಣ ಮತ್ತು 'ಅಭಿವೃದ್ಧಿಗಳು' ಸಮಾಜದ ಎಲ್ಲಾ ದುರ್ಬಲ ವರ್ಗಗಳನ್ನು ಅಂಚಿಗೆ ತಳ್ಳುತ್ತವೆ ಎಂದು ಪೇಲವವಾಗಿ ಗುರುತಿಸಿದ ಅಂಶಕ್ಕೆ ದಿನ ಕಳೆದಂತೆ ಪುಷ್ಟಿ ದೊರೆಯುತ್ತಿದೆ. ಜಾಗತೀಕರಣ ಗೆಲ್ಲುವ ಕುದುರೆಗಳಿಗೆ ಮಾತ್ರ ಹುಲ್ಲು ಹಾಕು ಎನ್ನುತ್ತದೆ. ನಮ್ಮ ಸರ್ಕಾರಗಳೂ ಸಹ ಈ ಗೆಲ್ಲುವ ಕುದುರೆಗಳಿಗೆ ಮಾತ್ರ ಹುಲ್ಲು ಹಾಕುವ ವಿತ್ತ ನೀತಿಯನ್ನು ರೂಪಿಸುತ್ತವೆ. ಉದಾಹರಣೆಗೆ, ೧೯೬೯–೭೪ರ ಸಮಯದ ನಾಲ್ಕನೇ ಪ್ಲ್ಯಾನ್‌ನಲ್ಲಿ ಕೃಷಿಗೆ ಎಂದು ಶೇಕಡ ೩೧ರಷ್ಟು ಭಾಗ ಬಜೆಟ್‌ಅನ್ನು ಮೀಸಲಿಡಲಾಗಿತ್ತು. ಆ ನಂತರ ನಮ್ಮ ಸರ್ಕಾರ ಕೃಷಿಗಾಗಿ ಮೀಸಲಿರಿಸುವ ಹಣವನ್ನು ಕ್ರಮೇಣ ಕಡಿಮೆ ಮಾಡುತ್ತ, ಕೊನೆಗೆ ೧೧ನೇ ಪ್ಲ್ಯಾನ್ ವೇಳೆಗೆ ಶೇಕಡ ೧೦.೬ ಭಾಗವನ್ನು ಮಾತ್ರ ಬಜೆಟ್‌ನಲ್ಲಿ ಕೃಷಿಗಾಗಿ ಹಂಚಿಕೆ ಮಾಡಿತು. ೨೦೦೧–೨೦೧೧ರ ನಗರ ಪ್ರದೇಶಗಳ ಜನಸಂಖ್ಯೆಯನ್ನು ಹೋಲಿಸಿದರೆ ೨೦೧೧ರಲ್ಲಿ ನಗರ ಪ್ರದೇಶದ ಜನಸಂಖ್ಯೆ ಅಸಹಜವಾಗಿ ವೃದ್ಧಿಯಾಗಿರುವುದು ಕಂಡುಬರುತ್ತದೆ. ಗ್ರಾಮೀಣ ಪ್ರದೇಶದ ಜನ ನಗರಗಳಿಗೆ ಗುಳೆ ಹೋಗುತ್ತಿರುವುದೇ ಈ ಜನಸಂಖ್ಯಾ ಹೆಚ್ಚಳಕ್ಕೆ ಕಾರಣ. ಈ ಪ್ರಕ್ರಿಯೆಯಲ್ಲಿ ಅತಿ ಹೆಚ್ಚು ಕಷ್ಟ ಅನುಭವಿಸುವವರೆಂದರೆ ನಮ್ಮ ಮಹಿಳೆಯರು ಮತ್ತು ಮಕ್ಕಳು. ಸರ್ಕಾರಿ ಸಮೀಕ್ಷೆಯ ಪ್ರಕಾರವೇ ಶೇಕಡ ೪೦ರಷ್ಟು ಭಾಗ ನಮ್ಮ ಸಣ್ಣ ರೈತರು ವ್ಯವಸಾಯದಿಂದ ವಿಮುಖರಾಗಿರುವುದು ತಿಳಿದುಬರುತ್ತದೆ. ಈ ರೈತರು ಹೇಳುತ್ತಾರೆ, "ನಮ್ಮ ಮಕ್ಕಳಾದರೂ ಈ ವ್ಯವಸಾಯದ ಬವಣೆಯಿಂದ ಪಾರಾಗಲಿ" ಎಂದು. ದೇಶದ ಶೇಕಡ ೮೭ರಷ್ಟು ಭಾಗದ ರೈತರು ಸಣ್ಣ ಹಿಡುವಳಿದಾರರು. ಇವರಿಗೆ ಇರುವ ಸರಾಸರಿ ಭೂಮಿ ೧.೩ ಹೆಕ್ಟೇರ್. ಈ ಸಣ್ಣ ಹಿಡುವಳಿದಾರರು ಸಶಕ್ತರಾಗಲು, ಸ್ವಾವಲಂಬಿಗಳಾಗಿ ಬದುಕಲು ನಮ್ಮ ದೇಶ ಏನು ಕ್ರಮ ಜರುಗಿಸಿದೆ? ಆದರೆ ನಮ್ಮ ಘನ ಸರ್ಕಾರ ಕಾರ್ಪೋರೇಟ್ ಸಂಸ್ಥೆಗಳಿಗೆ, ವಿಶೇಷ ಆರ್ಥಿಕ ವಲಯಗಳಿಗೆ ನಿರಂತರವಾಗಿ ಅನೇಕ ಬಗೆಯ ರಿಯಾಯಿತಿಗಳನ್ನು ಘೋಷಿಸುತ್ತ ಪ್ರಗತಿ ಸಾಧಿಸುತ್ತಿರುವುದಾಗಿ ಹೇಳಿಕೊಳ್ಳುತ್ತಿದೆ.

ಈ ಸಂದರ್ಭದಲ್ಲಿ ನಾವು ಗಾಂಧೀಜಿಯವರ ಮಾತನ್ನು ನೆನೆಯಬೇಕು. ಅವರು ಹೇಳುತ್ತಾರೆ: "ನನಗೆ ಮನವರಿಕೆಯಾಗಿರುವ ಒಂದು ಅಂಶ ಏನೆಂದರೆ ಇಂಡಿಯಾ ದೇಶ ನಿಜವಾದ ಸ್ವಾತಂತ್ರ್ಯ ಪಡೆಯಬೇಕಾದರೆ, ತನ್ಮೂಲಕ ಪ್ರಪಂಚವೂ ಪಡೆಯಬೇಕಾದರೆ, ಜನ ಹಳ್ಳಿಗಳಲ್ಲಿ ಬದುಕಬೇಕು, ಪಟ್ಟಣಗಳಲ್ಲಿ ಅಲ್ಲ. ಗುಡಿಸಲುಗಳಲ್ಲಿ ವಾಸಿಸಬೇಕು, ಮಹಲುಗಳಲ್ಲಿ ಅಲ್ಲ. ನಗರಗಳಲ್ಲಿ, ಮಹಲುಗಳಲ್ಲಿ ವಾಸಿಸುವ ಕೋಟ್ಯಂತರ ಜನ ಪರಸ್ಪರ ಶಾಂತಿಯಿಂದ, ನೆಮ್ಮದಿಯಿಂದ ಬದುಕಲಾರರು. ಹೀಗೆ ಬದುಕುವ ಇವರು ಹಿಂಸೆ ಮತ್ತು ಅಸತ್ಯಕ್ಕೆ ಶರಣಾಗದೆ ಅನ್ಯ ಮಾರ್ಗವಿಲ್ಲ."

**ನಮ್ಮ ಪ್ರಾಥಮಿಕ ಶಾಲಾಪಠ್ಯ ಪುಸ್ತಕಗಳಲ್ಲಿ ಕೃಷಿ ಪಾಠಗಳು**

ನಮ್ಮ ಪ್ರಾಥಮಿಕ ಶಾಲಾ ಪಠ್ಯಪುಸ್ತಕಗಳನ್ನು ಗಮನಿಸಿದರೆ ಅಲ್ಲಿ ಶ್ರಮಸಂಸ್ಕೃತಿಯನ್ನು ಎತ್ತಿ ಹಿಡಿಯುವ ಪ್ರಯತ್ನವೇ ಇಲ್ಲದಿರುವುದು ಕಂಡುಬರುತ್ತದೆ. ಕಂಪ್ಯೂಟರ್ ಕಲಿಕೆಗೆ, ತಂತ್ರಜ್ಞಾನದ ಮಹತ್ವವನ್ನು ಮನವರಿಕೆ ಮಾಡಿಕೊಡುವುದರ ಬಗ್ಗೆ ಆದ್ಯತೆ ಇದೆಯೇ ಹೊರತು ಶ್ರಮ ಜೀವನದ ಬಗ್ಗೆ ಅಲ್ಲಿ ಯಾವ ಉಲ್ಲೇಖವೂ ಇಲ್ಲ. ಶ್ರಮ ಎಂಬುದು ಬುದ್ಧಿವಂತರಲ್ಲದ ದುರದೃಷ್ಟಶಾಲಿಗಳಿಗೆ ಸಿಗುವ ಶಿಕ್ಷೆ ಎಂಬ ಚಿತ್ರವನ್ನು ಕಟ್ಟಿಕೊಡುತ್ತದೆ ನಮ್ಮ ಶಿಕ್ಷಣ. ಗಾಂಧೀಜಿಯವರ 'ನಯೀತಾಲೀಮು' ಈ ತಪ್ಪನ್ನು ನಿವಾರಿಸುವ ಒಂದು ಪ್ರಯತ್ನವಾಗಿತ್ತು. ಅದನ್ನು ಯಥಾವತ್ತಾಗಿ ಶಿಕ್ಷಣದಲ್ಲಿ ಅಳವಡಿಸದಿದ್ದರೂ 'ಶ್ರಮ' ಎಂಬುದು ನಮ್ಮ ಸಾಮಾಜಿಕ ಜವಾಬ್ದಾರಿಗೆ ಸಂಬಂಧಪಟ್ಟದ್ದು, ನಮ್ಮ ಬದ್ಧತೆಗೆ ಸಂಬಂಧಪಟ್ಟ ಮೌಲ್ಯ ಎಂಬ ಅಂಶವನ್ನು ನಮ್ಮ ಶಿಕ್ಷಣ ಕ್ರಮ ಗುರುತಿಸಬೇಕು. ಒಟ್ಟಿನಲ್ಲಿ ತಂತ್ರಜ್ಞಾನ ಪರಿಣತಿಯನ್ನು ಗಳಿಸಿ, ಹಳ್ಳಿ ತೊರೆದು, ಪಟ್ಟಣ ಸೇರುವುದೇ ಜೀವನದ ಗುರಿ ಎಂಬ ಸಂದೇಶವನ್ನು ಮಕ್ಕಳಿಗೆ ನೀಡುತ್ತದೆ ಈ ಶಿಕ್ಷಣ.

ನಮ್ಮ ಪಠ್ಯಪುಸ್ತಕಗಳಲ್ಲಿ ಔಪಚಾರಿಕವಾಗಿ ಕೃಷಿ ಬಗ್ಗೆ ಪಾಠಗಳಿವೆ. ಆದರೆ ಈ ಪಾಠಗಳಲ್ಲಿ ನಿಷೇಧಿಸಲಾದ ಕಳೆನಾಶಕಗಳನ್ನು ಮಕ್ಕಳಿಗೆ ಉದಾರವಾಗಿ ಪರಿಚಯಿಸುತ್ತಾರೆ. ಉದಾಹರಣೆಗೆ ಏಳನೇ ತರಗತಿಯ ಘಟಕ–೪ ಪಾಠದಲ್ಲಿ, "ಈ ಘಟಕದ ಕಲಿಕೆಯ ನಂತರ ನೀವೂ ಕಳೆನಾಶಕಗಳ ವಿಧಗಳನ್ನು, ಅವುಗಳಿಗೆ ಉದಾಹರಣೆಯನ್ನು ತಿಳಿದುಕೊಳ್ಳುವಿರಿ" ಎಂಬ ಪೀಠಿಕೆ ಇದೆ. ಈ ಪಾಠದಲ್ಲಿ ಮಕ್ಕಳಿಗೆ ಪರಿಚಯಿಸಲಾಗಿರುವ ಕಳೆನಾಶಕಗಳು ಯಾವುವೆಂದರೆ ಡಯುರಾನ್, ಸಿಮಜಿನ್, ಮ್ಯಾಟೇಚ್ ಎಂಬ ಮೊಳಕೆಪೂರ್ವ ಕಳೆನಾಶಕಗಳು. ಇವಲ್ಲದೆ ೨–೪ ಡಿ, ಪ್ಯಾರಾಕ್ವಿಟ್, ಪ್ರೊಪಾನಿಲ್ ಎಂಬ ಮೊಳಕೆ ನಂತರದ ಕಳೆನಾಶಕಗಳು. 'ಪ್ಯಾರಾಕ್ವಿಟ್' ಕಳೆನಾಶಕವನ್ನು ವಿಶ್ವ ಆರೋಗ್ಯ ಸಂಸ್ಥೆ ಅತ್ಯಂತ ಅಪಾಯಕಾರಿ ರಾಸಾಯನಿಕ ಎಂದು ಗುರುತಿಸುತ್ತದೆ. ಇದರ ವಿಷಕ್ಕೆ ಶಮನಕಾರಿ ಔಷಧಿಯೇ ಇಲ್ಲ ಎಂದು ಹೇಳುತ್ತದೆ. ಇದರ ಬಳಕೆಯನ್ನು ಚೈನಾ ದೇಶ ನಿಷೇಧಿಸಿದೆ. ಆದರೆ ನಾವು ಇದೊಂದು ದಿವ್ಯ ಔಷಧಿ ಎಂಬಂತೆ ಮಕ್ಕಳಿಗೆ ಪ್ರಾಥಮಿಕ ಹಂತದಿಂದಲೇ ಪರಿಚಯಿಸುತ್ತಿದ್ದೇವೆ. 'ಪ್ರೊಪಾನಿಲ್'



**ಅಭಿನಂದನೆ**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನೀಡುವ **ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ** (೨೦೧೨)ಯನ್ನು ಸ್ತ್ರೀವಾದಿ ಲೇಖಕಿ **ಶ್ರೀಮತಿ ಬಿ. ಎನ್. ಸುಮಿತ್ರಾ ಬಾಯಿ** ಅವರಿಗೆ ನೀಡಲಾಗಿದೆ. ಲೇಖಕಿಗೆ 'ಹೊಸತು – ನವಕರ್ನಾಟಕ' ಬಳಗದ ಅಭಿನಂದನೆಗಳು.

ಕಳೆನಾಶಕವನ್ನು ಶ್ರೀಲಂಕಾ ನಿಷೇಧಿಸಿದೆ. ವಾಸ್ತವವಾಗಿ ಕಳೆನಾಶಕಗಳನ್ನು ಅನೇಕ ದೇಶಗಳು ನಿಷೇಧಿಸಿವೆ. ಇವು ವಿಷಕಾರಿ ಯಾದ್ದರಿಂದ ಬಳಸಬಾರದು ಎಂಬ ಎಚ್ಚರಿಕೆಯನ್ನು ನಾವು ನಮ್ಮ ಮಕ್ಕಳಿಗೆ ಕೊಡಬೇಕು. ಆದರೆ ಇವುಗಳನ್ನು ಪ್ರಗತಿಪರ ವ್ಯವಸಾಯ ಕ್ರಮ ಎಂಬಂತೆ ಪರಿಚಯಿಸುತ್ತಿದ್ದೇವೆ. ನಮ್ಮ ಪಠ್ಯಪುಸ್ತಕ ಸಮಿತಿಗಳಿಗೆ ಈ ಬಗ್ಗೆ ಕನಿಷ್ಠ ಮಾಹಿತಿಯೂ ಇಲ್ಲವೆ ?



**ಸಮಗ್ರ ಕೃಷಿ ಕ್ರಮ ಅನುಸರಿಸಿ ಸಣ್ಣ ರೈತರೂ ನೆಮ್ಮದಿಯಾಗಿ ಬದುಕಬಹುದು**

ಸರ್ಕಾರ ಸಣ್ಣ ರೈತರನ್ನು ಕಡೆಗಣಿಸಿ ರುವುದು ನಿಜವಾದರೂ ರೈತರು ಸಂಪೂರ್ಣ ಹತಾಶರಾಗಿ ತಮ್ಮ ಜಮೀನನ್ನು ಮಾರಿ ಗುಳೆ ಹೋಗುವ ಅಗತ್ಯವಿಲ್ಲ. ಸಣ್ಣ ರೈತರು "ಪ್ರಗತಿಪರ ರೈತರು" ಎಂದು ಹೆಸರು ಪಡೆದ "ರೈತೋದ್ಯಮಿ"ಗಳನ್ನು ಅನುಕರಿಸಲು ಹೋಗಿ ಸೋಲುತ್ತಿದ್ದಾರೆ. ಬದಲಾದ ವ್ಯವಸಾಯದ ಮಾದರಿಗಳು, ಬದಲಾಗುತ್ತಿರುವ ಜೀವನ ದೃಷ್ಟಿ ಈ ಸೋಲಿನ ಹಿಂದೆ ಇದೆ. ಆದರೆ ಸತ್ಯವೇನೆಂದರೆ ೩–೪ ಎಕರೆ ಜಮೀನು ಇರುವ ರೈತರು ಮಳೆ ಆಶ್ರಯದಲ್ಲಿ ಬೆಳೆ ತೆಗೆದು ಕುಟುಂಬಕ್ಕೆ ಅಗತ್ಯವಾದ ಎಲ್ಲವನ್ನು ಒದಗಿಸಿಕೊಂಡು ಬದುಕಬಹುದು. ತನ್ನ ಹೊಲದಲ್ಲಿ ದುಡಿದು ಸಂಪಾದಿಸುವುದಕ್ಕಿಂತ ದಿನಗೂಲಿಯೇ ಹೆಚ್ಚು ಲಾಭದಾಯಕವೆಂದು ಭಾವಿಸುವ ಕೆಲವು ರೈತರು ವ್ಯವಸಾಯದ ಒಂದು ಅದ್ಭುತ ಅವಕಾಶವನ್ನು ಕಳೆದುಕೊಳ್ಳುತ್ತಿದ್ದಾರೆ. ಆದರೆ ಕಣ್ಣಿಗೆ ಕಾಣುವ ಆರ್ಥಿಕ ಲಾಭಕ್ಕಿಂತ ತನ್ನ ಕುಟುಂಬದ ದಿನನಿತ್ಯದ ಅಗತ್ಯವನ್ನು ನಿರಂತರವಾಗಿ ಈ ವ್ಯವಸಾಯದ ಬದುಕು ಒದಗಿಸಿಕೊಡಬಲ್ಲದು ಎಂಬುದನ್ನು ರೈತ ಗುರುತಿಸಬೇಕು. ಇಂತಹ ಸಾಧ್ಯತೆಯನ್ನು ರೈತ "ಸಮಗ್ರ ಕೃಷಿ" ವಿಧಾನದಲ್ಲಿ ಕಂಡುಕೊಳ್ಳಬೇಕಾಗಿದೆ. ಕುಟುಂಬಕ್ಕೆ ಅಗತ್ಯವಾದ ಹಾಲು, ತರಕಾರಿ, ಹಣ್ಣು ಮತ್ತು ದನ, ಕುರಿ, ಕೋಳಿಗಳಿಗೆ ಮೇವು ಈ ಎಲ್ಲವೂ ಸಮಗ್ರ ಕೃಷಿಯಲ್ಲಿ ಸಾಧ್ಯ, ಉಳಿತಾಯವೂ ಸಾಧ್ಯ. ಹೊಲದ ಈ ಗಳಿಕೆ ಕೂಲಿ ಸಂಪಾದನೆಯಂತೆ ಅಲ್ಲ. ಕೂಲಿ ಹಣದಿಂದ ೧ ಲೀಟರ್ ಹಾಲು ಕೊಳ್ಳುವುದಕ್ಕೂ ತನ್ನ ಹಸುವಿನ ಹಾಲನ್ನು ತಾನೇ ಕರೆದು ಉಪಯೋಗಿಸುವುದಕ್ಕೂ ವ್ಯತ್ಯಾಸವಿದೆ. ಕೂಲಿ ಹಣದಲ್ಲಿ ದುಬಾರಿ ತರಕಾರಿ ಕೊಳ್ಳುವುದಕ್ಕೂ ತನ್ನ ಹೊಲದ ಅಂಚಿನಲ್ಲಿ ಬೆಳೆದ ತರಕಾರಿಯನ್ನು ನಿರುಮ್ಮಳವಾಗಿ ತಂದು ಉಪಯೋಗಿಸುವುದಕ್ಕೂ ವ್ಯತ್ಯಾಸವಿದೆ. ಅಷ್ಟೇ ಅಲ್ಲ, ಕುರಿ ಮೇಕೆಗಳ, ಎಮ್ಮೆ, ದನಗಳ ಸಂತಾನ ವೃದ್ಧಿಯಾದಂತೆ ರೈತನಿಗೆ ದೊಡ್ಡ ಮೊತ್ತದ ಹಣ ಏಕಾಏಕಿ ಸಿಗುತ್ತದೆ. ಆದರೆ ಇದೆಲ್ಲ ಸಾಧ್ಯವಾಗುವುದು ಸಮಗ್ರ ಕೃಷಿ ವಿಧಾನದಿಂದ. ಸಮಗ್ರ ಕೃಷಿಯಲ್ಲಿ ರೈತ ಕೇವಲ ರಾಗಿ, ಜೋಳಗಳನ್ನು ಮಾತ್ರ ಬೆಳೆದು ಹಣ ಸಂಪಾದಿಸುವುದಿಲ್ಲ. ಕೇವಲ ಧಾನ್ಯಗಳ ಬೆಳೆಯಿಂದ ರೈತನಿಗೆ ಕುಟುಂಬ ನಿರ್ವಹಣೆಯೂ ಸಾಧ್ಯವಾಗದಿರಬಹುದು. ಆದರೆ ಸಮಗ್ರ ಕೃಷಿಯಲ್ಲಿ ಪಶುಸಾಕಾಣಿಕೆ, ಹೈನುಗಾರಿಕೆ, ಕೋಳಿ ಸಾಕಾಣಿಕೆ ಇವಷ್ಟೇ ಅಲ್ಲದೆ ಹೊಲದ ಅಂಚಿನಲ್ಲಿ ಬೆಳೆಯುವ ಹಣ್ಣಿನ ಮರಗಳಿಂದ ಆದಾಯ – ಹೀಗೆ ಅನೇಕ ಮಜಲುಗಳಲ್ಲಿ ರೈತನಿಗೆ ಆದಾಯವಿದೆ. ರೈತ ತನ್ನ ಹೊಲದ ಬದುವಿನಲ್ಲಿ ದನಕರುಗಳಿಗಾಗಿ ಅನೇಕ ಬಗೆಯ ಮೇವಿನ ಬೆಳೆಗಳನ್ನು ತೆಗೆಯಬಹುದು, ಉರುವಲು, ಮನೆಕಟ್ಟಲು ಮರಗಳನ್ನು ಬೆಳೆಯ ಬಹುದು. ಮೇವು ಗೊಬ್ಬರವಾಗಿ ಮಾರ್ಪಾಟಾಗಿ ಮಣ್ಣಿನ ಗುಣಮಟ್ಟವನ್ನು, ಕೃಷಿ ಉತ್ಪನ್ನವನ್ನು ಹೆಚ್ಚಿಸುತ್ತದೆ. ಹೀಗೆ ಸಮಗ್ರ ಕೃಷಿ ವಿಧಾನದಲ್ಲಿ ತಾಳಿ ಬಾಳುವವನು ಮೇಲೆ ಬರುತ್ತಾನೆ. ಈ ಕೃಷಿ ವಿಧಾನ ಏಕಾಏಕಿ ಲಾಭ ನೀಡದಿರ ಬಹುದು. ಆದರೆ ಕ್ರಮೇಣ ಇದು ಕೂಲಿಗಿಂತ ಹೆಚ್ಚು ಲಾಭ ಕೊಡುತ್ತದೆ.

ಬೈಫ್ ಸಂಸ್ಥೆಯ ಡಾ॥ ಪ್ರಕಾಶ್ ಭಟ್‌ರವರು ಬರೆದಿರುವ 'ನೇಗಿಲು ಸುಖವಾಗಿ ಉಳಲಿ' ಎಂಬ ಪುಸ್ತಕದಲ್ಲಿ ಅನೇಕ ಸಣ್ಣ ರೈತರ ಯಶೋಗಾಥೆಯನ್ನು ವಿವರಿಸಲಾಗಿದೆ. ಕೃಷಿಯಲ್ಲಿ ನಂಬಿಕೆ ಕಳೆದುಕೊಂಡು ಗುಳೆ ಹೋಗುತ್ತಿದ್ದ ರೈತನನ್ನು ತಡೆದು, ಧೈರ್ಯ ಹೇಳಿ ಮರಳಿ ಕೃಷಿಗೆ ಕರೆ ತಂದಿದ್ದಾರೆ. ಹೀಗೆ ಮರಳಿ ಮಣ್ಣಿಗೆ ಹಿಂದಿರುಗಿದ ರೈತರು ಸಮಗ್ರ ಕೃಷಿ ವಿಧಾನ ಅನುಸರಿಸಿ ಈಗ ಆರ್ಥಿಕವಾಗಿ ಸುಸ್ಥಿತಿಯಲ್ಲಿರುವುದಷ್ಟೇ ಅಲ್ಲ, ಒಂದು ಶಿಸ್ತಿನ ನೆಮ್ಮದಿಯ ಜೀವನವನ್ನು ನಡೆಸುತ್ತಿದ್ದಾರೆ. ಈ ರೈತರಿಗೆ ವರ್ಷವಿಡೀ ಕೈತುಂಬ ಕೆಲಸವಿರುತ್ತದೆ. "ರೈತರು ಬಡವರಾಗಿರುವುದಕ್ಕೆ ಕಾರಣ ಅವರಿಗೆ ವರ್ಷವಿಡೀ ಕೆಲಸವಿಲ್ಲ" ಎಂಬ ಗಾಂಧೀಜಿಯವರ ಹೇಳಿಕೆಯನ್ನು ಈ ಸಮಯದಲ್ಲಿ ನೆನೆಯಬಹುದು. ಆದರೆ ಸಮಗ್ರ ಕೃಷಿಯಲ್ಲಿ ರೈತ ಮತ್ತು ಅವನ ಕುಟುಂಬ ವರ್ಷವಿಡೀ ನಿರಂತರವಾದ ಉತ್ಪಾದನೆಯಲ್ಲಿ ತೊಡಗುತ್ತಾರೆ. ಈ ರೈತರು ಬರದ ಸಮಯದಲ್ಲೂ ಕಂಗಾಲಾಗದೆ ವ್ರತದಂತೆ ಕೃಷಿಭೂಮಿಯಲ್ಲಿ ದುಡಿದು ಮತ್ತೆ ಹಸಿರಿಗೆ ಮರಳುವ ಭೂಮಿತಾಯಿಯ ಮಡಿಲಲ್ಲಿ ಕ್ಷೇಮ ವಾಗಿದ್ದಾರೆ.

ಇಂತಹ ಕೃಷಿ ಜೀವನಕ್ಕೆ ಬಹಳ ಮುಖ್ಯವಾಗಿ ಬೇಕಾದದ್ದು ಎಂದರೆ "ಶಿಸ್ತು". ಎಡೆಬಿಡದೆ ಶಿಸ್ತಿನಿಂದ ದುಡಿಯುವ ಮೂಲಕ ಕಷ್ಟಗಳ ಕೋಟಲೆ ದಾಟುತ್ತೇವೆ ಎಂದು ನಂಬಿ ಈ ರೈತರು ಸುಸ್ಥಿರ ಕೃಷಿ ಕ್ರಮವನ್ನು ಅನುಸರಿಸುತ್ತಾರೆ. ಕೃಷಿ ಹೊಂಡಗಳ ಮೂಲಕ ನೀರಿನ ಸಂರಕ್ಷಣೆ ಕೃಷಿಗೆ ಸಹಾಯವಾಗುತ್ತದೆ. ಅಣ್ಣಾ ಹಜಾರೆಯವರು ತಮ್ಮ ಹಳ್ಳಿ ರಾಲೆಗಾಂವ್‌ಸಿದ್ಧಿ ಯಲ್ಲಿ ಸಮಗ್ರ ಕೃಷಿ ಕ್ರಮಗಳನ್ನನುಸರಿಸಿ ಇಡೀ ಹಳ್ಳಿಯನ್ನೇ ಬದಲಿಸಿದರು. ಸಮಗ್ರ ಕೃಷಿಯಲ್ಲಿ ಒಂದು ಸಂಕೀರ್ಣ ವ್ಯವಸ್ಥೆ ತನಗೆ ತಾನೆ ರೂಪುಗೊಳ್ಳುತ್ತದೆ. ಇಂತಹ ಸಮಗ್ರವಾದ ಬಹುಮುಖಿ ಕೃಷಿ ಒಂದಲ್ಲ ಒಂದು ಕಾರಣಕ್ಕೆ ರೈತನಿಗೆ ಆರ್ಥಿಕ ಲಾಭ ಕೊಡುತ್ತಲೇ ಇರುತ್ತದೆ.

ಸಮಗ್ರ ಕೃಷಿಯಲ್ಲಿ ರೈತ ಶಿಸ್ತುಬದ್ಧವಾಗಿ ಅನುಸರಿಸಬೇಕಾದ ಅನೇಕ ಕ್ರಮಗಳಿವೆ. "ಹೊಚ್ಚಿಗೆ ಅಥವಾ ಮುಚ್ಚುಗೆ" – ಎಂದರೆ ಸೊಪ್ಪು ಸೆದೆ ಅಥವಾ ಸೋಗೆ ಗರಿಗಳಿಂದ ಭೂಮಿಯನ್ನು ಮುಚ್ಚುವುದು, ಎಲೆಗೊಬ್ಬರ ತಯಾರಿಸುವುದು, ಕೊಟ್ಟಿಗೆ ಗೊಬ್ಬರದ ಗುಣಮಟ್ಟವನ್ನು ಹಾಳಾಗದಂತೆ ರಕ್ಷಿಸುವ ವಿಧಾನ – ಹೀಗೆ ಹತ್ತು ಹಲವು ಸರಳ ಮಾರ್ಗವನ್ನು ಅನುಸರಿಸುವುದರಿಂದ ರೈತನಿಗೆ ಕ್ರಮೇಣ ಲಾಭಾಂಶ ಹೆಚ್ಚುತ್ತಾ ಹೋಗುತ್ತದೆ. ಮೇಲ್ನೋಟಕ್ಕೆ ಇವೆಲ್ಲ ಮಹತ್ವದ ಸಂಗತಿಯಲ್ಲವೇನೋ ಎಂಬಂತೆ ಕಾಣಬಹುದು. ಆದರೆ ಶಿಸ್ತಿನಿಂದ ವ್ರತದೋಪಾದಿಯಲ್ಲಿ ಈ ಕ್ರಮಗಳನ್ನು ಅನುಸರಿಸುವುದರಿಂದ ರೈತನಿಗೆ ಲಾಭವಿದೆ. ಜೊತೆಗೆ ಇಂತಹ ಶಿಸ್ತು ಮೈಗೂಡಿದ ರೈತ ಜೀವನದ ಇತರ ಸಂದರ್ಭಗಳಲ್ಲೂ ಶಿಸ್ತಿನಿಂದ, ತಾಳ್ಮೆಯಿಂದ ವರ್ತಿಸುತ್ತಾನೆ. ಕೃಷಿಯ ಶಿಸ್ತು ಕೇವಲ ಹೊಲದ ಬೆಳೆ ತೆಗೆಯಲು ಮಾತ್ರ ಉಪಯೋಗವಾಗುವುದಿಲ್ಲ, ಅದು ಇಡೀ ಜೀವನದ ಬೆಳೆ ತೆಗೆಯಲೂ ಕೂಡ ಸಹಾಯ ಮಾಡುತ್ತದೆ. ಜೀವನ ದೃಷ್ಟಿಯನ್ನು, ಜೀವನದ ಮೌಲ್ಯಗಳನ್ನು ರೂಪಿಸುತ್ತದೆ. ಗಾಂಧೀ ಕನಸಿನ ಗ್ರಾಮಸ್ವರಾಜ್ಯ ಸಾಧ್ಯವಾಗುವುದು ಇಂತಹ ಸಮಗ್ರ ಕೃಷಿ ವಿಧಾನದಿಂದ. ಹೀಗೆ ಗ್ರಾಮ ಕ್ಷೇಮವನ್ನು ಸಾಧಿಸಿದರೆ ಸುಸಂಸ್ಕೃತ ರೈತ ಸಮುದಾಯವೊಂದು ನಮ್ಮ ನಡುವೆ ರೂಪುಗೊಳ್ಳುತ್ತದೆ. ಹಳ್ಳಿಯ ಬದುಕು ಬಂಗಾರವಾಗುತ್ತದೆ.

**ಜಿ. ಎಸ್. ಜಯದೇವ**
ದೀನಬಂಧು ಸಂಸ್ಥೆ
ಚಾಮರಾಜನಗರ

# ಶಿವಕೋಟ್ಯಾಚಾರ್ಯನ ವಡ್ಡಾರಾಧನೆ: ಕೆಲವು ವಿಚಾರಗಳು

ಡಾ|| ಸುಧಾಕರ ದೇವಾಡಿಗ ಬಿ.

ವಡ್ಡಾರಾಧನೆಗೆ ಕನ್ನಡದ ಮೊದಲ ಗದ್ಯ ಕೃತಿ ಎಂಬ ಹೆಗ್ಗಳಿಕೆಯಿದೆ. ಕೃತಿಯ ಹೆಸರು, ಲೇಖಕರನ್ನು ಕುರಿತು ಗೊಂದಲಗಳಿವೆ. ಇದನ್ನು ಬರೆದವನು ಶಿವಕೋಟ್ಯಾಚಾರ್ಯನಲ್ಲ; ಇದರ ಹೆಸರು ವಡ್ಡಾರಾಧನೆಯಲ್ಲ; ಎಂದು ಕನ್ನಡ ವಿದ್ವತ್ ವಲಯದಲ್ಲಿ ಚರ್ಚೆಗಳಿವೆ. ಇದರ ಲೇಖಕ ಯಾರು, ಕೃತಿಯ ನಿಜವಾದ ಹೆಸರೇನು ಎಂಬುದನ್ನು ಚರ್ಚಿಸುವುದು ಈ ಲೇಖನದ ಉದ್ದೇಶವಲ್ಲ. ಕೃತಿಯ ಗ್ರಹಿಕೆಗೆ ಇವಾವುವೂ ತೊಡಕಾಗಲಾರವು ಎಂಬ ನಂಬಿಕೆಯಿಂದ ಇಲ್ಲಿ ಕೃತಿಯನ್ನು ಕುರಿತು ಚರ್ಚಿಸಲಾಗಿದೆ. ಸಾಹಿತ್ಯವೆಂದರೆ ಕಾವ್ಯ, ಕಾವ್ಯವೆಂದರೆ ಸಾಹಿತ್ಯ ಎಂದು ಬಲವಾಗಿ ನಂಬಿದ್ದ ಕಾಲದಲ್ಲಿ ಗದ್ಯವನ್ನು ಆಯ್ಕೆ ಮಾಡಿಕೊಂಡದ್ದು ಆಕಸ್ಮಿಕವಲ್ಲ.

ಲೇಖಕ ತನ್ನ ವಿಚಾರವನ್ನು ಪ್ರತಿಪಾದಿಸಲು ಏಕೆ ಕತೆಯ ಪ್ರಕಾರವನ್ನು ಆಯ್ದುಕೊಂಡ? ಎಂಬ ಪ್ರಶ್ನೆ ಮುಖ್ಯವಾದುದು. ಇವನ ನಂತರದ ದುರ್ಗಸಿಂಹನಲ್ಲೂ ಕತೆಯ ಪ್ರಕಾರವೆ ಬಳಕೆಯಾಗಿದೆ. ವಡ್ಡಾರಾಧನೆಯಲ್ಲಿ ಧರ್ಮದ ತತ್ವ, ವ್ಯಕ್ತಿ ಅನುಸರಿಸಬೇಕಾದ 'ನೀತಿ'ಯ ವಿಚಾರಗಳೂ ಇವೆ. ಪಂಚತಂತ್ರವು ಅರಸನೊಬ್ಬನು ತನ್ನ ಮಕ್ಕಳನ್ನು ವಿವೇಕಿಗಳು, ನೀತಿನಿಪುಣರನ್ನಾಗಿ ಮಾಡಲು ಹೇಳಿದ ರಾಜನೀತಿ ಕತೆಗಳಾಗಿವೆ. ಎರಡು ಕೃತಿಗಳೂ 'ನೀತಿ'ಯನ್ನು ಪ್ರತಿಪಾದಿಸಲು ಕತೆಯನ್ನು ಮಾಧ್ಯಮವನ್ನಾಗಿ ಬಳಸಿಕೊಂಡಿವೆ.

ವಡ್ಡಾರಾಧನೆಯ ಕತೆಗಳನ್ನು ಅವು ತೊಟ್ಟ ಧಾರ್ಮಿಕ ಪರಿವೇಷವನ್ನು ಕಳಚಿಟ್ಟು ನೋಡಿದರೆ ಅದೊಂದು ಅಪ್ಪಟ ಮಾನವ ಸಂಬಂಧಗಳ ಕಥನ. ಇಲ್ಲಿ ಪ್ರೀತಿ, ಕಾಮ, ದ್ವೇಷ, ಮತ್ಸರ, ಅಸೂಯೆ, ಕ್ರೌರ್ಯ – ಹೀಗೆ ಸಾಮಾನ್ಯ ಮಾನವರಲ್ಲಿ ಗೋಚರಿಸುವ ಎಲ್ಲ ಗುಣಗಳಿರುವ ಜೀವಂತ ವ್ಯಕ್ತಿಗಳ ಕತೆಯಿದು. ಗುರುದತ್ತ ಭಟಾರರ ಕತೆಯಲ್ಲಿ ಬರುವ ಒಂದು ಸಣ್ಣ ವಿವರ ಹೀಗಿದೆ : ಉಪರಿಚರ ಎಂಬ ಮಹಾರಾಜ ತನ್ನ ನಾಲ್ವರು ಪತ್ನಿಯರೊಂದಿಗೆ ಸುಗಂಧ ದ್ರವ್ಯ, ಹಲವು ಬಗೆಯ ಹೂವು – ಹಂಸ – ಚಕ್ರವಾಕ ಮೊದಲಾದ ಪಕ್ಷಿಗಳಿಂದ ಕೂಡಿದ ಬಾವಿಯಲ್ಲಿ ಜಲಕ್ರೀಡೆಯಲ್ಲಿ ತೊಡಗಿದ್ದಾನೆ. ವಿಮಾನದಲ್ಲಿ ವಿಹರಿಸುತ್ತಿದ್ದ ವಜ್ರದಾಡ ಮತ್ತು ಅವನ ಪತ್ನಿ ಮದನವೇಗೆ ಇದನ್ನು ಕಾಣುತ್ತಾರೆ. ಇದನ್ನು ಕಂಡ ಮದನವೇಗೆ, "ನಾಮಾಕಾಶದೊಳ್ ಕಾಗೆಗಳಂತೆ ಪಾರುವನಿತಲ್ಲದೆ ನಮಗಿನಿತು ವಿಭವಮುಮೈಶ್ವರ್ಯಮುಂಟೇ ಶ್ರೀಯೊಳಂ ರೂಪಿನೊಳಂ ವಿಭವದೊಳಂ ನಾನಾ ಪ್ರಕಾರದ ವಿನೋದಂಗಳಿಂದು ಪರಿಚರ ಮಹಾರಾಜನಿಂದಗ್ಗಳಂ ಪೆರರಾರುಮಿಲ್ಲ ಸಂಸಾರದೊಳ್ ಬರ್ದ್ದ ಬಾಳಿನೀತನೆ ಬರ್ದ್ದ" (ಪು. ೧೧೧) ಎಂದು ಹೊಗಳುತ್ತಾಳೆ. ತನ್ನ ಪತ್ನಿ ಉಪರಿಚರನನ್ನು ಹೊಗಳಿದ್ದನ್ನು ಸಹಿಸದೆ ವಜ್ರದಾಡ ತನ್ನ ಮಂತ್ರ ಶಕ್ತಿಯಿಂದ ಅವರನ್ನು ಆ ಬಾವಿಯಲ್ಲಿ ಬಂಧಿಸಿ ಕೊಲ್ಲುತ್ತಾನೆ. ಇಂತಹ ಸಾಕಷ್ಟು ವಿವರಗಳು ಕೃತಿಯೊಳಗೆ ಇಡಕಿರಿದು ಸೇರಿವೆ.




ವಡ್ಡಾರಾಧನೆಕಾರ ಮಾನವೀಯತೆಯಿಂದ ಮಿಡಿಯುವ ಏಕಮುಖಿ ಪಾತ್ರಗಳನ್ನಷ್ಟೆ ಸೃಜಿಸಲಿಲ್ಲ. ಮಾನವೀಯತೆಯನ್ನು ಮರೆತು ಕ್ರೌರ್ಯದಿಂದ ವರ್ತಿಸುವ ಪಾತ್ರಗಳ ಚಿತ್ರಣವೂ ಇದೆ. 'ಭದ್ರಬಾಹು ಭಟಾರರ ಕತೆ'ಯಲ್ಲಿ ಬರುವ ವಿವರ ಹೀಗಿದೆ : "ಕಾಷ್ಠಕೂಟನೆಂಬುವವನಿಗೆ ದಿನಾಲು ಪುಳ್ಳೆಯನ್ನು ತಂದುಕೊಟ್ಟು ಸಿರಿವಂತನನ್ನಾಗಿ ಮಾಡಿದ್ದು ನಂದಿಮಿತ್ರ. ಅವನಿಗೆ ಕಾಷ್ಠಕೂಟನ ಹೆಂಡತಿ ಜಯಘಂಟೆ ಹೊಟ್ಟೆ ತುಂಬ ಊಟವನ್ನು ಬಡಿಸುತ್ತಾಳೆ. ಇದೇ ಮಹಾಪರಾಧವಾಗಿ ಕಾಷ್ಠಕೂಟ ಜಯಘಂಟೆಯನ್ನು ಬಡಿದಟ್ಟುತ್ತಾನೆ. 'ದಂಡಕರಿಸಿಯ ಕತೆ'ಯಲ್ಲಿ ಸುಧಾಮನೆಂಬ ದುಷ್ಟ ಎತ್ತುಗಳ ಬಾಯಿಕಟ್ಟಿ ವ್ಯವಸಾಯ ಮಾಡುವ ಇವನು ಕೆಲಸದ ಹೆಂಗಸರಿಗೆ ತಮ್ಮ ಶಿಶುಗಳಿಗೆ ಮೊಲೆಯುಣಿಸಲು ಬಿಡದ ದುಷ್ಟನು." ಮತ್ತೊಂದು ವಿವರ ಹೀಗಿದೆ : "ಗುರುದತ್ತ ಭಟಾರರ ಕತೆಯಲ್ಲಿ ಹಕ್ಕಿಯನ್ನು ಹಿಡಿಯುವ ವೃತ್ತಿಯವನ ಹೆಂಡತಿ ಗೋಮತಿ ಆಚಾರ್ಯರ ಧಾರ್ಮಿಕ ಬೋಧನೆಯಿಂದ ಪ್ರಭಾವಿತಳಾಗಿ ದಯೆಯಿಂದ ತನ್ನ ಮನೆಯಲ್ಲಿದ್ದ ಹಕ್ಕಿಗಳನ್ನು ಹಾರಿ ಬಿಡುತ್ತಾಳೆ. ಇದರಿಂದ ಕುಪಿತನಾದ ಗಂಡ ಅವಳನ್ನು ಮನೆಯಿಂದ ಓಡಿಸುತ್ತಾನೆ." ಹೀಗೆ ಮಾನವೀಯತೆ ಮರೆತು ಕ್ರೂರಿಗಳಾದ ವ್ಯಕ್ತಿಗಳನ್ನು ತನ್ನ ಕಥನದ ಭಾಗವಾಗಿಸಿಕೊಂಡಿದ್ದಾನೆ ಕೃತಿಕಾರ.

ಇಲ್ಲಿಯ ಕತೆಗಳಲ್ಲಿ ವ್ಯಕ್ತಿ ಅತ್ಯಂತ ವೈಭವಯುತವಾಗಿ ಜೀವಿಸಿ ಸಕಲ ಸುಖಗಳನ್ನು ಅನುಭವಿಸುವ ರೀತಿಯೂ ಇದೆ. ಅದೇ ರೀತಿ ಈ ಎಲ್ಲ ಸುಖಗಳನ್ನು ತ್ಯಜಿಸಿ ವ್ರತಧಾರಿಯಾಗಿ ತಪವನ್ನು ಆಚರಿಸಲು ಹೊರಟ ವ್ಯಕ್ತಿಗಳ ಕಥನವು ಎಲ್ಲ ಕತೆಗಳಲ್ಲೂ ಸಹಜವಾಗಿ ಕಂಡುಬರುತ್ತದೆ. ಇಷ್ಟ ವಿಷಯ ಕಾಮ ಭೋಗಗಳೊಂದಿಗೆ ಸಕಲ ಸುಖದಲ್ಲಿ ಮುಳುಗಿರುವುದು ಬದುಕಿನ ಒಂದು ತುದಿಯಾದರೆ, ಎಲ್ಲಾ ಸುಖವನ್ನೂ ನಿರಾಕರಿಸಿ ವ್ರತಧಾರಿಯಾಗಿ ತಪೋನಿರತರಾಗುವುದು ಮತ್ತೊಂದು ತುದಿ. ಈ ಎರಡರ ನಡುವೆ ವ್ಯಕ್ತಿ ಬದುಕಿನ ವಿಕಾಸವನ್ನು ಕಾಣುವ ಧೋರಣೆ ಈ ಕತೆಗಳ ಹಿಂದಿದೆ.

ವಡ್ಡಾರಾಧನೆ ಕತೆಗಳಲ್ಲಿ ಮತ್ತೆ ಮತ್ತೆ ಭವಾವಳಿಗಳ ಚಿತ್ರಣ ಬರುತ್ತದೆ. ಭವಾವಳಿಯನ್ನು ಸಾಂಕೇತಿಕವಾಗಿ ಗ್ರಹಿಸುವುದಾದರೆ ಇದು ಮನುಷ್ಯ ಬೆಳವಣಿಗೆಯ ಹಲವು ಮಜಲುಗಳ ಸೂಚಕ ಎಂದನ್ನಿಸುತ್ತದೆ. ಮನುಷ್ಯನೊಳಗಿನ ಕೆಡುಕು, ಮೃಗೀಯತೆ, ಒಳ್ಳೆಯತನ, ವಂಚನೆ ಇವೆಲ್ಲವೂ ಸಾಂದರ್ಭಿಕವಾಗಿ ವ್ಯಕ್ತಗೊಳ್ಳು ವಂಥವು. ಒಬ್ಬನೇ ವ್ಯಕ್ತಿಯೊಳಗಿನ ಈ ಎಲ್ಲಾ ಗುಣಗಳು ಭವಾವಳಿಯ ಮೂಲಕ ಕತೆಯಲ್ಲಿ ವ್ಯಕ್ತಗೊಂಡಿವೆ. ಭವಾವಳಿಯನ್ನು ವ್ಯಕ್ತಿತ್ವದ ಬೆಳವಣಿಗೆಯ ಭಾಗವಾಗಿಯೆ ಗ್ರಹಿಸಬೇಕು. ಈ ಕತೆಗಳಲ್ಲಿ ಬರುವ ವ್ರತವನ್ನಾಚರಿಸಿ ಪಡೆಯುವ ತಪ ಅದನ್ನು ವ್ಯಕ್ತಿ ಬೆಳವಣಿಗೆಯ ಅಂತಿಮ ಹಂತ ಎಂದು ಭಾವಿಸು ವುದಾದರೆ, ಇದನ್ನು ತಲುಪಲು ಎಲ್ಲರಿಗೂ ಅವಕಾಶವನ್ನು ಕಥನಕಾರ ನೀಡಿದ್ದಾನೆ. ಅದು ಮೊದಲ ಕತೆ ಸುಕುಮಾರಸ್ವಾಮಿ ಕತೆಯಲ್ಲಿ ಕಾಣುತ್ತೇವೆ. ಇಲ್ಲಿ ವಾಯುಭೂತಿಯು ರಿಷಿಯನ್ನು ಪರಿಭವಿಸಿ ಬಯ್ದು ಜಿನಧರ್ಮ ಹಳಿದ ಪಾಪದ ಫಲದಿಂದ ಹೆಣ್ಣು ಕತ್ತೆ, ಹಂದಿ, ನಾಯಿ, ಕೇಶಿ ಎಂಬ ದುರೂಪೆ, ದುರ್ಗಂಧೆ, ದುಸ್ವರೆ ಹುಟ್ಟುಕುರುಡಿಯಾಗಿ ಹುಟ್ಟಿದವನು ವ್ರತವನ್ನಾಚರಿಸಿ ಮೇಲೇರಿದ್ದನ್ನು ವಿವರಿಸುತ್ತದೆ. ವ್ಯಕ್ತಿತ್ವದ ಅಂತಿಮ ಹಂತ ತಲುಪಲು ಹುಟ್ಟು ಶ್ರೀಮಂತಿಕೆ, ಸಂಪತ್ತು, ಯಾವುದೂ ಮುಖ್ಯವಲ್ಲ ಎಂಬುದು ಕತೆಗಾರನ ಪ್ರಜಾಪ್ರಭುತ್ವವಾದಿ ನಿಲುವು.

ವಡ್ಡಾರಾಧನೆಕಾರ ಮಾನವೀಯತೆಯಿಂದ ಮಿಡಿಯುವ ಏಕಮುಖಿ ಪಾತ್ರಗಳನ್ನಷ್ಟೆ ಸೃಜಿಸಲಿಲ್ಲ. ಮಾನವೀಯತೆಯನ್ನು ಮರೆತು ಕ್ರೌರ್ಯದಿಂದ ವರ್ತಿಸುವ ಪಾತ್ರಗಳ ಚಿತ್ರಣವೂ ಇದೆ. 'ಭದ್ರಬಾಹು ಭಟಾರರ ಕತೆ'ಯಲ್ಲಿ ಬರುವ ವಿವರ ಹೀಗಿದೆ : "ಕಾಷ್ಠಕೂಟನೆಂಬುವವನಿಗೆ ದಿನಾಲು ಪುಳ್ಳಿಯನ್ನು ತಂದುಕೊಟ್ಟು ಸಿರಿವಂತನನ್ನಾಗಿ ಮಾಡಿದ್ದು ನಂದಿಮಿತ್ರ. ಅವನಿಗೆ ಕಾಷ್ಠಕೂಟನ ಹೆಂಡತಿ ಜಯಘಂಟೆ ಹೊಟ್ಟೆ ತುಂಬ ಊಟವನ್ನು ಬಡಿಸುತ್ತಾಳೆ. ಇದೇ ಮಹಾಪರಾಧವಾಗಿ ಕಾಷ್ಠಕೂಟ ಜಯಘಂಟೆಯನ್ನು ಬಡಿದಟ್ಟುತ್ತಾನೆ. 'ದಂಡಕರಿಸಿಯ ಕತೆ'ಯಲ್ಲಿ ಸುಧಾಮನೆಂಬ ದುಷ್ಟ ಎತ್ತುಗಳ ಬಾಯಿಕಟ್ಟಿ ವ್ಯವಸಾಯ ಮಾಡುವ ಇವನು ಕೆಲಸದ ಹೆಂಗಸರಿಗೆ ತಮ್ಮ ಶಿಶುಗಳಿಗೆ ಮೊಲೆಯುಣಿಸಲು ಬಿಡದ ದುಷ್ಟನು." ಮತ್ತೊಂದು ವಿವರ ಹೀಗಿದೆ : "ಗುರುದತ್ತ ಭಟಾರರ ಕತೆಯಲ್ಲಿ ಹಕ್ಕಿಯನ್ನು ಹಿಡಿಯುವ ವೃತ್ತಿಯವನ ಹೆಂಡತಿ ಗೋಮತಿ ಆಚಾರ್ಯರ ಧಾರ್ಮಿಕ ಬೋಧನೆಯಿಂದ ಪ್ರಭಾವಿತಳಾಗಿ ದಯೆಯಿಂದ ತನ್ನ ಮನೆಯಲ್ಲಿದ್ದ ಹಕ್ಕಿಗಳನ್ನು ಹಾರಿ ಬಿಡುತ್ತಾಳೆ. ಇದರಿಂದ ಕುಪಿತನಾದ ಗಂಡ ಅವಳನ್ನು ಮನೆಯಿಂದ ಓಡಿಸುತ್ತಾನೆ." ಹೀಗೆ ಮಾನವೀಯತೆ ಮರೆತು ಕ್ರೂರಿಗಳಾದ ವ್ಯಕ್ತಿಗಳನ್ನು ತನ್ನ ಕಥನದ ಭಾಗವಾಗಿಸಿಕೊಂಡಿದ್ದಾನೆ ಕೃತಿಕಾರ.




ವಡ್ಡಾರಾಧನೆ ಕತೆಯಲ್ಲಿ ಸಾಕಷ್ಟು ಸ್ತ್ರೀ ಪಾತ್ರಗಳು ಬರುತ್ತವೆ. ಅರಸನೊಬ್ಬ ಬಹುಪತ್ನಿಯರನ್ನು ಹೊಂದಿರುವುದನ್ನು ಈ ಕತೆಗಳು ಉತ್ಸಾಹದಿಂದ ವರ್ಣಿಸುತ್ತವೆ. ಬಹುಪತ್ನಿಯರನ್ನು ಹೊಂದುವುದು ಸಹಜವೆಂಬಂತೆ ಕತೆಗಾರ ಚಿತ್ರಿಸುತ್ತಾನೆ. ಹೆಣ್ಣನ್ನು ಭೋಗದ ಸರಕಾಗಿ ನೋಡುವ, ಹೆಣ್ಣಿರುವುದೆ ಪುರುಷನ ಭೋಗಕ್ಕೆ ಎಂಬ ಧೋರಣೆ ಅಲ್ಲಲ್ಲಿ ಕಂಡುಬರುತ್ತದೆ. ಬಹುಚರ್ಚಿತ 'ಕಾರ್ತಿಕ ಋಷಿಯ ಕತೆ'ಯಲ್ಲಿ ಅಗ್ನಿರಾಜ ತನ್ನ ಮಗಳು ಕೃತಿಕೆಯ ಸೌಂದರ್ಯಕ್ಕೆ ಮಾರುಹೋಗಿ ಅವಳನ್ನು ಬಯಸುತ್ತಾನೆ. ಆನೆ, ಕುದುರೆ, ಮಾಣಿಕ, ರತ್ನಗಳೊಟ್ಟಿಗೆ ಸ್ತ್ರೀಯನ್ನೂ ಸೇರಿಸಲಾಗಿದೆ. ಇದು ಸ್ಪಷ್ಟವಾಗಿ ಹೆಣ್ಣನ್ನು ವಸ್ತುವಾಗಿ ಕಾಣುವ ಧೋರಣೆಯನ್ನು ಸೂಚಿಸುತ್ತದೆ.

ಇದರ ಜೊತೆಗೆ ಅರಸರು ತಾವು ಬಯಸಿದ ಹೆಣ್ಣುಗಳು ಬೇರೆಯವರ ಹೆಂಡತಿಯರಾಗಿದ್ದಾಗಲೂ ಅವರನ್ನು ಅಧಿಕಾರದಿಂದ ತನ್ನ ವಶವಾಗಿಸಿಕೊಂಡ ನಿರೂಪಣೆಗಳು ಕತೆಯಲ್ಲಿ ಬರುತ್ತವೆ. 'ಸನತ್ಕುಮಾರ ಚಕ್ರವರ್ತಿಯ ಕತೆ'ಯಲ್ಲಿ ಪ್ರತಿಮುಖನೆಂಬ ಅರಸ ತನ್ನ ನಗರದ ಸಾರ್ಥಾಧಿಪತಿಯಾದ ನಾಗಚಂದ್ರನ ಪತ್ನಿ ವಿಷ್ಣುಶ್ರೀಯನ್ನು ಬಯಸಿ ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳುತ್ತಾನೆ. ಹೀಗೆ ಇನ್ನೊಬ್ಬರ ಅಧೀನರಾದ ಸ್ತ್ರೀಯರ ಅಭಿಪ್ರಾಯವೇನಾಗಿತ್ತು ಎಂದು ತಿಳಿಯು ವುದಿಲ್ಲ. 'ಗಜಕುಮಾರನ ಕತೆ'ಯಲ್ಲಿ ಒಂದು ವಿಚಿತ್ರ ವಿವರಣೆಯಿದೆ. ಇಲ್ಲಿ ಅರಸನು ತನ್ನ ವೈರಿ ರಾಜನನ್ನು ಸೋಲಿಸಿದವರಿಗೆ ಬೇಡಿದ್ದನ್ನು ಕೊಡುತ್ತೇನೆ ಎಂದು ಸಾರುತ್ತಾನೆ. ಗಜಕುಮಾರ ವೈರಿ ರಾಜನನ್ನು ಸೋಲಿಸಿ ಸಕಲ ವಸ್ತುಗಳ ಸಮೇತ ವಿಷ್ಣುವಿಗೆ ಒಪ್ಪಿಸುತ್ತಾನೆ. ಕೊಟ್ಟ ಮಾತಿನಂತೆ ಅರಸ ಅವನ ಬೇಡಿಕೆಯನ್ನು ಕೇಳಿದಾಗ ಗಜಕುಮಾರನ ಬಯಕೆ ತುಂಬ ವಿಚಿತ್ರ ವಾಗಿದೆ. ಅವನು ಅಂತಃಪುರದವರನ್ನು ಬಿಟ್ಟು ನಗರದ ಮೆಚ್ಚಿದ ಹೆಂಗಸರನ್ನು ಭೋಗಿಸುವ ಅವಕಾಶ ಬೇಡುತ್ತಾನೆ. ರಾಜ ಯೋಚನೆಮಾಡದೆ ಒಪ್ಪಿಗೆ ಸೂಚಿಸುತ್ತಾನೆ. ನಗರದ ಬ್ರಾಹ್ಮಣರ, ಒಕ್ಕಲಿಗರ, ಸಾಮಂತರ ಹೆಣ್ಣುಗಳನ್ನು ತನ್ನಿಚ್ಛೆಯಾನುಸಾರ ರಾಜಕುಮಾರ ಭೋಗಿಸುತ್ತಾನೆ. ಪುರುಷನ ಯಾಜಮಾನಿಕೆಯ ಧೋರಣೆ, ಹೆಣ್ಣನ್ನು ಕುರಿತ ಅವನ ನಿಲುವುಗಳನ್ನು ಈ ಕತೆಗಳು ಸೂಕ್ಷ್ಮವಾಗಿ ಮಂಡಿಸುತ್ತವೆ.

ವಡ್ಡಾರಾಧನೆಯ ಕತೆಗಳು ಪುರುಷ ದೃಷ್ಟಿಯಲ್ಲಿ ಹೆಣ್ಣನ್ನು ಗ್ರಹಿಸುವ, ಮಂಡಿಸುವಷ್ಟಕ್ಕೆ ನಿಲ್ಲುವುದಿಲ್ಲ. ಇದನ್ನು ಮೀರಿ ಹೆಣ್ಣಿನ ಆಂತರ್ಯದ ತುಮುಲ ಗಳನ್ನು ಹಿಡಿದಿಡುವ ಪ್ರಯತ್ನ ಕೆಲವು ಕತೆಗಳಲ್ಲಿದೆ. ಅರಸು ಪರಿವಾರದ ಮಹಿಳೆಯರು ಮತ್ತು ವ್ಯಾಪಾರಿ ಪರಿವಾರದ ಮಹಿಳೆಯರ ಬದುಕಿನ ಚಿತ್ರಣಕ್ಕೆ ಕತೆಯಲ್ಲಿ ಹೆಚ್ಚು ಅವಕಾಶವನ್ನು ಕಲ್ಪಿಸಲಾಗಿದೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸಣ್ಣ ಮಟ್ಟಿಗಾದರೂ ತಮ್ಮ ಪ್ರತಿರೋಧವನ್ನು ಅಭಿವ್ಯಕ್ತಿಸುವ ಸೂಚನೆ ಕೆಲವು ಕತೆಗಳಲ್ಲಿದೆ. ಕಾರ್ತಿಕ ಋಷಿಯ ಕತೆಯಲ್ಲಿ ಅಗ್ನಿರಾಜನ ಮಡದಿ ವೀರಮತಿ ಪತಿ ತನ್ನ ಮಗಳನ್ನೇ ಬಯಸಿದ್ದನ್ನು ಕಂಡು ವ್ರತಧಾರಿಯಾಗುತ್ತಾಳೆ.

ಸುಕೌಶಳಸ್ವಾಮಿ ಕತೆಯಲ್ಲಿ ಈ ಪ್ರತಿರೋಧ ನೇರವಾಗಿಯೇ ವ್ಯಕ್ತಗೊಂಡಿದೆ. ಜಯಾವತಿ ತನ್ನ ಸುಕೌಶಳ ತಪೋಧಾರಿಯಾದ್ದರಿಂದ ಕೋಪಗೊಂಡು ಜಿನಧರ್ಮ ಹಳಿದು ಅದೇ ನೋವಿನಲ್ಲಿ ಸಾಯುತ್ತಾಳೆ. ಮತ್ತೆ ಹುಲಿಯಾಗಿ ಹುಟ್ಟಿ ರಿಷಿಯಾದ ಮಗ ಸುಕೌಶಳನನ್ನು ಹಸಿವಿನಿಂದ ತಿನ್ನುತ್ತಾಳೆ.

ಇಲ್ಲಿನ ಕತೆಗಳಲ್ಲಿ ಸ್ತ್ರೀಯರು ಅರಮನೆಯ ಸುಖದ ಭೋಗಗಳಲ್ಲಿ ಮುಳುಗಿರುವುದರಿಂದ ಅವರ ಜಾಣ್ಮೆ ಪ್ರದರ್ಶನಕ್ಕೆ ಅವಕಾಶ ದೊರೆತಿಲ್ಲ. ಆದರೆ ಇವನ ಕತೆಗಳಲ್ಲಿ ಬರುವ ರಾಜ ಪರಿವಾರದಿಂದ ಹೊರಗಿರುವ ಮಹಿಳೆಯರಲ್ಲಿ ಅಪಾರ ಜಾಣ್ಮೆ ವ್ಯಕ್ತವಾಗಿದೆ. ಈ ಮಾತಿಗೆ ವಡ್ಡಾರಾಧನೆಯ ಮೊದಲ ಕತೆ ಸುಕುಮಾರ ಸ್ವಾಮಿಕತೆಯಲ್ಲಿಯೆ ನಿದರ್ಶನ ಕಾಣಬಹುದು. ಈ ಕತೆಯಲ್ಲಿ ಸುಮತಿ ತನ್ನ ತಂದೆ ತಳವಾರನಿಗೆ ಒದಗಿದ ಆಪತ್ತನ್ನು ಜಾಣ್ಮೆಯಿಂದ ಪರಿಹರಿಸುವಳು. ತಳವಾರ ಸಾಸಿರ ದಿನಾರದ ಪೊಟ್ಟಳಿಗೆ ಕದ್ದವನನ್ನು ಹುಡಕಲಾಗದೆ ಚಿಂತಿತ ನಾಗಿದ್ದಾಗ, ಮಗಳು ಸುಮತಿಯು ಮಾರನೆ ದಿನವೇ ಕಳ್ಳನನ್ನು ಕಸವರ ಸಮೇತ ತಂದೊಪ್ಪಿಸುತ್ತಾಳೆ. ಸುಭಟರಿಗೆ ಸುಧಾಮೆಯ ಕತೆ ಹೇಳಿ ಕಳ್ಳನನ್ನು ಪತ್ತೆ ಹಚ್ಚುವಲ್ಲಿ ಅವಳ ಚಾಣಾಕ್ಷತೆ, ಜಾಣ್ಮೆ ವ್ಯಕ್ತವಾಗಿದೆ. ಇದೇ ಕತೆಯಲ್ಲಿಯೆ ಗಂಭೀರೆಯೆಂಬ ಬಿರ್ದ್ದಿ ಕಳ್ಳರಿಂದ ತಪ್ಪಿಸಿಕೊಳ್ಳುವ ಚಾಣಾಕ್ಷತೆಯನ್ನು ಕಾಣುತ್ತೇವೆ. ಕದಿಯಲು ಬಂದವರ ಮೂಗನ್ನು

ಕೊಯ್ಯುತ್ತಾಳೆ. ಆ ಕಳ್ಳರಿಂದ ತಪ್ಪಿಸಿಕೊಳ್ಳಲು ಮರವೇರಿದ ಮುದುಕಿ ತಾನು ಯಕ್ಷದೇವತೆ ಎಂದೇ ಹೇಳಿ ಕದ್ದದ್ದರಲ್ಲಿ ಪಾಲನ್ನು ಪಡೆಯುತ್ತಾಳೆ.

ಚಾಣಕ್ಯರಿಸಿಯ ಕತೆಯಲ್ಲಿ ಚಂದ್ರಗುಪ್ತ ಕಾಳಗದಲ್ಲಿ ಸೋತು ಹಸಿವಿನಿಂದ ಸಾಲಿಗರ ಬಿದ್ದಿಯ ಬಳಿ ಊಟ ಬೇಡಿ ಬಿಸಿಯಾದ ಅಂಬಲಿಯಿಂದ ಕೈ ಬಾಯಿ ಸುಟ್ಟುಕೊಂಡಾಗ ಈ ಲೋಕದಲ್ಲಿ ಮೂವರು ಮೂರ್ಖರನ್ನು ಕಂಡೆ ಎಂದು ಹೇಳುತ್ತಾಳೆ. ಯಾರ್‍ಯಾರು ಎಂಬ ಪ್ರಶ್ನೆಗೆ, "ನೀನು, ನಂದನ, ಚಾಣಕ್ಯ" ಎಂದು ಅವರ ಮೂರ್ಖತನವನ್ನು ವಿವರಿಸುತ್ತಾಳೆ. ಹೆಣ್ಣಿನ ಜಾಣ್ಮೆಯನ್ನು ಕತೆಯೊಳಗೆ ತರುವುದರ ಮೂಲಕ ಕತೆಗಾರ ಪುರುಷವಾದಿ ಸಾಂಪ್ರದಾಯಿಕ ಸಮಾಜದ ದೃಷ್ಟಿಕೋನವನ್ನು ಮೀರುವ, ಅದನ್ನು ಮುರಿಯುವ ಪ್ರಯತ್ನ ಮಾಡುವುದನ್ನು ಕಾಣಬಹುದು.

ಕೊನೆಯದಾಗಿ, ಸಿರಿದಿಣ್ಣನೆಂಬ ರಿಸಿಯ ಕತೆಯಲ್ಲಿ ಅರಸ ಜಿತಶತ್ರುವಿಗೆ ದಾದಿ ವಿನಯಮತಿ ತಾನು ಜಿನಮಹಾಮಹಿಮೆ ನೋಡಲು ಬರುತ್ತೇನೆ ಎಂದಾಗ ಅವಳನ್ನು ಕರೆದೊಯ್ಯಲು ನಿರಾಕರಿಸುತ್ತಾನೆ. ನಿರಾಕರಿಸಲು ಕಾರಣ ಅವಳು ವಿರೂಪೆ, ಅವಳನ್ನು ಕಂಡು ಜನರು ಭಯಪಡುತ್ತಾರೆ, ಹೇಸುತ್ತಾರೆಂದು. ಕತೆಯಲ್ಲಿ ಜಿತಶತ್ರುವಿನ ನಿರಾಕರಣೆ ಹೀಗೆ ವ್ಯಕ್ತವಾಗಿದೆ: "ಅಬ್ಬಾ ನೀಮುಂ ಮಹಿಮೆಗೆ ಬರಲ್ವೇಡ ನಿಮ್ಮಂ ಕಂಡು ಮಹಿಮೆಗೆ ಬಂದ ನೆರವಿಗಂಜುಗುಂ ಪೇಸುಗುಮಮಂಗಳಿಕಮೆಂಗುವ್ಮದರಿಂ ನೀವು ಮನೆಯಳಿರಿ..." (ಪು. ೮೫). ಅವಳು ಮನೆಯಲ್ಲಿಯೆ ವ್ರತವನ್ನಾಚರಿಸಿ ದೇವತೆಯಾಗಿ ಇಡೀ ಊರಿನ ಜನರಿಗೆ ಸಹಾಯ ಮಾಡುತ್ತಾಳೆ. ಅವಳನ್ನು ನೋಡಲು ಭಯಪಡುತ್ತಿದ್ದ ಜನರಿಗೆ ಅಭಯವನ್ನು ನೀಡುವವಳಾಗುತ್ತಾಳೆ. ಕುರೂಪಿಯಾದವಳು ದೇವತೆಯಾಗಿ ಪೂಜಿಸಲ್ಪಡುವ ಪಾತ್ರವಾಗಿ ಚಿತ್ರಿಸಲು ಕತೆಗಾರನಿಗೆ ಮಾನವನ ವ್ಯಕ್ತಿತ್ವದ ವಿಕಾಸದಲ್ಲಿ ಅಪಾರ ನಂಬಿಕೆ ಇರುವುದರಿಂದಲೇ ಸಾಧ್ಯವಾಯಿತು.

ನಾವೆಷ್ಟೇ ಧರ್ಮವನ್ನು ನಿರಾಕರಿಸಿದರೂ ಇಲ್ಲಿನ ಕತೆಗಳಲ್ಲಿ ಬೇರ್ಪಡಿಸಲಾರದಷ್ಟು ಧಾರ್ಮಿಕತೆ ಪ್ರತಿಪಾದಿತವಾಗಿದೆ. ಶಿವಕೋಟ್ಯಾಚಾರ್ಯ ಜೈನ. ಹಾಗಾಗಿ ಜೈನಧರ್ಮದ ತಾತ್ವಿಕತೆ ಅಭಿವ್ಯಕ್ತವಾಗಿದೆ ಎಂದು ತೋರಿಸುವ ಹಟಮಾರಿತನ ಇಲ್ಲಿಲ್ಲ. ಕತೆಯ ತಾತ್ವಿಕತೆಯೊಳಗೆ ಚಲನಶೀಲಗೊಂಡ ಧರ್ಮದ ಸ್ವರೂಪ ಅರಿಯುವ ಪ್ರಯತ್ನ ಇಲ್ಲಿದೆ. ಮತೀಯ ವಿಚಾರಗಳ ಪ್ರತಿಪಾದನೆಯಾಗಲಿ ಮತೀಯ ಕರ್ಮಠತೆಯಾಗಲಿ ಇಲ್ಲಿಲ್ಲ.

ಸಹಜವಾಗಿಯೆ ತನ್ನ ಧರ್ಮದ ಶ್ರೇಷ್ಠತೆಯನ್ನು ಪ್ರತಿಪಾದಿಸುವ ನಿಲುವು ಕತೆಗಳಲ್ಲಿ ವ್ಯಕ್ತವಾಗಿದೆ. ಸಹಧರ್ಮೀಯರನ್ನು ಕೀಳಾಗಿಯಾಗಲಿ, ದ್ವೇಷದಿಂದಾಗಲಿ ಕಾಣುವ ನಿಲುವು ಇಲ್ಲಿಲ್ಲ. ಸಹಧರ್ಮೀಯರನ್ನು ತನ್ನವರನ್ನಾಗಿ ಮಾಡಿಕೊಳ್ಳುವ ಚಾಣಾಕ್ಷತೆಯನ್ನು ಈ ಕತೆಗಳಲ್ಲಿ ಕಾಣುತ್ತೇವೆ. ಸುಕುಮಾರಸ್ವಾಮಿಯ ಕತೆಯಲ್ಲಿ ವಾಯುಭೂತಿಯು ಸೋಮಶರ್ಮನೆಂಬ ಬ್ರಾಹ್ಮಣನಿಗೆ ನಾಗಶ್ರೀ ಎಂಬ ಹೆಸರಿಂದ ಮಗಳಾಗಿ ಹುಟ್ಟುತ್ತಾಳೆ. ಅನಂತರ ಇವಳು ಹಿಂದಿನ ಭವಗಳನ್ನರಿದು ತನ್ನ ಸಹೋದರ ಅಗ್ನಿಭೂತಿ ರಿಸಿಯರಿಂದ ಶ್ರಾವಕವ್ರತಂಗಳನ್ನು ಕೈಗೊಳ್ಳುತ್ತಾಳೆ. ಅದನ್ನು ತಿಳಿದ ಸೋಮಶರ್ಮ: "ಮಗಳೆ, ನಾಗಶ್ರೀ ನಾಮುಂ ಪಾರ್ವರೆಮುಂ ಲೋಕಕ್ಕೆಲ್ಲಮಗ್ಗಳಂ ಲೋಕದಿಂ ಪೂಜಿಸೆಪಟ್ಟೆಮುಂ ನಮ್ಮಿಂದಗ್ಗಳಂ ಪರರಿಲ್ಲದರೆಂದಂ ಸವಣರ ಧರ್ಮಮಂ ನಮಗೆ ಕೊಳಲಾಗ ಬಿಸುಡು ಮಗಳೇ..." (ಪು. ೧೨) ಎನ್ನುತ್ತಾನೆ. ತಾನು ಪಡೆದ ವ್ರತಗಳನ್ನು ರಿಸಿಗೆ ಹಿಂದಿರುಗಿಸಲು ಹೋಗುವಾಗ ಎದುರಾದ ಕೆಲವು ಘಟನೆಗಳು ಅದರ ವಿವರಗಳ ಮೂಲಕ ತಂದೆಯನ್ನು ಒಪ್ಪಿಸಿ ಆ ವ್ರತಗಳನ್ನು ತನ್ನಲ್ಲಿಯೆ ಉಳಿಸಿಕೊಳ್ಳುವ ನಾಟಕೀಯತೆಯನ್ನು ಕಾಣುತ್ತೇವೆ. ಹೀಗೆ ಚಾಣಾಕ್ಷತೆಯ ಮೂಲಕ ತನ್ನ ಸಹಧರ್ಮೀಯರನ್ನು ತನ್ನವರನ್ನಾಗಿ ಮಾಡಿಕೊಳ್ಳುವ ಪ್ರಸಂಗಗಳಿವೆ.

ಸುಕೌಶಳಸ್ವಾಮಿ ಕತೆಯಲ್ಲಿ ಅರಸ ಸಿದ್ಧಾರ್ಥನಿಗೆ ಮಗುವಾದ ಸುದ್ದಿಯನ್ನು ಬ್ರಾಹ್ಮಣ ಸೋಮಶರ್ಮ ತಿಳಿಸುತ್ತಾನೆ. ಸುದ್ದಿ ತಿಳಿದ ಸಿದ್ಧಾರ್ಥ, "ಕಸವರಂ ಕೊಟ್ಟು ಪಾರ್ವಂಗೆ ದಾರಿದ್ರ್ಯ ಮೋಕ್ಷಂ ಮಾಡಿ" (ಪು. ೩೬) ಎಂದು ಹೇಳುತ್ತಾನೆ. ಈ

ಕಾವ್ಯಲೋಕ

## ಬುದ್ಧ ನಡಿಗೆ



ಕರುಣೆ ಪಯಣದಲಿ ಬಂದು
ಪ್ರೀತಿ ಪರಿಮಳ ಉಣಿಸಿ
ಮರದಡಿಯಲ್ಲಿ ಕೊಂಚ ಮಲಗಲೆ ಅಂದ
ಮತ್ತೆ ಹೊರಡುವ ಮುನ್ನ.

ನೆಲದ ಮೇಲೇಕೆ ಜೀಯ
ಒಳಗೆ ಸುಪ್ಪತ್ತಿಗೆ ಸಿದ್ಧ. ತಂದೆ
ನಿದ್ರೋ ಬೀಸಣಿಕೆ
ಎಂದವನ ಕೈ ಹಿಡಿದು ತಡೆದ.

ನೆಲಕ್ಕಿಂತಲೂ ಹಿತವೆ ಅದು ?
ನೊಂದ ಕೈ ಬದಲಿಸಿ
ಬೀಸುವ ಗಾಳಿ
ಮರದ ನೆರಳಿಗಿಂತಲೂ ತಂಪೆ ?

ಉಂಟೆ ಜೀಯಾ ? ನಿನ್ನಿಚ್ಛೆ.
ತಲೆಯಡಿಗೆ ತೊಡೆಯ ಕೊಡುವೆ.

ನೆಲದಾಯ ತೊಡೆ ಮೇಲೆ
ನಾನಿರುವೆ ಕಂದ.
ಮಾಂಸ ಬತ್ತುವ ಮೂಳೆ
ಒತ್ತುವ ತೊಡೆಯೇಕೆ ?

ನಿನ್ನ ತೊಡೆ ಮೇಲೆ ತಲೆಯಿಟ್ಟು ಮಲಗು
ಹರಿವ ನೆತ್ತರ ಧ್ವನಿ ಏನೆಂದು ಕೇಳು
ಮೈಯ ಬೆವರನು ಹೃದಯ ಬೆವರಲಿ ತೊಳೆ.
ಅಂದ ನಿದ್ದೆಯಲ್ಲಿಯೆ ಬುದ್ಧ.

ತನ್ನ ತೊಡೆ ಮೇಲೆ ತನ್ನ ತಲೆಯಿಡಲು
ಕಲಿಯುತ್ತ ಕೇಳಿದ: ಸ್ವಾಮಿ ಬಂದಾಗ
ಬೆವರಿದ್ದ, ಬಳಲಿದಂತಿದ್ದ
ಬಂದ ದಾರಿ ಯಾವುದು, ಅಲ್ಲಿ ನೆರಳಿತ್ತೆ ಆನಂದ ?

ಬುದ್ಧ ಬಂದುದು ಬುದ್ಧ ದಾರಿಯಲ್ಲಿ
ಅವನದೇ ನೆರಳಲ್ಲಿ.
ದಾರಿ ಕಂಡವನಿಗೆ ಅವನದೇ ನೆರಳು
ಅಂದ ಆನಂದ.

ಅಂಗುಲೀಮಾಲ ನೋಡಿದ
ಮಲಗಿದ್ದ ಬುದ್ಧ ಪಾದ
ಕಂಡಿತದು
ನಡೆಯುತಿರುವಂತೆಯೇ ಬುದ್ಧ.

**ಸ. ರಘುನಾಥ**
ಕಂಟ್ರಾಕ್ಟರ್ ರಾಜಣ್ಣನವರ ಮನೆ, ವೇಣು ವಿದ್ಯಾಸಂಸ್ಥೆ ಎದುರು
ರೈಲ್ವೇ ಕಾಲೋನಿ, ಶ್ರೀನಿವಾಸಪುರ – ೫೬೩ ೧೩೫
ಕೋಲಾರ ಜಿಲ್ಲೆ

ಮಾತುಗಳು ಸಹಧರ್ಮೀಯರನ್ನು ವ್ಯಂಗ್ಯವಾಗಿ ಕಾಣುವ ಸಣ್ಣ ನಿದರ್ಶನವಷ್ಟೆ. ಪ್ರಧಾನಧಾರೆಯ ಎರಡು ಧರ್ಮಗಳ ನಡುವಿನ ಸೂಕ್ಷ್ಮ ಸಂಘರ್ಷವನ್ನು ಈ ಸಾಲುಗಳು ಮಂಡಿಸುತ್ತಿವೆ. ಸುಕುಮಾರಸ್ವಾಮಿ ಕತೆಯಲ್ಲಿ ಜಿನಧರ್ಮವನ್ನು ನಿಂದಿಸಿದ ವಾಯುಭೂತಿಗೆ ಬರುವ ಸ್ಥಿತಿಯನ್ನು ಈ ಧೋರಣೆಯ ಭಾಗವಾಗಿಯೆ ನೋಡಬೇಕು.

ಈ ಕತೆಗಳಲ್ಲಿ ವ್ರತವನ್ನು ಆಚರಿಸಿದರೆ ದೊರೆಯುವ ಸವಲತ್ತುಗಳ ಒಂದು ಪಟ್ಟಿಯಿದೆ. ಹಾಗೆಯೆ ಆಚರಣೆಯನ್ನು ಮಾಡದೆ ಇದ್ದರೆ ಅನುಭವಿಸಬೇಕಾದ ಕಷ್ಟಗಳ ದೊಡ್ಡ ಪಟ್ಟಿಯನ್ನೆ ನಮ್ಮೆದುರು ಮಂಡಿಸುತ್ತದೆ. ಈ ಎರಡು ವಿಚಾರಗಳ ಮಂಡನೆಯ ಹಿಂದೆ ತುಂಬ ಸ್ಪಷ್ಟವಾಗಿ ಧರ್ಮದ ಕಡೆ ಜನರನ್ನು ಸೆಳೆಯುವ ಯತ್ನವಿದೆ. ಧರ್ಮದ ನಿಯಮಗಳನ್ನು ಧಿಕ್ಕರಿಸಿ ಜೀವಿಸಿದರೆ ಎಷ್ಟು ಜನ್ಮಗಳನ್ನು ಎತ್ತಿ ಏನೇನೆಲ್ಲ ಕಷ್ಟಗಳು ಅನುಭವಿಸಿದರೂ ಅದು ಸುಲಭಕ್ಕೆ ತೀರುವುದಿಲ್ಲ ಎಂಬ ಭಯವನ್ನು ಹುಟ್ಟಿಸುವ ಸಂಗತಿಗಳು ಈ ಕತೆಗಳಲ್ಲಿವೆ.

ಹಿಂಸೆಯ ನಿರಾಕರಣೆ ಅಹಿಂಸೆಯ ಪರವಾದ ಧ್ವನಿ ಕತೆಗಳಲ್ಲಿ ಸಹಜವೆಂಬಂತೆ ಮೂಡಿಬಂದಿದೆ. ಎರಡು ರೀತಿಯ ಹಿಂಸೆಗಳನ್ನು ಇಲ್ಲಿನ ಕತೆಗಳು ನಮ್ಮೆದುರು ಮಂಡಿಸುತ್ತವೆ. ಒಂದು, ಸ್ವಹಿಂಸೆ. ಎರಡನೆಯದು, ಪರಹಿಂಸೆ. ತನ್ನ ಹಿಂದಿನ 'ಪಾಪ'ವನ್ನು ಮೀರಿ ಮೋಕ್ಷದತ್ತ ಸಾಗಲು ವ್ರತಧಾರಿಯಾದ ಭಟಾರರು ಮಾಡಿಕೊಳ್ಳುವ ಸ್ವಹಿಂಸೆಯನ್ನು (ದೈಹಿಕ ಹಿಂಸೆ) ಇಲ್ಲಿನ ಕತೆಗಳು ಮಾನ್ಯಮಾಡುತ್ತವೆ. ಈ ಹಿಂಸೆಯನ್ನು ತನ್ನ ಸಾಧನೆಯ ಮಾರ್ಗದ ಪರೀಕ್ಷೆ ಎಂಬಂತೆ ಕಾಣುವ ಗುಣ ಇಲ್ಲಿನ ಕತೆಗಳಲ್ಲಿದೆ. ಪರರಿಗೆ ಮಾಡುವ ಹಿಂಸೆಯು ಮಹಾಪಾತಕಗಳಲ್ಲೊಂದು ಎಂಬ ಗ್ರಹಿಕೆ ಇಲ್ಲಿನ ಕತೆಗಳಲ್ಲಿದೆ. "ಜೀವಂಗಳಂ ಕೊಲ್ಲದುದು ಧರ್ಮಂ" ಎಂದು ಲಲಿತೆಘಟೆಯ ಕತೆಯಲ್ಲಿ ಈ ನಿಲುವು ನೇರವಾಗಿ ವ್ಯಕ್ತವಾಗಿದೆ.

ವಿಚಿತ್ರವೆಂದರೆ ವ್ಯಕ್ತಿ ತನಗೆ ತಾನೇ ಮಾಡಿಕೊಳ್ಳುವ 'ಹಿಂಸೆ'ಯನ್ನು ಹಿಂಸೆ ಎಂದು ಕತೆಗಳಲ್ಲಿ ಎಲ್ಲಿಯೂ ಮಂಡಿಸುವುದಿಲ್ಲ. ಅವೆಲ್ಲವೂ ಮೇಲೆ ಚರ್ಚಿಸಿದಂತೆ ಧರ್ಮಾರ್ಥ ಸಾಧನೆಯ ಮಾರ್ಗವಾಗಿಯೇ ಬರುವಂಥವು. ಇದಕ್ಕೆ ಸಾಕಷ್ಟು ನಿದರ್ಶನಗಳನ್ನು ಕತೆಗಳಿಂದ ಹೆಕ್ಕಿಕೊಡಬಹುದು. ಈ ಕ್ಷಣದಲ್ಲಿ ನೆನಪಿಗೆ ಬರುತ್ತಿರುವುದು ಗುರುದತ್ತ ಭಟಾರರ ಕತೆಯ ಹಳಮುಖಿ ರಿಸಿಯ ಘಟನೆ. ಈ ರಿಸಿಯು ಕಮ್ಮರಿಯನ್ನು ಸುಡಲು ಪೇರಿಸಿದ ಕಟ್ಟಿಗೆಗಳ ಬಳಿ ಬಂದಾಗ ಸೂರ್ಯ ಮುಳುಗಿದ್ದರಿಂದ ಆ ಪೇರಿಸಿದ ಕಟ್ಟಿಗೆಯ ಮೇಲೆ ವಿರಮಿಸುತ್ತಾನೆ. ತುಂಗಭದ್ರನೆಂಬ ಕಾರ್ಮಿಕ ಆ ರಾತ್ರಿ ಕತ್ತಲೆಯಲ್ಲಿ ಬಂದು ಸೌದೆಗೆ ಬೆಂಕಿ ಹಚ್ಚುತ್ತಾನೆ. ಮಾರನೆ ದಿನ ಬಂದು ಬೆಂಕಿಗೆ ಆಹುತಿಯಾದ ರಿಸಿಯನ್ನು ಕಂಡು ತಾನು ರಿಸಿಯನ್ನು ಕೊಂದೆ ಎಂಬ ಅತೀವ ದುಃಖದಿಂದ ಅವನೂ ಬೆಂಕಿಗೆ ಆಹುತಿಯಾಗುತ್ತಾನೆ. ಈ ಘಟನೆಗಳನ್ನು ಕತೆಗಳ ನಿರೂಪಣೆಯಲ್ಲಿ ಎಲ್ಲಿಯೂ ಹಿಂಸೆಯೆಂದು ಭಾವಿಸುವುದಿಲ್ಲ. ಹಾಗಾಗಿ ಇಲ್ಲಿ ಹಿಂಸೆಯ ಪರಿಕಲ್ಪನೆ ಭಿನ್ನವಾಗಿದೆ.

ಧರ್ಮ, ಪ್ರಭುತ್ವ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಸೃಷ್ಟಿಯಾಗುವ ಮೌಲ್ಯಗಳು ಅಸಮಾನತೆಗೆ, ಶೋಷಣೆಗೆ ಸಾಧನಗಳಾಗುತ್ತವೆ. ಮತ್ತೊಂದು ಮಾತಲ್ಲಿ ಹೇಳುವುದಾದರೆ ಉಳ್ಳವರ – ಶೋಷಿತರ ಪರವಾದ ಧೋರಣೆಗಳು ಮೌಲ್ಯದ ಹೆಸರಲ್ಲಿ ಅಭಿವ್ಯಕ್ತವಾಗಿರುತ್ತವೆ. ಸೂಕ್ಷ್ಮವಾದಂತಹ ಸಾಹಿತ್ಯವು ಸ್ಥಾಪಿತ ಮೌಲ್ಯಗಳನ್ನು ಒಡೆಯುವ ಹಾಗೂ ಮುರಿದು ಕಟ್ಟುವ ಯತ್ನವನ್ನು ಮಾಡುತ್ತಿರುತ್ತದೆ. ವಡ್ಡಾರಾಧನೆ ಕತೆಗಳಲ್ಲಿ ಸ್ಥಾಪಿತ ನಂಬಿಕೆಗಳ ಮೀರುವಿಕೆ ಹಾಗೂ ಅದರ ಪ್ರತಿಪಾದನೆ ಈ ಎರಡೂ ನೆಲೆಗಳು ಇವೆ. ಸ್ಥಿರೀಕೃತ ನಂಬಿಕೆಗಳನ್ನು ಮೀರಲಾಗದೆ ಹಾಗೆ ವ್ಯಕ್ತವಾದ ಕೆಲ ನಿದರ್ಶನಗಳನ್ನು ಇಲ್ಲಿ ಚರ್ಚಿಸಲಾಗಿದೆ.

ವರ್ಣಪದ್ಧತಿ ಸೃಷ್ಟಿಸಿದ ಮೇಲು ಕೀಳು ಎಂಬ ತಾರತಮ್ಯದ ಮನೋಭಾವ ಪ್ರಶ್ನೆಗೆ ಒಳಗಾಗದೆ ಪ್ರತಿಪಾದಿತವಾಗಿರುವುದನ್ನು ಇಲ್ಲಿನ ಕತೆಗಳಲ್ಲಿ ಕಾಣುತ್ತೇವೆ. ಮೊದಲ ಕತೆ ಸುಕುಮಾರಸ್ವಾಮಿ ಕತೆಯಲ್ಲಿ ಜಿನಧರ್ಮವನ್ನು ಹಳಿದ ವಾಯುಭೂತಿ 'ಕೀಳು' ಕುಲದ ಮಾದಿಗರ ನೀಳ ಕೇಶಿಯೆಂಬ ದಂಪತಿಗಳ ಮಗಳಾಗಿ ಹುಟ್ಟಿದ ಎಂಬಲ್ಲಿ ತಾರತಮ್ಯ ಪ್ರಜ್ಞೆಯನ್ನು ಸ್ಪಷ್ಟವಾಗಿ ಕಾಣುತ್ತೇವೆ. ಅವಳನ್ನು ದುರೂಪೆ, ದುರ್ಗಂಧೆ, ದುಸ್ವರೆ, ಪುಟ್ಟುಗುರುಡಿ ಎಂದು ವರ್ಣಿಸುವುದರ ಹಿಂದೆ ಇದೇ ಗ್ರಹಿಕೆಯಿದೆ. ಸಕಲ ಜೀವಿಗಳನ್ನು ದಯೆಯಿಂದ ಕಾಣುವ ಹಾಗೂ ಪ್ರಾಣಿಹಿಂಸೆಯನ್ನು ವಿರೋಧಿಸುವ ಕತೆಗಾರ ಮಾನವನ ಹುಟ್ಟು ಶ್ರೇಷ್ಠ, ಜೀವಿಗಳು ಕನಿಷ್ಠವೆಂಬ ಸಾಂಪ್ರದಾಯಿಕ ಪ್ರಜ್ಞೆಯ ಭಾಗವಾಗಿಯೆ ಕೆಲವು ಕತೆಗಳಲ್ಲಿ ಪ್ರಾಣಿಯಾಗಿ ಹುಟ್ಟುವುದು 'ಕೀಳು' ಎಂಬಂತೆ ಚಿತ್ರಿಸುತ್ತಾನೆ.

ಆಹಾರವನ್ನು ಕುರಿತ ವಿವರಗಳಲ್ಲಿಯೂ ಈ ತರತಮ ಪ್ರಜ್ಞೆಯಿದೆ. ಕೆಳವರ್ಗದ ಆಹಾರಕ್ರಮವಾದ ಮಾಂಸಾಹಾರವನ್ನು ಮಹಾಪಾತಕಗಳಲ್ಲೊಂದು ಎಂದು ಪ್ರತಿಪಾದಿಸುವ ನಿಲುವು ಇಲ್ಲಿನ ಕತೆಗಳಲ್ಲಿದೆ. ಧಾರ್ಮಿಕ ಆಚರಣೆಗೂ ಆಹಾರಕ್ಕೂ ಸಂಬಂಧ ಕಲ್ಪಿಸುವ ಸಾಂಪ್ರದಾಯಿಕ ಮನೋಧರ್ಮವನ್ನು ಇಲ್ಲಿನ ಕತೆಗಳು ಮೀರುವುದಿಲ್ಲ. ಮಾಂಸಾಹಾರವನ್ನು ಕೀಳಾಗಿ ಕಾಣುವ ಈ ಮನೋಭಾವ ಭಾರತದ ಪ್ರಧಾನ ಧಾರೆಯಾದ ಧರ್ಮಗಳಲ್ಲಿ ಅನೂಚಾನವಾಗಿ ನಡೆದು ಕೊಂಡು ಬಂದಿದೆ. ಗುರುದತ್ತ ಭಟಾರರ ಕತೆಯಲ್ಲಿ ಬೇಟೆಗಾರನ ಪತ್ನಿ ಗೋಮತಿ ಎಂಬುವವಳು ಕೈಗೊಂಡ ವ್ರತಗಳನ್ನು ಕತೆ ಹೀಗೆ ವಿವರಿಸುತ್ತದೆ. "ಕೊಲ್ಲದ ಕಳ್ಳದ ಮಧು ಮದ್ಯಮಾಂಸಗಳುಮಯ್ದು ಪಾಲ್ಮರದ ಪಣ್ಣುಂ ಗಿಣ್ಣುಂ ಮಾಣಂಬೆಯುಮಂತಿನೆಲ್ಲಮಂ ತಿನ್ನದ ಬ್ರತಂ ಕೈಕೊಂಡು..." (ಪು. ೧೨೧). ಇಲ್ಲಿ ವ್ರತಧಾರಿಗಳು ತಮ್ಮ ಆಹಾರ ಕ್ರಮ ತ್ಯಜಿಸದೆ ಆಚರಣೆಯಲ್ಲಿ ತೊಡಗಲು ಧರ್ಮ ಅವಕಾಶ ನೀಡುವುದಿಲ್ಲ. ಅಷ್ಟೇ ಅಲ್ಲದೆ ಸಮುದಾಯಗಳ ಬದುಕಿನ ಭಾಗವಾದ ಆಹಾರವನ್ನು ಅಪಮೌಲೀಕರಿಸಿ ಅದರ ಬಗ್ಗೆ ಕೀಳರಿಮೆ ಮೂಡುವಂತೆ ಮಾಡುತ್ತದೆ.

ಪ್ರಭುತ್ವ ಮತ್ತು ಧರ್ಮದ ಸಖ್ಯತೆ ಹಾಗೂ ಪ್ರಭುತ್ವ ಮತ್ತು ವಣಿಕ ವರ್ಗದೊಂದಿಗಿನ ಸಖ್ಯತೆಯ ನೆಲೆಗಳನ್ನು ಎಲ್ಲ ಕತೆಗಳಲ್ಲೂ ಕಾಣುತ್ತೇವೆ. ಪ್ರಭುತ್ವ ವಣಿಕ ವರ್ಗದ ಶೋಷಣೆಯ ಮುಖಗಳನ್ನು ಅನಾವರಣಗೊಳಿಸದೆ, ಅದರ ಬಗೆಗೆ ಕತೆಗಳು ಮೌನಕ್ಕೆ ಶರಣಾಗುತ್ತವೆ. ಕೆಲವು ಕತೆಗಳಲ್ಲಿ ಪ್ರಭುತ್ವವನ್ನು ದೈವೀಕರಿಸುವ ಪ್ರಯತ್ನವೂ ಇದೆ. ಲಲಿತ ಘಟೆಯ ಕತೆಗಳ ಸಾಲುಗಳು ಹೀಗಿವೆ: "ದೇವಿಯರಪ್ಪಪ್ಪರಸೆಯರೊಡನೆ ಪಲ ಕಾಲಂ ದಿವ್ಯ ಸುಖಂಗಳನನುಭವಿಸಿಯಾಯುಷ್ಯಾಂತದೊಳಿಲ್ಲಿ ಮನುಷ್ಯಗತಿಯೊಳ್ ಕುರುವಂಶಾಗ್ರ ವಂಶಮಿಕ್ಷ್ವಾಕು ವಂಶ ನಾಥವಂಶ ಹರಿವಂಶ ಸೂರ್ಯವಂಶ ಸೋಮವಂಶಮೆಂದಿವು ಮೊದಲಾಗೊಡೆಯುತ್ತಮ ಕುಲದೊಳ್ ಶ್ರಾವಕರ ಬಸಿರೊಳ್ ಪುಟ್ಟಿ ಪೂರ್ವ ಕೋಟಿಯಾಯುಷ್ಯಮನೊಡೆಯರಾಗಿ ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿತ್ವದೊಳ್ ಕೂಡಿ ಏಕಛತ್ರಚ್ಛಾಯೆಯಿಂದಂ ಪೃಥವಿಯೆಲ್ಲಮನಾಳ್ದು..." (ಪು. ೭೮). ಅಂದರೆ ರಾಜನನ್ನು ಪ್ರತ್ಯಕ್ಷ ದೇವರು ಎಂದು ಬಿಂಬಿಸುವ ಪ್ರಯತ್ನ. ರಾಜ ಪ್ರತ್ಯಕ್ಷ ದೈವವಾದ್ದರಿಂದ ಅವನನ್ನು ಯಾರೂ ಪ್ರಶ್ನಿಸುವ ಹಾಗಿಲ್ಲ ಎಂಬ ಸಾಂಪ್ರದಾಯಿಕ ನಂಬಿಕೆಯನ್ನು ಈ ಸಾಲುಗಳು ಸ್ಥಿರೀಕರಿಸುತ್ತವೆ. ರಾಜ ವಣಿಕ ವರ್ಗ ಅನುಭವಿಸುವ ಕಣ್ಣು ಕುಕ್ಕುವ ಸಂಪತ್ತು ಅಕ್ರಮವಾದದ್ದು, ತನ್ನ ಜನರ ಶೋಷಣೆಯಿಂದ ದೊರೆತದ್ದು ಎಂಬ ಪಾಪಪ್ರಜ್ಞೆ ಯಾವ ಪಾತ್ರವನ್ನೂ ಕಾಡುವುದಿಲ್ಲ. ಪ್ರಭುತ್ವ ವಣಿಕ ವರ್ಗದ ಬಗೆಗಿನ ಕತೆಗಾರನ ಈ ಮೃದು ಧೋರಣೆ ಪ್ರಶ್ನಾರ್ಹವಾದದ್ದು.

ವಡ್ಡಾರಾಧನೆ ಕತೆಗಳು ಒಳಗೊಳ್ಳುವ ಜಗತ್ತು ಸೀಮಿತವಾದದ್ದು. ನಗರದ ಅನುಭವಗಳನ್ನು ಒಳಗೊಂಡ ಏಕಮುಖಿ ಕಥನ, ಗ್ರಾಮ್ಯ ಲೋಕದ ಅನುಭವಗಳ ಗೈರು, ಇವನ್ನು ಈ ಕತೆಗಳಲ್ಲಿ ಕಾಣುತ್ತೇವೆ. ಜನಪದಕ್ಕೆ ಸಂಬಂಧಿಸಿದ ಹಲವು ಸಂಗತಿಗಳನ್ನು ಒಳಗೊಂಡಿದ್ದರೂ ಆ ಜನಪದ ಪ್ರತಿನಿಧಿಸುವ ಗ್ರಾಮ ಜಗತ್ತಿನ ಜೀವನದ ವಿವರಗಳ ಕೊರತೆ ಇಲ್ಲಿದೆ. ಕತೆಯನ್ನು ನಿರೂಪಿಸಲು ಜನಪದ ಕತೆಗಳ ಕಥನ ಶೈಲಿಯನ್ನು ಬಳಸಿಕೊಳ್ಳುತ್ತಾನೆ. ಕಥನ ನಿರೂಪಣೆ ಮತ್ತು ಭಾಷೆ ಆಕರ್ಷಕವಾಗಿವೆ. ಆದರೆ ಸಿದ್ಧ ಮಾದರಿಯ ಕಥನ ಚೌಕಟ್ಟು ಏಕತಾನತೆಯನ್ನು ಸೃಷ್ಟಿಸುತ್ತದೆ. ಹೀಗೆ ಹಲವು ಮಿತಿಗಳಿಗೆ ಈ ಕತೆಗಳು ಒಳಗಾಗಿವೆ. ಏನೇ ಮಿತಿಗಳಿದ್ದರೂ ಈ ಕತೆಗಳು ಹಲವು ವಾಗ್ವಾದಗಳನ್ನು ಸೃಷ್ಟಿಸುವ ಸಂಗತಿಗಳನ್ನು ಒಡಲೊಳಗಿರಿಸಿ ಕೊಂಡಿವೆ. ಹಲವು ಕಾಲದ ನಂತರವೂ ಮತ್ತೆ ಮತ್ತೆ ಚರ್ಚೆಗೆ, ಸಂವಾದಕ್ಕೆ ಅವಕಾಶ ಕಲ್ಪಿಸುತ್ತಲೇ ಇವೆ.

**ಡಾ॥ ಸುಧಾಕರ ದೇವಾಡಿಗ ಬಿ.**
ಕನ್ನಡ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು
ನಾವುಂದ, ಕುಂದಾಪುರ ತಾಲೂಕು
ಉಡುಪಿ ಜಿಲ್ಲೆ – ೫೭೬ ೨೨೪



ಚಿತ್ರಲೇಖನ

**ಡಿ. ಎನ್. ರವಿಕುಮಾರ್**

**ಪ್ರವಾಸಿಗರು ಮತ್ತು ಚಾರಣಿಗರು ನಿಮ್ಮ ಆಯ್ಕೆಯಂತೆ ಎಲ್ಲಿಂದ ತೆರಳುವುದು ಎಂದು ನಿರ್ಧರಿಸಿ ಜೀವನದಲ್ಲೊಮ್ಮೆ ಕುದುರೆಮುಖ ಪೀಕ್ ಹತ್ತಿ ಬನ್ನಿ. ಈ ಸ್ಥಳಕ್ಕೆ ತೆರಳಲು ಸೂಕ್ತ ಕಾಲವೆಂದರೆ ಆಗಸ್ಟ್‌ನಿಂದ ಅಕ್ಟೋಬರ್ ತಿಂಗಳು. ಈ ವಿಷಯಗಳಲ್ಲೂ ನಿರ್ಧಾರ ವ್ಯಕ್ತಿಯನ್ನು ಅನುಸರಿಸುತ್ತದೆ. ಏಕೆಂದರೆ ಕೆಲವರಿಗೆ ಮಳೆಗಾಲ ಎಂದರೆ ಅಲರ್ಜಿ, ಇನ್ನು ಕೆಲವರಿಗೆ ಬೇಸಿಗೆ ಮತ್ತು ಚಳಿಗಾಲಗಳು ಅಲರ್ಜಿಯಾಗಿರುತ್ತವೆ. ಆಗಸ್ಟ್-ಅಕ್ಟೋಬರ್‌ವರೆಗಿನ ಸಮಯ ಮಳೆ ಮತ್ತು ಬಿಸಿಲಿನ ಆಟವನ್ನು ಮುಂದುವರಿಸಿ ಹಿಂಗಾರು ಕಾರ್ಮೋಡಗಳ ಸಂದುಗಳಿಂದ ನುಸುಳುವ ಸೂರ್ಯನ ಕಿರಣಗಳ ಬೆಳಕು ಮತ್ತು ನೆರಳಿನಾಟ ತುಂಬಾ ಅದ್ಭುತವೆನಿಸುತ್ತದೆ. ಸಾಲದ್ದಕ್ಕೆ ಕುದುರೆಮುಖದ ಪರ್ವತ ಶ್ರೇಣಿಗಳು ಹಚ್ಚ ಹಸಿರಿನಿಂದ ಕಂಗೊಳಿಸುವ ಸಮಯವಾಗಿರುತ್ತದೆ. ಇನ್ನು ವಿಶೇಷವೆಂದರೆ ಈ ಸಮಯದಲ್ಲಿ ಛಾಯಾಗ್ರಾಹಕರಿಗಂತೂ ಅದೊಂದು ಶುಭಮುಹೂರ್ತವೇ ಸರಿ. ಹವ್ಯಾಸಿ ಛಾಯಾಗ್ರಾಹಕರಿಗೆ ಈ ಸ್ಥಳವು ಪಾಠಶಾಲೆಯಾಗಿ ಪರಿಣಮಿಸುತ್ತದೆ.**

ಏಷ್ಯಾ ಖಂಡದ ದಕ್ಷಿಣದ ತುತ್ತತುದಿಯ ಪ್ರಸ್ಥಭೂಮಿಯಲ್ಲಿರುವ 'ಕರ್ನಾಟಕ' ಭಾರತದ ಅತ್ಯಾಕರ್ಷಣೀಯ ರಾಜ್ಯ. ಪ್ರವಾಸಿಗರಲ್ಲಿ ಅತ್ಯಂತ ವಿಸ್ಮಯ ಮೂಡಿಸುವ ಭೌಗೋಳಿಕ ಲಕ್ಷಣಗಳನ್ನು ತನ್ನೊಡಲಲ್ಲಿರಿಸಿಕೊಂಡಿರುವ ಕರ್ನಾಟಕವು, ಪಶ್ಚಿಮ ದಿಕ್ಕಿನ ಉದ್ದಗಲಕ್ಕೂ ಕರಾವಳಿ ಮತ್ತು ಮಲೆನಾಡು ಪಶ್ಚಿಮಘಟ್ಟ ಸಾಲುಗಳ ಪ್ರದೇಶವನ್ನು ಹೊಂದಿದೆ. ಇಂತಹ ಪಶ್ಚಿಮಘಟ್ಟಗಳು ಅಸಂಖ್ಯಾತ ಜೀವರಾಶಿಗಳಿಗೆ ಆಶ್ರಯತಾಣವನ್ನು ಕಲ್ಪಿಸಿ, ಅವಿಸ್ಮರಣೀಯ ನಿಸರ್ಗ ಸಂಪತ್ತನ್ನು ಹೊಂದಿದಂತಹ ಹೆಗ್ಗಳಿಕೆಗೆ ಪಾತ್ರವಾಗಿವೆ.

ಚಿಕ್ಕಮಗಳೂರು ಜಿಲ್ಲೆಯ ನೈಋತ್ಯ ಭಾಗದಲ್ಲಿ ಕಂಡುಬರುವ ಹಸಿರು ಗುಡ್ಡಗಳ ರಾಶಿಯೇ 'ಕುದುರೆಮುಖ'. ಬ್ರಿಟಿಷರ ಕಾಲದಲ್ಲಿ ವೈಸ್‌ರಾಯ್‌ಗಳು ಮತ್ತು ಇತರೆ ಬ್ರಿಟಿಷ್ ಅಧಿಕಾರಿಗಳು ಈ ಪರ್ವತ ಶ್ರೇಣಿಗಳನ್ನು ಬಳಸಿಕೊಂಡು ಪುರಾತನ ಮಾದರಿಯ ವಿಮಾನದಲ್ಲಿ ಪ್ರಯಾಣ ಮಾಡುವಂತಹ ಸಂದರ್ಭಗಳಲ್ಲಿ, ಈ ಪರ್ವತದ ತುತ್ತತುದಿಯ ಭಾಗವೊಂದು ಕೆಳಗೆ ಮುಖ ಮಾಡಿಕೊಂಡು ನಿಂತ ಕುದುರೆಯಂತೆ ಗೋಚರವಾಗುತ್ತಿತ್ತಂತೆ. ಆದ ಕಾರಣ ಈ ಪ್ರದೇಶಕ್ಕೆ 'ಕುದುರೆಮುಖ' ಎಂಬ ಹೆಸರು ಬಂದಿತು ಎಂದು ಸ್ಥಳೀಯರು ಹೇಳುತ್ತಾರೆ. ಅಂದಿನಿಂದ ಇಂದಿನವರೆಗೂ ಈ ಸ್ಥಳವು ಕುದುರೆಮುಖ ಎಂದೇ ಪ್ರಖ್ಯಾತಿ ಪಡೆದಿದೆ. ಶಿಖರದ ತುದಿಯಲ್ಲಿ ಒಂದು ಬಂಗಲೆಯನ್ನೂ ನಿರ್ಮಿಸಿಕೊಂಡಿದ್ದಾರೆ.

ನಿಮಗೆ ಇತಿಹಾಸ ಪ್ರಸಿದ್ಧ ರತ್ನಗಂಬಳಿಯ ಪರಿಚಯವಿದೆಯೇ ? ಹಾಗಾದರೆ ಬನ್ನಿ ಪರಿಚಯಿಸುತ್ತೇನೆ. ಪಶ್ಚಿಮಘಟ್ಟದ ಈ ಪರ್ವತ ಶ್ರೇಣಿಗಳು ಸುಮಾರು ೬೦೦ ಚ.ಕಿ.ಮೀ. ಪ್ರದೇಶದಲ್ಲಿ ಸುವಿಸ್ತಾರವಾಗಿ ಹಸಿರ ಹೊನ್ನಗಂಬಳಿಯನ್ನು ಹೊದ್ದುಕೊಂಡು ವ್ಯಾಪಿಸಿವೆ. ಸುಂದರ ನಿಸರ್ಗದ ನಡುವಿನ ಈ ಪ್ರದೇಶವು ಅಷ್ಟೇ ರಮಣೀಯವಾಗಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯನ್ನೊಳಗೊಂಡು ವೈವಿಧ್ಯಮಯ ಪ್ರಾಣಿ-ಪಕ್ಷಿಗಳ ಆವಾಸಕ್ಕೆ ನೆಲೆವೀಡಾಗಿದೆ. ಬೃಹತ್ ಬೋಳುಗುಡ್ಡಗಳ ಕಣಿವೆಗಳು ಮತ್ತು ಸಾಲು-ಸಾಲು ಹಸಿರ ಸಿರಿಯು ಚಾರಣಿಗರನ್ನು ಮಂತ್ರಮುಗ್ಧರನ್ನಾಗಿಸುತ್ತದೆ. ನಿಜಕ್ಕೂ ಅಂತಹ ವರ್ಣನಾತೀತ ಪ್ರದೇಶವಾಗಿದೆ ಈ ತಾಣ.

# ಹೆಸರಿಗೊಂದೇ ಮುಖ..., ನೋಡ ಬನ್ನಿ ಒಮ್ಮೆ ಕುದುರೆಮುಖ





ಚಿತ್ರದುರ್ಗದಿಂದ ಒಟ್ಟು ಒಂಬತ್ತು ಉಪನ್ಯಾಸಕರುಗಳನ್ನೊಳಗೊಂಡ ತಂಡ ಕುದುರೆಮುಖ ಪರ್ವತಶ್ರೇಣಿಗಳಿಗೆ ಚಾರಣವನ್ನು ಹಮ್ಮಿಕೊಂಡಿದ್ದೆವು. ಇಲ್ಲಿಂದ ಹೊರಟ ನಾವು ಶಿವಮೊಗ್ಗದಿಂದ ಕಳಸ ಮಾರ್ಗವಾಗಿ ಚಲಿಸಿ ಕಳಸದಿಂದ ಕುದುರೆಮುಖ ರಸ್ತೆಯಲ್ಲಿ ಸಿಗುವ ಬಾಣಗಲ್ಲು ಎಂಬ ಪುಟ್ಟ ಗ್ರಾಮದಲ್ಲಿ ಬಂದಿಳಿದೆವು. ಅಲ್ಲಿಂದ ಎಡಭಾಗಕ್ಕೆ ಸುಮಾರು ೮ ಕಿ.ಮೀ.ಗಳಷ್ಟು ಜೀಪು ದಾರಿಯಲ್ಲಿ ಚಾರಣ ಮಾಡಿಕೊಂಡು ಸೀದ 'ಮುಳ್ಳೋಡಿ ಹೌಸ್' ತಲುಪಿದ ನಾವು ಹೌಸ್‌ನ ಮಾಲೀಕರಾದ ಸತೀಶ್‌ರವರ ಮಾರ್ಗದರ್ಶನದಂತೆ ಸಮೀಪದ "ಸೋಮಾವತಿ" ಫಾಲ್ಸ್ ಬಳಿ ನಮ್ಮ ಬಿಡಾರವನ್ನು ಹೂಡಿದೆವು.

ಮರುದಿನ ಬೆಳಗಿನ ಜಾವ ೬-೦೦ ಗಂಟೆ ಸಮಯದಲ್ಲಿ ಹಾಲ್ನೊರೆಯಂತೆ ಧುಮ್ಮಿಕ್ಕುತ್ತಿದ್ದ ಸೋಮಾವತಿ ಜಲಪಾತದಲ್ಲಿ ಸ್ನಾನ ಮುಗಿಸಿ ಇದರ ಪಕ್ಕದಲ್ಲಿ ಲಘು ಉಪಾಹಾರ ಮುಗಿಸಿಕೊಂಡು ಪುನಃ ಮುಳ್ಳೋಡಿ ಹೌಸ್‌ಗೆ ತೆರಳಿದೆವು. ಅಲ್ಲಿಗಾಗಲೇ ಹೌಸ್‌ನ ಮಾಲೀಕರಾದ ಸತೀಶ್ ನಮ್ಮ ಕುದುರೆಮುಖ ಪೀಕ್‌ನ ಚಾರಣಕ್ಕಾಗಿ ಮಾರ್ಗದರ್ಶಕರನ್ನು (ಗೈಡ್) ಸಿದ್ಧಮಾಡಿದ್ದರು. ಮುಳ್ಳೋಡಿ ಹೌಸ್‌ನಿಂದ ಸರಿ ಸುಮಾರು ೧೦ ಕಿ.ಮೀ. ಚಾರಣವನ್ನು ಕುದುರೆಮುಖ ಪೀಕ್‌ನವರೆಗೂ ನಡೆಸಲು ನಮ್ಮ ತಂಡದವರೆಲ್ಲ ತಯಾರಾಗಿಯೇ ನಿಂತಿದ್ದರು. ನಾವುಗಳು ಇಲ್ಲಿಂದ ಚಾರಣ ಹೊರಟಾಗ ಸುಮಾರು ಬೆಳಿಗ್ಗೆ ೧೦ ಗಂಟೆಯಾಗಿತ್ತು. ಗೈಡ್‌ನ ಸಹಾಯದೊಂದಿಗೆ ಸಾಗುವ ದಾರಿಯಲ್ಲಿ ಅಚ್ಚರಿ ಮೂಡಿಸುವಂತಹ ಪ್ರಕೃತಿಯ ಸಿರಿ, ಶೋಲಾಕಾಡುಗಳ ಪರಿಚಯ, ಅಲ್ಲಲ್ಲಿ ಪ್ರಪಾತದಂತೆ ಎದುರಾಗುತ್ತಿದ್ದ ನೀರಿನ ತೊರೆಗಳು ಹಾಗೂ ಕಣ್ಣು ಹಾಯಿಸಿದಷ್ಟು ದೂರವೂ ಹಸಿರು ಹುಲ್ಲುಗಾವಲಿನ ರಾಶಿ, ಇದೆಲ್ಲದರ ನಡುವೆ ಹಿಂಗಾರು ಮೋಡಗಳ ನೆರಳು ಮತ್ತು ಬೆಳಕಿನ ಕಣ್ಣಾಮುಚ್ಚಾಲೆಯಾಟ ಊಹಿಸಲಾರದಷ್ಟು ಮುದ ನೀಡುತ್ತಿದ್ದವು. ಆ ಕ್ಷಣಗಳಲ್ಲಿ ನಮ್ಮನ್ನು ನಾವೇ ಮರೆತರೂ ಆಶ್ಚರ್ಯ ಇರುತ್ತಿರಲಿಲ್ಲ. ನಾವು ಚಾರಣ ತೆರಳಿದ ಸಮಯ ತುಂಬಾ ಸೂಕ್ತವಾಗಿತ್ತು. ಹಿಂಗಾರು ಮಳೆಗಾಲವಾದರೂ ಜಿಗಣೆಗಳ ಕಾಟವನ್ನೂ ಲೆಕ್ಕಿಸದೆ ಸೆಪ್ಟೆಂಬರ್ ತಿಂಗಳನ್ನು ಆಯ್ದುಕೊಂಡಿದ್ದೆವು. ಏಕೆಂದರೆ ನನಗೆ ಫೋಟೋಗ್ರಫಿಯಲ್ಲಿ ಹೆಚ್ಚು ಆಸಕ್ತಿ ಇರುವ ಕಾರಣ ಮತ್ತು ಇದೇ ಸಕಾಲ. ನನ್ನ ಆಸೆಯಂತೆ ಅಂದು ಉತ್ತಮ ಛಾಯಾಚಿತ್ರಗಳೂ ಲಭಿಸಿದ್ದವು. ಫೋಟೋಗಳನ್ನು ಕ್ಲಿಕ್ಕಿಸುವುದರಲ್ಲೇ ಸಾಕಷ್ಟು ಸಮಯವೂ ಕಳೆದುಹೋಗುತ್ತದೆ.

ಊಟ ಮಾಡಲಿಕ್ಕಾಗಿ ಸ್ಥಳವೊಂದನ್ನು ಆಯ್ದುಕೊಂಡ ನಾವುಗಳು ಮಧ್ಯಾಹ್ನದ ಸಿದ್ಧ ಆಹಾರದ ಊಟ ಮುಗಿಸಿ, ಸ್ವಲ್ಪ ಕಾಲ ವಿರಮಿಸಿ ಮತ್ತೆ ನಮ್ಮ ಕಾಯಕವನ್ನು ಮುಂದುವರಿಸಿದೆವು. ಕುದುರೆಮುಖದ ಅದ್ಭುತ ಪಕ್ಷಿನೋಟವು ಅನಾವರಣಗೊಳ್ಳುತ್ತದೆ. ಅಷ್ಟೇ ಅಲ್ಲ, ಬರಿಯ ಕಣ್ಣಿಗದು ಇನ್ನೇನು ಕೆಲವೇ ಹೆಜ್ಜೆಗಳು ಎಂಬಂತೆಯೂ ಭಾಸವಾಗುತ್ತದೆ. ಆದರೆ ಅಲ್ಲಿಂದ ನಾವು ಚಲಿಸಬೇಕಾದ ಮಾರ್ಗ ಇನ್ನೂ ೫ ಕಿ.ಮೀ.ನಷ್ಟು ಬಾಕಿ ಉಳಿದಿರುತ್ತದೆ. ಗೈಡ್ ಹೇಳುವ ಪ್ರಕಾರ ಈ ಸ್ಥಳದಲ್ಲಿ ಅವನು ಚಿಕ್ಕವನಾಗಿದ್ದಾಗಿನಿಂದಲೂ ನಮ್ಮಂತೆಯೇ ಚಾರಣಿಗರು ಧಾವಿಸುತ್ತಿದ್ದರಂತೆ ಎಂಬುದು ತಿಳಿಯಿತು. ಅಂದರೆ ಈ ತಾಣ ಮತ್ತು ಚಾರಣ ಬಹುಹಿಂದಿನಿಂದಲೂ ಸುಪ್ರಸಿದ್ಧಿಯಾಗಿದೆ ಎಂಬ ಸತ್ಯವನ್ನು ಅರಿತ ನಾವುಗಳು, ಗೈಡ್‌ನೊಂದಿಗೆ ಇನ್ನಷ್ಟು ಸ್ಥಳೀಯ ಮಾಹಿತಿಯನ್ನು ಕಲೆಹಾಕುತ್ತ ಮುಂದೆ ಸಾಗಿದೆವು. ಅಷ್ಟರಲ್ಲೇ ನಮಗೆ ಒಂದು ಸುವಿಸ್ತಾರವಾದ, ಸ್ಪಂಜಿನಂತಹ ಅನುಭವವನ್ನು ನೀಡುವ ಹಸಿರು ಹುಲ್ಲಿನ ರಾಶಿಯ ಸುಂದರ ಪ್ರಾಂಗಣ ಎದುರಾಯಿತು. ಈ ಹುಲ್ಲಿನ ಮೇಲೆ ನಡೆಯುವುದೇ ಒಂದು ಅದ್ಭುತ ಅನುಭವ. ಈ ಅನುಭವವನ್ನು ಪಡೆದು ನಾಲ್ಕು ಹೆಜ್ಜೆ ಇಡುತ್ತಿದ್ದಂತೆಯೇ ಗತಿಸಿಹೋದ ಪಾಳು ಹೆಂಚಿನ ಮನೆಯೊಂದು ಗೋಚರವಾಗಿದ್ದು, ಅದು ಬೇರಾವ ಮನೆಯೂ ಅಲ್ಲ; ಬ್ರಿಟಿಷರಿಗೆ ನಿಯೋಜಿತನಾಗಿದ್ದ ಲೋಬೋ ಕುಟುಂಬದವರು ವಾಸಿಸುತ್ತಿದ್ದ ಮನೆಯ ಪಳೆಯುಳಿಕೆ ಎಂದು ತಿಳಿಯಿತು. ಅಲ್ಲಿಂದ ಮುಂದೆ ಸಾಗಿದ ನಮಗೆ ಎದೆಮಟ್ಟದ ಗಿಡ-ಗಂಟಿಗಳು ಸ್ವಾಗತಿಸಿ ಪುನಃ ಕಿರು ಝರಿಗಳ ಮೂಲಕ ಬೆತ್ತ ಮತ್ತು ಹೆಬ್ಬಿದಿರಿನ ದಟ್ಟಕಾನನದೊಳಗೆ ಪ್ರವೇಶಿಸುವಂತೆ ಮಾಡುತ್ತದೆ.



ಇಲ್ಲಿಗಾಗಲೇ ಸುಮಾರು ೮ ಕಿ.ಮೀ.ನಷ್ಟು ಚಾರಣ ಮುಗಿಸಿರುತ್ತೇವೆ. ಇನ್ನುಳಿದ ೨ ಕಿ.ಮೀ. ಚಾರಣ ನಿಜಕ್ಕೂ ಒಂದು ಸವಾಲೇ. ಪರ್ವತಗಳನ್ನೇರಿದಷ್ಟೂ ನುಣ್ಣನೆಯ ಹಸಿರು ಬೋಳು ಗುಡ್ಡಗಳು ತಮ್ಮ ಸುವಿಸ್ತಾರವನ್ನು ಪ್ರದರ್ಶಿಸುತ್ತಲೇ ಹೋಗುತ್ತವೆ. ಛಾಯಾಗ್ರಾಹಕನಿಗಿಲ್ಲಿ ಹಬ್ಬದ ವಾತಾವರಣವಂತೂ ಕಟ್ಟಿಟ್ಟ ಬುತ್ತಿ. ಇನ್ನು ಕೊನೆಯ ಹಂತದ ಕಸರತ್ತುಗಳು ಶುರುವಾಗುತ್ತವೆ. ಕುದುರೆಮುಖ ಪೀಕ್‌ನ ಬುಡದಲ್ಲಿರುವ ನಮಗೆ ಗುಡ್ಡವನ್ನೇರಲು ಬಲಭಾಗಕ್ಕೆ ಸಲೀಸಾದ ಕಾಲುದಾರಿ ಇದ್ದರೂ ಬೇಗನೇ ತಲುಪಬೇಕೆಂಬ ಹುಮ್ಮಸ್ಸಿನಿಂದ ಗುಡ್ಡದ ಎಡಭಾಗದ ಜಾಡನ್ನು ಹಿಡಿದು ಚಾರಣ ನಡೆಸಲು ಮುಂದಾದೆವು. ಗುಡ್ಡವನ್ನೇರುವಾಗ ಎಲ್ಲವೂ ಸಲೀಸಾಗಿಯೇ ಇತ್ತು. ಆದರೆ ತಲುಪುತ್ತಾ ಹೋದ ಹಾಗೆಲ್ಲ ಕಾಲುದಾರಿ ಮಾಯವಾಗಿ ಬರಿಯ ಕಲ್ಲು-ಬಂಡೆಗಳ ದಾರಿ ಎದುರಾಗುತ್ತದೆ. ಈ ದಾರಿಯು ಸಾಗಿದಷ್ಟೂ ಎತ್ತರವಾಗಿ ಮತ್ತು ಎದೆಮಟ್ಟದ ದಿಬ್ಬಗಳು ಎದುರಾಗುತ್ತವೆ. ಸಾಗುತ್ತಾ ಸಾಗುತ್ತಾ ಏಕಾದರೂ ಈ ದಾರಿಯಲ್ಲಿ ಬಂದೆವೋ ಎಂಬಂತಾಗಿತ್ತು. ಕಾರಣ ನಾವು ಆಯ್ದುಕೊಂಡ ಎಡಭಾಗದ ಮಾರ್ಗವು ಬಲಭಾಗದ ಮಾರ್ಗಕ್ಕಿಂತ ಎರಡರಷ್ಟು ಸಮಯವನ್ನು ನುಂಗಿಹಾಕಿತ್ತು. ಬರಿಯ ಕಣ್ಣಿಗೆ ಇದೇ ಹತ್ತಿರದಂತೆ ಗೋಚರಿಸಿ ನಮ್ಮನ್ನು ಮತ್ತಷ್ಟು ಮೂರ್ಖರನ್ನಾಗಿಸಿತ್ತು ಈ ಕುದುರೆಮುಖ ಪೀಕ್. ಧೃತಿಗೆಡದ ನಾವುಗಳು ಅಲ್ಲಲ್ಲಿ ಕೂತು ವಿಶ್ರಾಂತಿ ಪಡೆಯುತ್ತಾ ಬ್ಯಾಗ್‌ನಲ್ಲಿದ್ದ ಸೇಬು ತಿನ್ನುತ್ತಾ ಮತ್ತು ನೀರು ಕುಡಿಯುತ್ತಾ ಮುಂದೆ ಸಾಗಿದೆವು. ಎತ್ತರಕ್ಕೇರಿದ ಹಾಗೆ ಗುಡ್ಡದಲ್ಲಿ ಬೆಳೆದ ಹುಲ್ಲಿನ ಗರಿಗಳೆಲ್ಲವೂ ಕುಡುಗೋಲಿನಿಂದ ಕೊಯ್ದಂತಾಗಿದ್ದ ದೃಶ್ಯವು ನಮ್ಮ ಕಣ್ಣಿಗೆ ಬಿದ್ದಿತು. ತಕ್ಷಣಕ್ಕೆ ಜೊತೆಯಲ್ಲಿದ್ದ ಗೈಡ್‌ನ ಹೇಳಿಕೆಯ ಪ್ರಕಾರ ಈ ಪ್ರದೇಶಗಳಲ್ಲಿ ಹಸಿರು ಹೆಚ್ಚಾಗಿರುವುದರಿಂದ, ಕಡವೆಗಳು, ಕಾಡುಕುರಿಗಳು, ಜಿಂಕೆಗಳು ಮತ್ತು ಬೃಹದಾಕಾರವಾದ ಕಾಡುಕೋಣಗಳು ಈ ಜಾಗದಲ್ಲಿ ಹುಲ್ಲು ತಿನ್ನುವ ಕಾರಣ ಹುಲ್ಲಿನ ರಾಶಿ ಕೊಯ್ದಂತೆ ಕಾಣುತ್ತಿದೆಯಷ್ಟೆ ಎಂದು ನಮ್ಮ ಗೊಂದಲವನ್ನು ಪರಿಹರಿಸಿದ. ಹಾಗೆ ಮಾತನಾಡುತ್ತಿದ್ದಂತೆಯೆ ನಮ್ಮ ಗುರಿಯನ್ನು ತಲುಪಿಯೇ ಬಿಟ್ಟಿದ್ದೆವು. ಅಂದರೆ ನಾವು ಪಶ್ಚಿಮ ಘಟ್ಟದ ವರ್ಣನಾತೀತ ಕುದುರೆಮುಖ ಪರ್ವತ ಶ್ರೇಣಿಗಳ ತುಟ್ಟತುದಿಯನ್ನು ತಲುಪಿದ್ದೆವು. ಗಗನವನ್ನೇ ಚುಂಬಿಸಿದಂತಹ ಅನುಭವ, ಗಿರಿಸಾಲುಗಳ ಅವಿಸ್ಮರಣೀಯ ಪಕ್ಷಿನೋಟವು ನಮ್ಮ ತಂಡದ ಒಂಬತ್ತು ಮಂದಿಯನ್ನು ಸಂತಸದ ಅಲೆಯಲ್ಲಿ ತೇಲಾಡುವಂತೆ ಮಾಡಿತ್ತು ಈ ಪ್ರಕೃತಿಯ ಸೊಬಗು.

ಅಲ್ಲಿಂದ ಹಿಂತಿರುಗುವಷ್ಟರಲ್ಲಿ ಸಂಜೆ ೬ ಗಂಟೆ ಆಗಿತ್ತು. ಇನ್ನೇನು ಕತ್ತಲು ಆವರಿಸಲು ಕೇವಲ ಒಂದು ಗಂಟೆ ಮಾತ್ರ ಬಾಕಿ ಉಳಿದಿತ್ತು. ಏನೇ ಆದರೂ ನಾವು ಕತ್ತಲಾಗುವಷ್ಟರಲ್ಲಿ ತಲುಪುವುದು ಅಸಾಧ್ಯವೆಂಬ ಸತ್ಯ ನಮಗೂ ತಿಳಿದಿತ್ತು. ಹತ್ತುವುದು ತುಂಬಾ ಕಷ್ಟವೆಂದುಕೊಂಡಿದ್ದ ನಮಗೆ, ಇಳಿಯುವುದೇ ಅತ್ಯಂತ ಕಷ್ಟವೆಂದು ಅರಿವಾಗತೊಡಗಿತು. ಇಳಿಯುವ ಸಮಯಕ್ಕೆ ಸರಿಯಾಗಿ ಸಂಜೆಯ ಮಳೆಯು ಪ್ರಾರಂಭವಾಗಿ ನಮ್ಮಲ್ಲಿ ನಡುಕ ಉಂಟು ಮಾಡಿತ್ತು. ಸರಿ ಇನ್ನೇನು ಮುಳ್ಳೋಡಿಯ ಸತೀಶ್‌ರವರ ಮನೆ ಒಂದು ಕಿ.ಮೀ. ದೂರ ಇದೆ ಅನ್ನುವಷ್ಟರಲ್ಲಿ ತಂಡದ ಓರ್ವ ಶಿಕ್ಷಕರು ಸಂಪೂರ್ಣ ಶಕ್ತಿಹೀನವಾಗಿ ಕುಸಿದುಹೋದರು.





ದೇಹವು ತುಂಬಾ ದಣಿದ ಕಾರಣ, ದೇಹದಲ್ಲಿ ಗ್ಲುಕೋಸ್ ಪ್ರಮಾಣವು ನಶಿಸಿ, ಕುಸಿದುಬೀಳಲು ಕಾರಣವಾಗಿತ್ತು. ಬ್ಯಾಗಿನಲ್ಲಿ ಉಳಿದ ರಸಭರಿತ ಟೊಮ್ಯೊಟೋ ಹಣ್ಣುಗಳನ್ನು ತಿನ್ನಿಸಿ ಪುನಃ ಅಲ್ಲಿಂದ ಕಾಲ್ತೆಗೆದೆವು. ಆ ಘಟನೆಯಿಂದ ತಂಡದ ಇನ್ನುಳಿದ ೮ ಮಂದಿಗೆ ಸ್ವಲ್ಪ ವಿರಮಿಸಲು ಕತ್ತಲಲ್ಲೆ ಅವಕಾಶ ಸಿಕ್ಕಿತ್ತು. ಹೇಗೋ ಧೈರ್ಯಮಾಡಿ ಅಲ್ಲಿಂದ ಸುರಕ್ಷಿತವಾಗಿ ಮುಳ್ಳೋಡಿ ಹೌಸ್ ಸೇರಿಕೊಂಡೆವು. ನಾವು ಚಾರಣವನ್ನು ಮುಗಿಸಿಕೊಂಡು ಬಂದಾಗ ರಾತ್ರಿ ೯ ಗಂಟೆಯಾಗಿತ್ತು. ಅಲ್ಲಿಗೆ ಕುದುರೆಮುಖ ಪೀಕ್ ಚಾರಣವನ್ನು ಒಟ್ಟು ೧೧ ಗಂಟೆಗಳ ಸಮಯವನ್ನು ತೆಗೆದುಕೊಂಡು ನಿರಂತರ ಶ್ರಮದೊಂದಿಗೆ ಪೂರೈಸಿದ ಸಂತಸ ನಮಗಾಗಿತ್ತು.

ನಾವುಗಳು ಚಾರಣ ತೆರಳಿದ ಆ ಶೋಲಾಕಾಡುಗಳ ಕಣಿವೆ ಮಾರ್ಗಗಳಲ್ಲಿ ಸುಮಾರು ೨೫ಕ್ಕೂ ಹೆಚ್ಚು ಹುಲ್ಲಿನ ಪ್ರಭೇದಗಳು, ೪೫ಕ್ಕೂ ಹೆಚ್ಚು ಪೊದೆಸಸ್ಯಗಳು, ೧೨ಕ್ಕೂ ಹೆಚ್ಚು ಗಮ–ಗಮ ಎನಿಸುವ ಪುಷ್ಪ ಸಸ್ಯಗಳ ಪ್ರಭೇದಗಳು ಹಾಗೂ ೩೮ಕ್ಕೂ ಹೆಚ್ಚು ಕಾಡು ಜಾತಿಯ ಬೃಹತ್ ಮರಗಳು ಕಂಡುಬಂದಿದ್ದವು.

ಈ ಪ್ರದೇಶವು ಪ್ರಾಣಿ–ಪಕ್ಷಿ ಸಂಕುಲಗಳ ಆವಾಸಕ್ಕೆಂದೇ ಸೃಷ್ಟಿಯಾದಂತಿದೆ. ನಾವು ಮೊದಲ ದಿನ ಉಳಿದುಕೊಂಡ ಸೋಮಾವತಿ ಫಾಲ್ಸ್ ಬಳಿ ಪ್ರಥಮ ಹಂತದಲ್ಲೆ ಗಾಬರಿ ಮತ್ತು ಆತಂಕಗಳನ್ನು ಸೃಷ್ಟಿಸುವಂತೆ ಕಾಳಿಂಗ ಸರ್ಪಗಳ ಸುಮಾರು ೧೧ ಅಡಿಗಳಷ್ಟು ಉದ್ದವಾದ ಮೈ ಪೊರೆಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಹಾವುಗಳ ಬಗ್ಗೆ ಪ್ರಾಥಮಿಕ ತರಬೇತಿಯನ್ನು ಪಡೆದುಕೊಂಡಿದ್ದ ನಾನು ಧೃತಿಗೆಡದೆ ಅಲ್ಲಿದ್ದ ಎಲ್ಲಾ ಹಾವಿನ ಪೊರೆಗಳನ್ನು ಒಗ್ಗೂಡಿಸಿ ಅಳತೆ ಮಾಡಿದಾಗ ಇದರ ಉದ್ದಗಲದ ಮಾಹಿತಿ ಲಭ್ಯವಾಗಿತ್ತು. ಸ್ಥಳದಲ್ಲೆ ತಂಡದ ೮ ಮಂದಿಗೂ ಉರಗಗಳ ಕುರಿತಂತೆ ಪ್ರಾಥಮಿಕ ಮಾಹಿತಿಯನ್ನು ನೀಡಿ ಧೈರ್ಯ ತುಂಬಲಾಯಿತು. ಅಂದರೆ ನಿತ್ಯ ಹರಿದ್ವರ್ಣಗಳ ಕಾಡುಗಳಂತೆ ಈ ಭಾಗದಲ್ಲೂ ಕಾಳಿಂಗ ಸರ್ಪಗಳ ಇರುವಿಕೆ ನನ್ನ ಗಮನಕ್ಕೆ ಬಂದಿದ್ದು ಸಂತಸ ತಂದಿತ್ತು. ಜೊತೆಯಲ್ಲಿ ಈ ಭಾಗಗಳಲ್ಲಿ ಸ್ಥಳೀಯರ ಮಾಹಿತಿಯ ಪ್ರಕಾರ ಹೆಬ್ಬಾವುಗಳು, ವೈಪರ್‌ಗಳು, ನಾಗರಹಾವುಗಳು ಸೇರಿದಂತೆ ಗ್ರೀನ್‌ವೈನ್‌ನಂತಹ ಹಸಿರು ಹಾವುಗಳು ಹೆಚ್ಚಾಗಿ ಕಾಣಸಿಗುತ್ತವೆ. ರಾಷ್ಟ್ರಪ್ರಾಣಿ ಹುಲಿ, ಚಿರತೆ, ಕರಡಿ, ಮುಳ್ಳು ಹಂದಿಗಳು, ಕಾಡುಹಂದಿಗಳು, ಕಡವೆಗಳು, ಜಿಂಕೆಗಳು, ಕಾಡುಕುರಿಗಳು ಹಾಗೂ ಭಾರಿ ಗಾತ್ರದಿಂದ ಕೂಡಿದ ಕಾಡುಕೋಣಗಳು ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಸಾಮಾನ್ಯವಾಗಿ ಈ ಪರ್ವತಶ್ರೇಣಿಗಳಲ್ಲಿ ಹೆಚ್ಚು ಅಂದರೆ, ಶೇಕಡ ೬೦ರಷ್ಟು ಹುಲ್ಲುಗಾವಲು ಪ್ರದೇಶವನ್ನು ಹೊಂದಿರುವ ಕಾರಣ ಇಲ್ಲಿ ಸಸ್ಯಾಹಾರಿ ಸಸ್ತನಿ ಪ್ರಭೇದಗಳು ಸಾಮಾನ್ಯವಾಗಿ ತಮ್ಮ ನೆಲೆಗಳನ್ನು ಕಂಡುಕೊಂಡಿವೆ. ಇದಕ್ಕೆ ಸಾಕ್ಷಿಯೆಂಬಂತೆ ನಮ್ಮ ತಂಡವು ಬ್ರಿಟಿಷ್ ಬಂಗಲೆಯ ಸಮೀಪ ಚಾರಣದಲ್ಲಿ ತೊಡಗಿದ್ದ ವೇಳೆಯಲ್ಲಿ ಸಂಜೆ ೫ ಗಂಟೆಯ ಸಮಯದಲ್ಲಿ ಕಾಡುಕೋಣಗಳ ಗುಂಪೊಂದು ಹಸಿರ ಹುಲ್ಲುರಾಶಿಯನ್ನು ಮೇಯುತ್ತಿದ್ದ ದೃಶ್ಯ ಗೋಚರವಾಗಿತ್ತು. ಈ ದೃಶ್ಯ ದೂರದಿಂದ ಗುಂಪಿನ ಗಿಡಮರಗಳಂತೆ ಕಂಗೊಳಿಸುತ್ತಿದ್ದ ಕಾರಣ ಸ್ಪಷ್ಟ ಚಿತ್ರಣ ಸಾಧ್ಯವಾಗಲಿಲ್ಲ. ಇವು ಕಾಡುಕೋಣಗಳೆಂದೇ ಖಾತ್ರಿ ಮಾಡಿಕೊಟ್ಟದ್ದು ಮಾತ್ರ ನಮ್ಮ ಜೊತೆಯಲ್ಲಿದ್ದ ಗೈಡ್.

ಇನ್ನು ಪಕ್ಷಿ ಪ್ರಭೇದಗಳ ಕುರಿತಂತೆ ಮಲಬಾರ್ ಟ್ರೋಗಾನ್, ಏಷಿಯನ್ ಪ್ಯಾರಡೈಸ್ ಫ್ಲೈಕ್ಯಾಚರ್, ರಾಕೆಟ್ ಟೈಲ್ಡ್ ಡ್ರೊಂಗೊ, ಟ್ರೀ ಪೈ, ಥ್ರಷ್, ನತ್ಯಾಚ್, ಬ್ಲಾಕ್ ಕ್ಯಾಪ್ಡ್ ಮೊನಾರ್ಕ್, ಸನ್ ಬರ್ಡ್ಸ್ ಹಾಗೂ ಇತರೆ ಪಕ್ಷಿ ಪ್ರಭೇದಗಳು ಈ ಸ್ಥಳದಲ್ಲಿ ತಮ್ಮ ಬೀಡು ಬಿಟ್ಟಿರುವ ಸ್ಪಷ್ಟ ಮಾಹಿತಿ ನನಗೆ ಲಭಿಸಿತು. ಸುಮಾರು ಈ ಸ್ಥಳದಲ್ಲಿನ ೩೦ ಕಿ.ಮೀ. ವ್ಯಾಪ್ತಿಯಲ್ಲಿ ತಿರುಗಾಟ ನಡೆಸಿದ ನನಗೆ ಒಟ್ಟು ೫೬ ಪಕ್ಷಿ ಪ್ರಭೇದಗಳು ಈ ಪರ್ವತ ಶ್ರೇಣಿಗಳಲ್ಲಿ ಗೋಚರವಾಗಿದ್ದವು. ಇನ್ನು ಸೂಕ್ತವಾಗಿ ಪಕ್ಷಿ ವೀಕ್ಷಣೆಯಲ್ಲಿ ತೊಡಗಿಕೊಂಡರೆ ಸುಮಾರು ೩೦೦ಕ್ಕೂ ಹೆಚ್ಚು ಪ್ರಭೇದಗಳು ಈ ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ ನಮಗೆ ಲಭಿಸುತ್ತವೆ. ಅತ್ಯಂತ ಸಂತಸ ತಂದದ್ದು ಮುಳ್ಳೋಡಿ ಮನೆ ಮುಂಭಾಗದ ಬಾಳೆ ಮತ್ತು ಅಡಿಕೆ ತೋಟಗಳು ಹಾಗೂ ಆವರಣದಲ್ಲಿ ಬೆಳೆಸಿದ ಡೇರೆ ಹೂಗಳು ಮತ್ತು ಆಲಂಕಾರಿಕ ಹೂವಿನ ಸಸ್ಯಗಳು, ಸನ್‌ಬರ್ಡ್ಸ್‌ಗಳಿಗೆ, ಬುಲ್–ಬುಲ್‌ಗಳಿಗೆ ಹಾಗೂ ವಾರ್ಬ್ಲರ್ ಪಕ್ಷಿಗಳಿಗೆ ಹೆಚ್ಚಿನ ಆಹಾರ ಸಂಪನ್ಮೂಲವನ್ನು ಒದಗಿಸುವಲ್ಲಿ ಮುಂದಾಗಿದ್ದವು.

ಸತೀಶ್ ಹಾಗೂ ಇವರ ಕುಟುಂಬದವರ ಮುಳ್ಳೋಡಿ ಹೌಸ್‌ನ ಈ ಹೋಂ ಸ್ಟೇ ಅತಿಥಿ ಗೃಹವು ಸೋಮಾವತಿ ಫಾಲ್ಸ್, ತಿರುಮಾಳ್ ಗುಪ್ಪಿ ಮತ್ತು ಕುದುರೆಮುಖ ಪೀಕ್‌ನ ಸ್ಥಳಕ್ಕೆ ಭೇಟಿ ನೀಡುವವರಿಗೆ ಊಟ, ವಸತಿ ಹಾಗೂ ಗೈಡ್‌ಗಳ ವ್ಯವಸ್ಥೆಗೆ ಸೂಕ್ತವಾಗಿದೆ. ವಿಶೇಷವೆಂದರೆ ಪ್ರವಾಸಿಗರಿಗೆ ಅಡುಗೆ ಮಾಡಲು ಬೇಕಾಗುವಂತಹ ಶೇಕಡ ೪೦ರಷ್ಟು ಪದಾರ್ಥಗಳನ್ನು ತಮ್ಮ ಕೈತೋಟಗಳಲ್ಲೆ ಬೆಳೆದುಕೊಳ್ಳುತ್ತಾರೆ. ಇಂತಹ ತರಕಾರಿಗಳು ತಾಜಾ ಹಾಗೂ ಆರೋಗ್ಯಕರವೂ ಕೂಡ. ನಿಮಗೆ ಬೇಕಾದಾಗಲೆಲ್ಲಾ ಕಾಫಿ, ಟೀ ಮತ್ತು ಹಾಲನ್ನು ಕಾಯಿಸಿಯೂ ನೀಡುತ್ತಾರೆ. ಒಟ್ಟಾರೆ ಇವರ ಈ ಮುಳ್ಳೋಡಿ ಹೌಸ್‌ನ ಆತಿಥ್ಯ ಯಾರಿಗೂ ಬೇಸರವನ್ನುಂಟು ಮಾಡದು. ಜೊತೆಯಲ್ಲಿ ಪ್ರವಾಸಿಗರೂ ಕೂಡ ಅಷ್ಟೇ ನೀತಿ–ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಎಲ್ಲೇ ಆಗಲಿ ಯಾವುದೇ ಸ್ಥಳವಾಗಲೀ ನಮ್ಮ ನೀತಿಗೆ ತಕ್ಕ ಪ್ರೀತಿ ಸದಾ ಇರುತ್ತದೆ.

ವನ್ಯ ಮತ್ತು ವನರಾಶಿಯ ತವರಾದ ಈ ಮಲೆನಾಡ ಕುದುರೆಮುಖ ಪರ್ವತ ಶ್ರೇಣಿಗಳು, ಬರಿಯ ಪ್ರವಾಸಿಗರನ್ನಾಗಲೀ, ಚಾರಣಿಗರನ್ನಾಗಲೀ, ಛಾಯಾಗ್ರಾಹಕರನ್ನಾಗಲೀ ಕೈ ಬೀಸಿ ಕರೆಯುವುದಿಲ್ಲ. ಬದಲಾಗಿ ತನ್ನೊಡಲಲ್ಲಿರುವ ನಿಸರ್ಗ ಸಂಪತ್ತನ್ನು ಲೋಕಾರ್ಪಣೆ ಮಾಡುವಂತಹ ಪರಿಸರ ಅಧ್ಯಯನಕಾರರಿಗೂ ಸಂಶೋಧಕರಿಗೂ ಮತ್ತು ಯಾವುದೇ ನಿರ್ದಿಷ್ಟ ಜೀವರಾಶಿಗಳ ಕುರಿತು ಅಧ್ಯಯನ ನಡೆಸುವಂತಹ ವಿದ್ಯಾರ್ಥಿಗಳಿಗೂ ಕೈ ಬೀಸಿ ಕರೆದು ಪ್ರಥಮ ಆದ್ಯತೆಯನ್ನು ನೀಡಿ ಸಹಕರಿಸುತ್ತದೆ ಈ ಕುದುರೆಮುಖ ವನರಾಶಿಯ ಹಸಿರು ಹೊನ್ನಗಂಬಳಿ. ಸ್ಥಳೀಯವಾಗಿ ಕುದುರೆಮುಖ ಅರಣ್ಯ ಇಲಾಖೆಯ ಅನುಮತಿಯೊಂದಿಗೆ ಈ ಅಧ್ಯಯನ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬಹುದು. ಸಾಕಷ್ಟು ಅವಶ್ಯಕತೆ ಇರುವ ವನ್ಯಸಂಕುಲಗಳ ಕುರಿತಾದ ಗುಪ್ತಮಾಹಿತಿಗಳ ಬೆನ್ನು ಹತ್ತಿ ಉತ್ತಮ ಸಾಧನೆಗೆ ಪಾತ್ರರಾಗಬಹುದು. ಅಧ್ಯಯನಕ್ಕೆಂದು ತೆರಳಿದ ಸಮಯಗಳಲ್ಲಿ ಅರಣ್ಯ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಬೇಕಾಗುತ್ತದೆ. ಏಕೆಂದರೆ ನೀವು ತೆರಳಿರುವ ಈ ಸ್ಥಳವು ಭಾರತ ದೇಶದ ಪ್ರಮುಖ ರಾಷ್ಟ್ರೀಯ ಉದ್ಯಾನಗಳಲ್ಲೊಂದಾಗಿರುತ್ತದೆ. ಕಡ್ಡಾಯವಾಗಿ ನಿಬಂಧನೆಗಳನ್ನು ಪಾಲಿಸಬೇಕಾಗುತ್ತದೆ.

ಪ್ರವಾಸಿಗರು ಮತ್ತು ಚಾರಣಿಗರು ನಿಮ್ಮ ಆಯ್ಕೆಯಂತೆ ಎಲ್ಲಿಂದ ತೆರಳುವುದು ಎಂದು ನಿರ್ಧರಿಸಿ ಜೀವನದಲ್ಲೊಮ್ಮೆ ಕುದುರೆಮುಖ ಪೀಕ್ ಹತ್ತಿ ಬನ್ನಿ. ಈ ಸ್ಥಳಕ್ಕೆ ತೆರಳಲು ಸೂಕ್ತ ಕಾಲವೆಂದರೆ ಆಗಸ್ಟ್‌ನಿಂದ ಅಕ್ಟೋಬರ್ ತಿಂಗಳು. ಕುದುರೆಮುಖದ ಪರ್ವತ ಶ್ರೇಣಿಗಳು ಹಚ್ಚ ಹಸಿರಿನಿಂದ ಕಂಗೊಳಿಸುವ ಸಮಯವಾಗಿರುತ್ತದೆ. ಇನ್ನು ವಿಶೇಷವೆಂದರೆ ಈ ಸಮಯದಲ್ಲಿ ಛಾಯಾಗ್ರಾಹಕರಿಗಂತೂ ಅದೊಂದು ಶುಭಮುಹೂರ್ತವೇ ಸರಿ. ಹವ್ಯಾಸಿ ಛಾಯಾಗ್ರಾಹಕರಿಗೆ ಈ ಸ್ಥಳವು ಪಾಠಶಾಲೆಯಾಗಿ ಪರಿಣಮಿಸುತ್ತದೆ.

**ಡಿ. ಎನ್. ರವಿಕುಮಾರ್**
ಚಿತ್ರಕಲಾ ಉಪನ್ಯಾಸಕರು, 'ಸಾ.ಕಾ.ರ.' ನಿಲಯ
೬ನೇ ಕ್ರಾಸ್ ವೆಸ್ಟ್, ಜೆ. ಸಿ. ಆರ್. ಬಡಾವಣೆ, ಚಿತ್ರದುರ್ಗ – ೫೭೭ ೫೦೧



ನಾನು ಓದಿದ ಪುಸ್ತಕ

ಕೃತಿಯ ಹೆಸರು : **ಬರ ಅಂದ್ರೆ ಎಲ್ಲರಿಗೂ ಇಷ್ಟ**
ಇಂಗ್ಲಿಷ್ ಮೂಲ : **ಪಿ. ಸಾಯಿನಾಥ್**
ಕನ್ನಡಕ್ಕೆ : **ಜಿ. ಎನ್. ಮೋಹನ್**
ಪ್ರಕಾಶಕರು : ಅಭಿನವ, ೧೭/೧೮-೨, ೧ನೇ ಮುಖ್ಯರಸ್ತೆ
ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦
ಪುಟಗಳು : ೫೦೬
ಬೆಲೆ : ರೂ. ೩೫೦/-

# 'ಬರ ಅಂದ್ರೆ ಎಲ್ಲರಿಗೂ ಇಷ್ಟ'- ಭಿನ್ನ ಹಾದಿಯ ಪಯಣ

**ಜಾ**ಗತಿಕ ಬಂಡವಾಳವಾದ ಹುಟ್ಟುಹಾಕಿರುವ ಅಭಿವೃದ್ಧಿಯ ಭಸ್ಮಾಸುರ ನರ್ತನದಲ್ಲಿ ಜೀವಜಗತ್ತು ತಲ್ಲಣಿಸಿಹೋದ ಕಥೆಯನ್ನು ಸಂತನ ಅನಂತ ಕರುಣೆಯ ಕಣ್ಣಿನಲ್ಲಿ ಕಾಣಿಸಿದ ಕೃತಿಯಿದು. ಸರ್ಕಾರವೇ ಬಂಡವಾಳಶಾಹಿ ವ್ಯವಸ್ಥೆಯಾಗಿರುವ ದೇಶದಲ್ಲಿ ಅಭಿವೃದ್ಧಿಯ ಪ್ರಕ್ರಿಯೆಯು ಜೀವವಿರೋಧಿ ನಿಲುವುಗಳಿಂದ ಕೆಲವೇ ಜನರ ಆರ್ಥಿಕ ಕ್ರೋಢೀಕರಣದ ಮಂತ್ರವಾಗುತ್ತಿರುವುದನ್ನು ಅಸಂಖ್ಯ ನಿದರ್ಶನಗಳಲ್ಲಿ ಪಿ. ಸಾಯಿನಾಥ್ ತೆರೆದಿಟ್ಟರು. ಈ ದೇಶದ ಎಲೀಟ್ ಕ್ಲಾಸ್ ಎಷ್ಟೊಂದು ನಾಜೂಕಾಗಿ ಅಂಚಿನ ಜನಗಳನ್ನು ಒತ್ತುವರಿ ಮಾಡುತ್ತದೆನ್ನುವುದನ್ನು ತೋರಿಸಿದರು. "ಒಬ್ಬನೇ ಒಬ್ಬ ವೈದ್ಯ, ನರ್ಸ್, ತಜ್ಞ, ರೋಗಿ ಯಾರನ್ನೂ ಕರೆಯದೆ ವೈದ್ಯಕೀಯ ವಿಷಯದ ಬಗ್ಗೆ ವಿಚಾರಸಂಕಿರಣ ಮಾಡಿದರೆ ವಿಚಿತ್ರ ಅನ್ನಿಸುತ್ತದಲ್ಲವೇ? ಭೂಸುಧಾರಣೆಯನ್ನು ಅರೆದು ಕುಡಿಯುವ ಸಂಕಿರಣಗಳಲ್ಲಿ, ಸಮಾವೇಶಗಳಲ್ಲಿ ಇದೇ ವಿಚಿತ್ರ. ತನ್ನ ಕಥೆ ಹೇಳಿಕೊಳ್ಳುವ ಒಬ್ಬನೇ ಒಬ್ಬ ಭೂರಹಿತ ಕಾರ್ಮಿಕನಿಲ್ಲ. ಆದರಿದು ಈ ದೇಶದ ಎಲೀಟ್ ಕ್ಲಾಸಿಗೆ ತುಂಬ ಸಹಜವೆನಿಸುತ್ತದೆ." ನಮ್ಮ ಅಭಿವೃದ್ಧಿಯ ಪರಿಕಲ್ಪನೆಗಳು ಹೀಗೆ ಡೆವಲಪ್‌ಮೆಂಟ್ ಬಿಸಿನೆಸ್ ಆಗಿರುವುದನ್ನು ಸಾಯಿನಾಥ್ ಎಳೆಎಳೆಯಾಗಿ ಬಿಡಿಸಿಡುತ್ತಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯ ನಾಲ್ಕನೆಯ ಅಂಗವಾದ ಮಾಧ್ಯಮಗಳು ತಮ್ಮನ್ನು ಪ್ರಭುತ್ವ ಮತ್ತು ಬಂಡವಾಳವಾದಿ ನಿಯತ್ತಿಗೆ ಲಗತ್ತಿಸಿಕೊಂಡಿರುವುದರಿಂದ ಉಂಟಾಗುವ ಅನಾಹುತಗಳನ್ನು ಬಿಚ್ಚಿಟ್ಟರು. ಸಮೂಹ ಬದುಕಿಗೆ ಬೆನ್ನುಹಾಕಿ ನಿಂತಿರುವ ಮಾಧ್ಯಮಗಳ ನೀತಿಯನ್ನು ತಮ್ಮ ಪ್ರತ್ಯೇಕ ಹೆಜ್ಜೆಯ ಮೂಲಕವೇ ಪ್ರಶ್ನಿಸಿದರು. ಅತ್ಯುನ್ನತ ಸರ್ಕಾರಿ ಮೂಲಗಳ ಪ್ರಕಾರ ಅಥವಾ ಅತ್ಯುನ್ನತ ಬಂಡವಾಳದ ತೊಡಗಿಸುವಿಕೆ ಗುಂಟ ರೂಪುಗೊಳ್ಳುವ ವರದಿಗಳು ಯಾವ ಸತ್ಯವನ್ನು ಎಷ್ಟರಮಟ್ಟಿಗೆ ತಲುಪಿಸಿವೆ ಎಂದು ಕೇಳಿದರು. ಒಂದು ತಪಸ್ಸಿನಂತೆ ಈ ದೇಶದ ಬಡ ಮತ್ತು ಅತ್ಯಂತ ಬಡ ಪ್ರದೇಶಗಳ ಜನ ಬದುಕನ್ನು ಪ್ರವೇಶಿಸಿದರು. ಅವರನ್ನು ಉದ್ಧರಿಸುವ, ಸವಲತ್ತುಗಳನ್ನು ಕೊಡುವ ಸರ್ಕಾರದ ಮಧ್ಯವರ್ತಿಯಂತಲ್ಲ, ಕಾರ್ಪೊರೇಟ್ ಲೋಕದ ಅಹಂಕಾರಿಯಂತಲ್ಲ, ಮತೀಯವಾದಿ ಮಠಾಧೀಶರಂತಲ್ಲ. ಜನರ ಸಂಕಟ ಮತ್ತು ವಿವೇಕಗಳನ್ನು ತನ್ನ ಜ್ಞಾನವಾಗಿಸಿಕೊಳ್ಳುವ ಬೌದ್ಧಿಕ ಗರ್ವಿಯಂತಲ್ಲ, ಸ್ವಾರ್ಥಿಯಂತಲ್ಲ. ಅವರು ಇಟ್ಟಿದ್ದು ಬೇರೆಯೇ ನಡೆ. ಆಯ್ದುಕೊಂಡಿದ್ದು ಬೇರೆಯದೇ ಪಥ. ಈ ಭಿನ್ನ ಹಾದಿಯ ಪಯಣದ ಹೆಜ್ಜೆಗುರುತುಗಳನ್ನು, ಆ ಅಗಮ್ಯ ಲೋಕವನ್ನು ಅಷ್ಟೇ ಆರ್ದ್ರವಾಗಿ ಕನ್ನಡಕ್ಕೆ ತಂದವರು ಜಿ. ಎನ್. ಮೋಹನ್. ಈ ಅನುವಾದ ಕೃತಿಯ ಹಿಂದೆ ಇರುವುದು ಆ ಭಿನ್ನ ಪ್ರಯಾಣದ ಹಾದಿಯನ್ನು ಕಾಣಿಸುವ ಅಪರಿಮಿತ ಬದ್ಧತೆ.

ಅಭಿವೃದ್ಧಿಯ ಯೋಜನೆಗಳನ್ನು ಸಮಾಜದ ಅಂಚಿಗೆ ದೂಡಲ್ಪಟ್ಟವನ ಕಣ್ಣುಗಳಲ್ಲಿ ಕಾಣಿಸುವ, ಆ ಮೂಲಕ ಅದನ್ನು ಮರುನಿರ್ವಚನಕ್ಕೆ ಒಳಗುಮಾಡುವ ಕೃತಿಯಿದು. ಒಂದು ಸುರಕ್ಷಿತ ಆವರಣದೊಳಗೆ ಕೂತು ತಂತ್ರಜ್ಞಾನವನ್ನು ಬಳಸಿ, ಮಾಹಿತಿಗಳನ್ನು ಕಲೆಹಾಕಿ, ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯ ಫಲಾನುಭವಿ ದೃಷ್ಟಿಕೋನದಿಂದ ಫಲಿತಗಳನ್ನು ಘೋಷಿಸಿದ ಬರಹಗಳು ಇವಲ್ಲ. ಭಾರತದ ಅಭಿವೃದ್ಧಿಯ ಹರಿಕಾರರು ಯಾವ ಚಿತ್ರವನ್ನು ನಮ್ಮ ಕಣ್ಣುಗಳಲ್ಲಿ ಮೂಡಿಸಿದ್ದಾರೋ ಅವುಗಳಿಗಿಂತ ಪೂರ್ತಿ ತಿರುವುಮುರುವಾದ ಪುರಾವೆಗಳು ಇಲ್ಲಿ ದೊರೆಯುತ್ತವೆ. ಇದಕ್ಕೆ ಕಾರಣ ಅನ್ವೇಷಕ ಆಯ್ದುಕೊಂಡ ದಾರಿಯ ಪ್ರಾಮಾಣಿಕತೆ. ತನ್ನ ಉದ್ಯೋಗದ ಸೆಕ್ಯುರಿಟಿಯನ್ನು ಬಿಸಾಕಿ, ಸೌಲಭ್ಯಗಳೊಂದಿಗೆ ಬದುಕುವ ನಾಗರಿಕ ಹುತ್ತದಿಂದ ಹೊರಬಂದು ಈ ದೇಶದ ಅತ್ಯಂತ ಬಡ ಜಿಲ್ಲೆಗಳಲ್ಲಿ ಅವರು ಸಂಚರಿಸಿದರು. ಭಾರತದ ನಕಾಶೆಯಲ್ಲಿ ಎಲ್ಲಿವೆ ಎಂದೇ ತಿಳಿಯಲಾರದ ಪ್ರದೇಶಗಳಲ್ಲಿ ಬುಡಕಟ್ಟು ಜನಾಂಗಗಳೊಟ್ಟಿಗೆ, ಆದಿವಾಸಿ ಜನರೊಂದಿಗೆ ಬದುಕಿದರು. ಒಂದೊಂದು ಪ್ರದೇಶದಲ್ಲಿ ತಿಂಗಳುಗಟ್ಟಲೆ ಉಳಿದರು. ೮೦ ಸಾವಿರ ಕಿ.ಮೀ.ಅನ್ನು ಎರಡು ವರ್ಷಗಳಲ್ಲಿ ಹೊಕ್ಕಾಡಿದರು. ಒಮ್ಮೆ ಹೋಗಿ ಬಂದಲ್ಲಿ ಕೆಲಕಾಲ ಬಿಟ್ಟು ಮತ್ತೆ ಹೋದರು. ಲೆಕ್ಕವನ್ನು ತಿರುವುಮುರುವಾಗಿ ಮಾಡಿ ಉತ್ತರವನ್ನು ನಿರ್ದಿಷ್ಟಗೊಳಿಸಿಕೊಳ್ಳುವಂತೆ, ತಮ್ಮ ಅಧ್ಯಯನದ ಫಲಿತವನ್ನು ವ್ಯವಧಾನದಿಂದ ಮತ್ತು ಜವಾಬ್ದಾರಿಯಿಂದ ನಿರೂಪಿಸಿದರು. ಅಲ್ಲಿಯ ಸಮಸ್ಯೆಗಳನ್ನು ಕಂಡರು ಮತ್ತು ಕಾಣಿಸಿದರು. ಆ ಅವರ ಜಗತ್ತನ್ನು ಜ್ಞಾನಗರ್ವಿಗಳೆದುರು ತಂದರು. ಆ ಮೂಲಕ ಭಾರತದ ಪರ್ಯಾಯ ಸಾಮಾಜಿಕ ಸಂಕಥನವನ್ನು ಮಂಡಿಸಿದರು.

ಜನಪ್ರತಿನಿಧಿಯಾಗಿ ಯೋಜನೆಗಳನ್ನು ರೂಪಿಸಬೇಕಾಗಿದ್ದ ಸರ್ಕಾರದ ಅಭಿವೃದ್ಧಿ ಪರಿಕಲ್ಪನೆಗಳು ಬಂಡವಾಳೋದ್ಯಮಿಗಳಿಗೆ ಬಂಡವಾಳವನ್ನು ಹಂಚಿಕೊಡುವ ಕೆಲಸಗಳಾಗಿವೆ. ಎಲ್ಲಿ ದೇಸೀ ಹಸುವಿನ ತಳಿಗಳಿದ್ದವೋ, ಹೈನುಗಾರಿಕೆ ಚೆನ್ನಾಗಿತ್ತೋ ಅಲ್ಲಿ ಜರ್ಸಿ ಆಕಳ ಆಗಮನದ ಹಾಲಿನ ಡೇರಿ ಪ್ರಾಜೆಕ್ಟ್ ಬರುತ್ತದೆ. ಕೆಲವೇ ವರ್ಷಗಳಲ್ಲಿ ಅಲ್ಲಿ ದೇಸಿ ತಳಿಗಳ ನಿರ್ನಾಮವಾಗುತ್ತದೆ. ಜರ್ಸಿ ತಳಿಗಳಿಗೆ ವ್ಯಯಿಸಬೇಕಾದ ಖರ್ಚಿನಿಂದ ಡೇರಿ ಉದ್ಯಮಕ್ಕೆ ನಷ್ಟವಾಗುತ್ತದೆ. ಮತ್ತು ಆ ಸರ್ಕಾರಿ ಪೋಷಿತ ಹೈನುಗಾರಿಕೆ ಮತ್ತೊಂದು ಸ್ಥಳಕ್ಕೆ ಸ್ಥಳಾಂತರಗೊಳ್ಳುತ್ತದೆ. ಆದಿವಾಸಿ ಕಲ್ಯಾಣ ನಿಗಮದಿಂದ ಮಂಜೂರಾದ ೧೭.೪೪ ಲಕ್ಷ ರೂಪಾಯಿ ವೆಚ್ಚದ ೩ ಕಿ.ಮೀ. ರಸ್ತೆಯಿಂದ, ಯಾರ ಹೆಸರಿನಲ್ಲಿ ರಸ್ತೆ ಮಾಡಲಾಗಿದೆಯೋ ಅವನಿಗೆ ಏನೂ ಪ್ರಯೋಜನವಿಲ್ಲ. ಅವನಿಗೆ ಅಗತ್ಯವಾದ ಮೂಲಭೂತ ಸೌಕರ್ಯವನ್ನಾಗಲಿ, ನೆಮ್ಮದಿಯನ್ನಾಗಲಿ ಈ

ಡಾ|| ವಿನಯಾ

## ನೆನಪು

### ಆರ್. ಕೆ. ಶ್ರೀಕಂಠನ್



ಕರ್ನಾಟಕ ಸಂಗೀತ ಕ್ಷೇತ್ರದ ದಿಗ್ಗಜ ರುದ್ರಪಟ್ಟಣ ಕೃಷ್ಣಶಾಸ್ತ್ರಿ ಶ್ರೀಕಂಠನ್ ಅವರು ೧೭.೦೨.೨೦೧೪ರಂದು ಬೆಂಗಳೂರಿನ ಖಾಸಗಿ ಆಸ್ಪತ್ರೆಯೊಂದರಲ್ಲಿ ನಿಧನ ಹೊಂದಿದ್ದಾರೆ. ತ್ಯಾಗರಾಜರ ಶಿಷ್ಯ ಪರಂಪರೆಗೆ ಸೇರಿದ ೯೪ರ ಪ್ರಾಯದ ಈ ಹಿರಿಯ ಗಾಯಕರು ಕರ್ನಾಟಕ ಸಂಗೀತ ಪರಂಪರೆಗೆ ನೀಡಿರುವ ಕೊಡುಗೆ ಅಪಾರ. ಪದ್ಮಭೂಷಣ ಪ್ರಶಸ್ತಿಯ ಜೊತೆಗೆ ಹತ್ತಾರು ಪುರಸ್ಕಾರಗಳಿಗೆ ಭಾಜನರಾಗಿದ್ದ ಈ ಮಹಾನ್ ಸಂಗೀತ ಕಲಾವಿದರು ಇಂದಿನ ಹಲವಾರು ಸುಪ್ರಸಿದ್ಧ, ಪ್ರತಿಭಾನ್ವಿತ ಗಾಯಕ–ಗಾಯಕಿಯರಿಗೆ ಹೆಮ್ಮೆಯ ಗುರುಗಳಾಗಿದ್ದವರು. ಇಳಿವಯಸ್ಸು ಯಾವತ್ತಿಗೂ ಅವರ ಅದಮ್ಯ ಉತ್ಸಾಹಕ್ಕೆ ಅಡ್ಡಿ ಬರಲೇ ಇಲ್ಲ.

ದಿವಂಗತರಿಗೆ 'ಹೊಸತು' ಬಳಗದ ನಮನಗಳು.

ಯೋಜನೆ ನೀಡಿಲ್ಲ. ಜನಸಂಖ್ಯಾ ನಿಯಂತ್ರಣದ ಸರ್ಕಾರೀ ಯೋಜನೆ ಹೆಣ್ಣುಮಕ್ಕಳಿಗೆ ನೋರ್‌ಪ್ಲಾಂಟನಂತಹ ಹಾನಿಕಾರಕ ಗರ್ಭನಿರೋಧಕವನ್ನು ತಣ್ಣಗೆ ವಿತರಿಸುತ್ತದೆ.

ಇಂತಹ ಜೀವವಿರೋಧಿ ಅಸಂಬದ್ಧ ಯೋಜನೆಗಳ ಬಗ್ಗೆ ಖಚಿತವಾದ ತಿಳುವಳಿಕೆ ಇರುವುದು ಅಧಿಕಾರಶಾಹಿಗಳಿಗೆ. ಆದರೆ ಅದರ ಫಲಾನುಭವಿಗಳಾದ ಈ ವರ್ಗ ಕನಿಷ್ಠ ಮನುಷ್ಯತ್ವವನ್ನೂ ಉಳಿಸಿಕೊಳ್ಳುವುದಿಲ್ಲ. ಬರಗಾಲದ ಕಾರ್ಯಾಚರಣೆಯ ದಿನಗಳಲ್ಲಿ ಅದರಲ್ಲಿ ತೊಡಗಿಸಿಕೊಂಡ ವಕೀಲನೊಬ್ಬ, "ಈ ವರ್ಷದ ಬರದಲ್ಲಿ ಸ್ಕೂಟರು ಕೊಂಡಿದ್ದೇನೆ, ಮುಂದಿನ ವರ್ಷವೂ ಹೀಗೆ ಬರ ಬಿದ್ದರೆ ಒಂದು ಜೀಪು ಕೊಳ್ಳುವ ಉದ್ದೇಶವಿದೆ" ಎನ್ನುತ್ತಾನೆ. ಸಾಮಾನ್ಯ ಜನರನ್ನು ಬಳಕೆಯ ವಸ್ತುವನ್ನಾಗಿಸಿಕೊಂಡಿರುವ ಅಧಿಕಾರಿ ವರ್ಗದ ನಿರ್ಲಜ್ಜತೆಯಿದು. ಬರವನ್ನು ಮೂರನೇ ಬೆಳೆಯಾಗಿ ಸ್ವೀಕರಿಸುವ ಜನರಿದ್ದಾರೆ. ಬರವನ್ನೆಲ್ಲ ಕೈಗಾರಿಕೆಯಾಗಿಸಿಕೊಂಡ ಕಂಟ್ರಾಕ್ಟರ್‌ಗಳಿದ್ದಾರೆ. ಸರ್ಕಾರ ಅಣೆಕಟ್ಟುಗಳ ಯೋಜನೆಯನ್ನು ತರುತ್ತದೆ. ಅದರ ಅನಾಹುತಕ್ಕಾಗಿ ಜನಾಂದೋಲನ ನಡೆಯುತ್ತದೆ. ಆ ಆಂದೋಲನದಲ್ಲಿ ಭಾಗವಹಿಸಿದ ಕಾರ್ಯಕರ್ತನೊಬ್ಬ ದಿಗಿಲಿನಿಂದ ಹೇಳಿದ್ದ – "ಸರ್ಕಾರದ ಯೋಜನೆಯನ್ನು ತಡೆಯಬಹುದು, ಈ ಕಂಟ್ರಾಕ್ಟರುಗಳ ಲಾಬಿಯನ್ನಲ್ಲ." ಮಧ್ಯಮವರ್ಗದ ಅಧಿಕಾರಿಶಾಹಿಗಳ ಸ್ವಾರ್ಥ ಲಾಲಸೆಗಳೇ ಪ್ರಭುತ್ವದ ಯೋಜನೆಗಳನ್ನು ರೂಪಿಸುತ್ತಿರುತ್ತವೆ. ಈ ಕೊಳ್ಳುಬಾಕ ಅಧಿಕಾರಶಾಹಿ, ಸರ್ಕಾರೀ ಯೋಜನೆಗಳ ಫಲವನ್ನು ತಾವೇ ಅನುಭೋಗಿಸುತ್ತ ನಿಜವಾದ ಫಲಾನುಭವಿಗಳನ್ನು ಅತಂತ್ರರನ್ನಾಗಿಸುತ್ತದೆ. ರಣಬೀರ್ ಕೊರವನಿಗೆ ಸರ್ಕಾರ ಮಂಜೂರು ಮಾಡಿದ ೧.೮೦ ಎಕರೆ ಭೂಮಿ ಹುಡುಕಿಕೊಳ್ಳುವುದು ೨ ವರ್ಷವಾದರೂ ಸಾಧ್ಯವಾಗುತ್ತಿಲ್ಲ. ರಣಬೀರ್ ಕೊರವನ ಈ ಸ್ಥಿತಿಗೆ, "ದೊಡ್ಡ ಭೂಮಾಲೀಕರಿಂದ ಹಿಡಿದು ಸ್ಥಳೀಯವಾಗಿ ಅಧಿಕಾರವನ್ನು ಕೈಯಲ್ಲಿಟ್ಟು ಕೊಂಡಿರುವ ಪೋಸ್ಟ್‌ಮಾಸ್ಟರ್, ಶಾಲೆಯ ಹೆಡ್‌ಮಾಸ್ಟರ್, ವಕೀಲ ಹೀಗೆ ಎಲ್ಲರೂ ಈ ಭೂಕಬಳಿಕೆಯಲ್ಲಿ ಪಾಲುದಾರರೇ." ಕಾಗದಪತ್ರಗಳಲ್ಲಿಯೇ ಆಟವಾಡಿ ಯಾವುದೇ ಹೊಡೆದಾಟವಿಲ್ಲದಂತೆ ಭೂಕಬಳಿಕೆ ಮಾಡಿಕೊಂಡು ಬಿಡಬಹುದು. ಇಂತಹ ಕಥನಗಳನ್ನು ಸಾಮಾಜಿಕ ಉತ್ಖನನದ ಶ್ರಮ ಮತ್ತು ಶ್ರದ್ಧೆಯೊಂದಿಗೆ ಕಾಣಿಸಿದ ಕೃತಿಯಿದು.

ಸಾಯಿನಾಥ್ ಮುಚ್ಚಿಹೋದ ದನಿಗಳನ್ನು ಮರೆತುಹೋದ ಮುಖಗಳನ್ನು ಕಾಣಿಸಿದರು. ಈ ಬರಹಗಳು ಅಂಚಿಗೆ ಒತ್ತುವರಿಯಾದವರ ಭಯ ದಿಗಿಲಿನ ದನಿಗಳನ್ನು ಕೇಳಿಸುತ್ತವೆ. ಗುಜರಾತ್ ಸರ್ಕಾರದ ಪ್ಯಾಕೇಜ್ ತಿರಸ್ಕರಿಸಿ ತಮ್ಮ ನೆಲದ ಮುಳುಗಡೆಯನ್ನು ವಿರೋಧಿಸುತ್ತಿರುವ ಲೌರಿಯಾ; ನೀರು ಇಲ್ಲೇ ಹತ್ತಿರ ಎಂದು ಕನಿಷ್ಠ ೨ ಕಿ.ಮೀ. ದೂರವನ್ನು ಖುಷಿಯಿಂದ ಕೈಮಾಡಿ ತೋರಿಸುವ ಪಹಾರಿಯಾ ಮಹಿಳೆ; ಸರ್ಕಾರದ ಅಭಿವೃದ್ಧಿಯ ದಾಳಿಗೆ ಸಿಲುಕಿ ಮೂರು ಸರ್ತಿ ಎತ್ತಂಗಡಿಯಾದ ಚೆಕಾಫರ್ ಊರಿನ ಖೋರಾನ 'ನಿಮ್ಮ ಮನೇಲಿ ನೀವೇ ಅತಿಕ್ರಮಣಕಾರರಾದ್ರೆ ಹೇಗಿರ್ತದೆ ಹೇಳಿ' ಎಂದು ಪ್ರಶ್ನಿಸುವ ನಗು, ಇಂತಹುದೇ ತಿರುಗಣಿಗೆ ಸಿಲುಕಿ ಸುಸ್ತಾಗಿ 'ಇದು ಯಾಕೆ ಯಾವಾಗಲೂ ನಮಗೇ ಆಗುತ್ತದೆ' ಎಂದು ಪ್ರಶ್ನಿಸುವ ಆದಿವಾಸಿ ಮಹಿಳೆ. ಇಂತಹ ಅಗಣಿತ ಕಥನಗಳು ಇಲ್ಲಿವೆ. ತನ್ನೆದುರು ತೆರೆದುಕೊಳ್ಳುವ ಸಂಗತಿಗಳನ್ನು ಒಂದು ಘಟನೆಯಾಗಲ್ಲ, ಪ್ರಕ್ರಿಯೆಯಾಗಿ ನೋಡುವ ಸಂಶೋಧನಾ ಶಿಸ್ತು ಇಲ್ಲಿದೆ. ಅಜ್ಜ ರೂ. ೧೫–೨೦ ಸಾಲ ಮಾಡಿದ್ದಕ್ಕೆ ಮೊಮ್ಮಗಳು ಕಾಮಾಟಿಪುರ ಸೇರುವುದನ್ನು ಗಮನಿಸುವುದು, ಒಂದು ದಿನಕ್ಕೆ ಕನಿಷ್ಠ ೧೩–೧೪ ಕಿ.ಮೀ. ನಡೆಯಬೇಕಾದ ಆ ಹೆಂಗಸರು ತಮ್ಮ ಆಯುಷ್ಯದ ೪೦–೪೫ ವರ್ಷಗಳನ್ನೂ ಕಾಣಲಾರದ್ದನ್ನು ಹೇಳುವುದು... ಇಂಥವೇ ದಾಖಲೆಗಳು.

ಸೃಜನಶೀಲತೆ ದಾಖಲೆಯಲ್ಲ. ಕಥನ ವರದಿಯಾಗಬಾರದು ಎನ್ನುವ ವಿಮರ್ಶೆಯ ಮಾನದಂಡಗಳನ್ನು ತಣ್ಣಗೆ ಲೇವಡಿ ಮಾಡುವ ಶಕ್ತಿ ಈ ಬರಹಗಳಿಗಿದೆ. ಇಲ್ಲಿಯ ಒಂದು ವರದಿ ಉಂಟುಮಾಡುವ ಪರಿಣಾಮವನ್ನು ಒಂದು ಕಥೆ ಮಾಡಬಲ್ಲುದಾದರೆ ಅದು ಅತ್ಯಂತ ಸಾರ್ಥಕ ಕಥೆಯಾದೀತು. ಆರ್ದ್ರವಾದ ಅಂತಃಕರಣದ ಬರಹ ವಿಧಾನ ಸೃಜನ ಮತ್ತು ಸೃಜನೇತರ ಎಂಬ ತರತಮವನ್ನು ನಿರಾಕರಿಸುತ್ತದೆ. ಇಲ್ಲಿ ಭಾರತದ ರಾಜಕಾರಣದ ವಿಶ್ಲೇಷಣೆಯ ಸೈದ್ಧಾಂತಿಕ ನಿಲುವುಗಳಿವೆ. ದೊಡ್ಡ ಸಮಸ್ಯೆಯೊಂದನ್ನು ದೀರ್ಘಕಾಲ ನಿರ್ಲಕ್ಷಿಸಿ ನಂತರ ಅದನ್ನು ಹಳೆಯದು ಎಂದು ತಳ್ಳಿಹಾಕೋ ಕ್ರಮಕ್ಕೆ ಉತ್ತರದಾಯಿಗಳು ಮಾಧ್ಯಮಗಳು ಮತ್ತು ಮಧ್ಯಮವರ್ಗ ಅಲ್ಲವೇ ? ಎಂಬ ಪ್ರಶ್ನೆಯಿದೆ. ಖಂಡಿತಾ, ಇವು ಸಾಮಾಜಿಕ ಬದ್ಧತೆಯ ಬರಹಗಳು, ಬದ್ಧತೆಯ ಶಕ್ತಿಯನ್ನು ಕಾಣಿಸುವ ಬರಹಗಳು. ಜಾಗತಿಕ ಬಂಡವಾಳವಾದ ಜನರ ಆತ್ಮಬಲವನ್ನು ಕುಗ್ಗಿಸುವ ಯುದ್ಧವನ್ನು ಸಾರಿದೆ. ಪೇಮಾ ಎಂಬ ಚಿತ್ರಕಾರನ ಅದ್ಭುತ ಸೃಜನಶೀಲತೆಯನ್ನು ಕಾರ್ಪೊರೇಟ್ ವಲಯ ಕೊಳ್ಳುವುದರ ಮೂಲಕವೇ ಅವನ ಆತ್ಮಘನತೆಯನ್ನು ನಿರ್ನಾಮ ಮಾಡುವ ರೂಪಕದಂತಹ ದಾಖಲೆಯಿದೆ. ಮಾಧ್ಯಮಗಳ ರಿಯಾಲಿಟಿ ಶೋ ಪ್ರಯೋಗಗಳಿಗೆ ಬಲಿಯಾದವರ ಪ್ರತಿನಿಧಿಯಂತೆ ಕಾಣುತ್ತಾನೆ ಪೇಮಾ. ಬಂಡವಾಳವಾದ ಪ್ರತಿರೋಧದ ಹಾದಿಯನ್ನೂ ಹದಗೆಡಿಸುತ್ತಿದೆ. ದಿಕ್ಕೆಡಿಸುತ್ತಿದೆ. ಕವಿ ಹಾಡುಗಾರ ವೈದ್ಯನಾಥ ಸಿಂಗ್ ಹಿಂಸೆಗೆ ಬಲಿಯಾಗಿಹೋಗುವುದು ಇಂಥದೇ ಬೆಳವಣಿಗೆಯಲ್ಲಿ. ಸೈದ್ಧಾಂತಿಕತೆ ಆಳವಾದ ಪ್ರಾಮಾಣಿಕತೆಯಲ್ಲಿ ಬೆರೆತು ಪಡೆದುಕೊಳ್ಳುವ ಅನೂಹ್ಯ ಶಕ್ತಿ ಇಲ್ಲಿಯ ಬರಹಗಳಿಗಿದೆ.

ಎಂತಹ ಕಠಿಣ ಸ್ಥಿತಿಯಲ್ಲೂ ಹೋರಾಡಿ ಗೆಲ್ಲುವ ಛಾತಿಯಿರುವ ಜನರ ಬದುಕುಗಳಿವೆ. ಬರಿಗಾಲ ಗಣಿ ಒಡತಿಯರಿದ್ದಾರೆ. ಕಾಡಲ್ಲಿ ಹರಿವ ಇರುವೆ ಸಾಲಿನಂತೆ ತೆಂಡು ಎಲೆ ಸಂಗ್ರಹಿಸುವ ಹೆಂಗಸರಿದ್ದಾರೆ. ಮಹಿಳಾ ದಿನಾಚರಣೆ ದಿನ ತಮಿಳುನಾಡಿನ ಪುದುಕೊಟ್ಟೈಯಲ್ಲಿ ೧೫೦೦ಕ್ಕೂ ಹೆಚ್ಚು ಹೆಂಗಸರು ಸೈಕಲ್ ರ‍್ಯಾಲಿ ಮಾಡಿ ಬದಲಾವಣೆಯ ಕನಸು ಬಿತ್ತುತ್ತಾರೆ. ಅವರ ಎಚ್ಚರ ಮತ್ತು ಸಂಘಟನೆ ವರ್ತಮಾನದ ಅಸಹನೀಯತೆಯನ್ನು ಬದಲಿಸಬಹುದೆಂಬ ತಾತ್ವಿಕತೆಯಿದೆ. "ನಮಗೆ ೩ ಎಕರೆ ಭೂಮಿ, ಒಂದಿಷ್ಟು ನೀರು ಕೊಡಿ. ಚಿತ್ರ ಬದಲಿಸುತ್ತೇವೆ" ಎನ್ನುವ ಈ ಬದುಕಿನ ತಳಾತಳದಲ್ಲಿ ಎಲ್ಲರ ಭಾರವನ್ನೂ ಹೊತ್ತವರ ಮಾತುಗಳ ನೈತಿಕ ಬೆಳಕು ಇಲ್ಲಿದೆ.

ಅನುವಾದ ಭಾಷಿಕ ಬದಲಾವಣೆಯಲ್ಲ. ಅದು ಆ ಸಂವೇದನಾ ಲೋಕವನ್ನು ನಮಗೆ ಪುನರ್ ನಿರ್ಮಿಸಿಕೊಳ್ಳುವ ಸಾರ್ಥಕ ಕೆಲಸ. ಈ ಕೃತಿ ಕನ್ನಡ ಚಿಂತನೆಗೆ ಖಂಡಿತ ಹೊಸ ವಿಸ್ತಾರವನ್ನು ಒದಗಿಸಿದೆ. ವ್ಯವಸ್ಥೆಯ ಭಾಗವಾಗಿರುವ ಕಾರಣಕ್ಕೆ ಈ ಎಲ್ಲ ಪಾಪಗಳ ಪಾಲುದಾರರಾಗಿರುವ, ಸುರಕ್ಷಿತ ವಲಯದಲ್ಲಿರುವ ಯಾರಲ್ಲಿಯೂ ಉತ್ತರದಾಯಿತ್ವದ ಜವಾಬ್ದಾರಿಯನ್ನು ಹುಟ್ಟಿಸುವ ಬರಹಗಳಿವು. ಈ ಇಂಥ ಕಾರಣಗಳಿಗಾಗಿ ಸಾಯಿನಾಥ್ ಎಂಬ ತಾತ್ವಿಕತೆಯನ್ನು ಕನ್ನಡಕ್ಕೆ ತಂದ ಜಿ. ಎನ್. ಮೋಹನ್ ಮತ್ತು ಅಭಿನವ ಪ್ರಕಾಶನಕ್ಕೆ ಕನ್ನಡಿಗರು ಋಣಿಗಳು.

ಡಾ॥ ವಿನಯಾ
'ನೆಮ್ಮದಿ', ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ನಂ. ೧೨೪, ಧಾರವಾಡ – ೫೮೦ ೦೦೨




# ನಾಡೋಜ ಎಂದರೇನು? ಯಾರು ನಾಡೋಜ!

**ನಾ**ಡೋಜ ಎಂದರೇನು ? ಎಂಬ ವಿಚಾರವಾಗಿ ಹಿಂದೆ ನಾನು ಅಷ್ಟೊಂದು ಯೋಚನೆ ಮಾಡಿರಲಿಲ್ಲ. 'ನಾಡೋಜ ಪಂಪ' ಎಂಬ ಮಾತನ್ನು ಸಾಹಿತ್ಯಾಭ್ಯಾಸ ಮಾಡುವಾಗ ಕೇಳಿದ್ದೇನಾದರೂ, ನಾಡೋಜ ಎಂಬ ಮಾತಿನ ಪೂರ್ಣ ಅರ್ಥ ಮತ್ತು ಮಹತ್ವ ಸ್ಪಷ್ಟವಾಗಿ ತಿಳಿದಿರಲಿಲ್ಲ. ಪದವಿ ಪ್ರದಾನ ಮಾಡುವುದಾಗಿ ಕುಲಪತಿಗಳು ನನಗೆ ಪತ್ರ ಬರೆದಾಗ 'ನಾಡೋಜ' ಎಂಬ ಪದದ ಬಗ್ಗೆ ತುಂಬಾ ಯೋಚಿಸಿದೆ.

'ನಾಡೋಜ' ಎಂಬ ಶಬ್ದ ಕಿಟ್ಟೆಲ್ ನಿಘಂಟನ್ನೊಳಗೊಂಡು ನನಗೆ ಗೊತ್ತಿರುವ ಯಾವ ಕನ್ನಡ ನಿಘಂಟಿನಲ್ಲಿಯೂ ಕಾಣುವುದಿಲ್ಲ. ನಾಡ + ಓಜ = ನಾಡೋಜ ಇರಬಹುದು ಎಂದು 'ಓಜ' ಶಬ್ದವನ್ನು ಹುಡುಕಿದೆ. ಪಂಡಿತ ಕವಲಿಯವರ ನಿಘಂಟಿನಲ್ಲಿ ಓಜ = ಗುರು, ಆಚಾರ್ಯ ಎಂಬ ಅರ್ಥವನ್ನು ಕೊಟ್ಟಿದ್ದಾರೆ. 'ಓಜ' ಶಬ್ದವು 'ಓವಜ' ಶಬ್ದದಿಂದ ಬಂದಿದೆ. ಓವಜ ಎಂಬುದಕ್ಕೆ ಕಿಟ್ಟೆಲ್ ನಿಘಂಟಿನಲ್ಲಿ ಓವಜ = ಓಜ, (ಉಪಾಧ್ಯಾಯ, ಆಚಾರ್ಯ, ವಿಪುಲ ವಿದ್ಯಾಶಿಕ್ಷಕ) ಶಸ್ತ್ರ ವಿದ್ಯೆಗೊವಜಂ ನೀನಾಗು ಕುಮ್ಬೋದ್ಭವಾ ಎಂದಿದೆ. ಅಂದರೆ ಓಜ ಎಂಬ ಮಾತು ಓವಜದಿಂದ ಬಂದಿದೆ. ಇದರ ಒಟ್ಟು ಅರ್ಥ ಅಧ್ಯಾಪಕ, ಆಚಾರ್ಯ, ಆದ್ದರಿಂದ ನಾಡೋಜ ಎಂಬ ಮಾತಿನ ಅರ್ಥ ನಾಡಿನ, ನಾಡಿಗೆ ಗುರು, ಆಚಾರ್ಯ, ಬಹುವಿದ್ಯಾ ಪ್ರವೀಣ ಎಂಬ ಅರ್ಥ ಬರುತ್ತದೆ. ಇದೇ ಅರ್ಥವನ್ನು ಕೊಡುವ ಸಂಸ್ಕೃತ ಶಬ್ದ 'ಭುವನಗುರು, ಲೋಕಗುರು' ಎಂದಾಗುತ್ತದೆ. ಈ ಎರಡು ಶಬ್ದಗಳನ್ನು ಕುವೆಂಪು ಅವರು ಶ್ರೀರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಉಪಯೋಗಿಸಿದ್ದಾರೆ.

'ನಾಡೋಜ' ಎಂಬ ಈ ಶಬ್ದದ ಮೂಲ ಉತ್ಪತ್ತಿಯನ್ನು ಡಾ॥ ಎಸ್. ಶಿವಾನಂದ ಎಂಬ ವಿದ್ವಾಂಸರು ಕ್ರೋಡೀಕರಿಸಿ ಈ ರೀತಿ ವಿವರಿಸಿದ್ದಾರೆ :

"ನಾಡ + ಒವಝ = ನಾಡೋಜ,

ಉಪಾಧ್ಯಾಯ>ಉವಜ್ಝಯ>ಉವಜ್ಝ>ಉವಝ>ಒವಝ>

ಉವಜ್ಝಾಯ>ಉವಜ್ಝ. ಉವಜ>ಓವಜ>ಓಜ

ಒವಝ–ಓವಜ, ಓವಜ್ಜ, ಓಜು, ಓಜ, ಒಝ, ಓವಜ

ಓಜ = ಕನ್ನಡಕ್ಕೆ ನಾಡವರೋಜರ್ (ಕವಿರಾಜಮಾರ್ಗ ೧–೪೨)

ಓಜರ್ಗೆರಗಿ ಪೊಟೆಮಟ್ಟು ವಿದ್ಯಾಪ್ರಾರಂಭಗೆಯ್ದರ್ (ವಡ್ಡಾರಾಧನೆ – ೩ – ೨೪)

ಓಚಯ್ಯ = ಉಪಾಧ್ಯಾಯ, ಗುರು, ಓಜ> ಓಚ + ಅಯ್ಯ = ಓಚಯ್ಯ"

'ನಾಡೋಜ' ಎಂಬ ಮಾತಿನ ಒಟ್ಟು ಅರ್ಥ : ನಾಡಿಗೆ, ನಾಡಿನ ಗುರುವಾದವನು ಎಂದಾಗುತ್ತದೆ. ಮಾತಿನ ಇನ್ನೂ ಆಳವಾದ, ಅಗಾಧವಾದ, ಮಹತ್ತರವಾದ ಅರ್ಥವನ್ನು ಗ್ರಹಿಸಬೇಕಾದರೆ 'ಗುರು' ಎಂಬ ಮಾತಿನ ಅರ್ಥವನ್ನು ಗ್ರಹಿಸಬೇಕು. 'ಗುರು' ಎಂದರೇನು ? ಎಂಬುದನ್ನು ಎಲ್ಲ ಧರ್ಮಸಂಸ್ಥಾಪಕರು, ಧರ್ಮಗುರುಗಳು, ತತ್ವಶಾಸ್ತ್ರ ಪರಿಣತರು ತಮ್ಮ ತಮ್ಮ ದರ್ಶನಕ್ಕೆ ಅನುಗುಣವಾಗಿ ವಿವರಿಸಿದ್ದಾರೆ. ಅವೆಲ್ಲ ತೊಡಕಿನ ಮಾತುಗಳನ್ನು ಬಿಟ್ಟು ಶ್ರೀ ರಾಮಕೃಷ್ಣ ಪರಮಹಂಸರು ಕೊಟ್ಟ ಸರಳವಾದ, ನೇರವಾದ, ಎಂಥ ಅನಕ್ಷರಸ್ಥನಿಗೂ ತಿಳಿಯುವಂಥ ಮಾತಿನಲ್ಲಿ : 'ಗುರು' ಎಂದರೆ ಗುರಿಯನ್ನು ಕಂಡವನು, ಮುಟ್ಟಿದವನು, ಅನುಭವಿಸಿದವನು ಹಾಗೂ ಗುರಿಗೆ ಕರೆದೊಯ್ಯುವವನು, ಎಂಬುದಾಗಿ ಹೇಳುತ್ತಾರೆ. ನಾಡೋಜನಾದವನು ನಾಡು ಮುಟ್ಟಬೇಕಾದ ಗುರಿಯನ್ನು ತೋರಿಸುವಂಥವನು ಮತ್ತು ಆ ಗುರಿಗೆ ಕರೆದೊಯ್ಯಲು ಸಮರ್ಥನಾಗಿರುವವನು. ಹಾಗಾದರೆ ಈ ನಾಡಿನ ಗುರಿಯೇನು ? ನಾಡು ಎಂದರೆ ಈ ನೆಲದ ಬೀಡಿನಲ್ಲಿ ಇದ್ದು ಬದುಕುವ ಜನ. ಆ ಜನರ ಗುರಿಯೇನು ? ಎಂಬುದನ್ನು ತಾನು ಕಂಡು, ಉಂಡು ಇತರರನ್ನು ಆ ಗುರಿಗೆ ಕೊಂಡೊಯ್ಯುವಂಥ ಲೋಕದ ರಕ್ಷಕನೂ, ಉದ್ಧಾರಕನೂ ಆಗಿರಬೇಕು. ದ್ರಷ್ಟಾರನಾಗಿರಬೇಕು. ನಾಡೋಜ ಎಂಬ ಮಾತಿನ ಅರ್ಥವು ಎಷ್ಟು ವಿಶಾಲ, ಗಂಭೀರ (ಆಳವಾದ), ಮಹತ್ತರ ಎಂಬುದನ್ನು ಮಿತಬುದ್ಧಿಯಿಂದಲಾದರೂ ಗ್ರಹಿಸಿದಾಗ ಅಬ್ಬಬ್ಬಾ ಎನಿಸುತ್ತದೆ.

ನಮಗೆ ಗೊತ್ತಿರುವ ಮಟ್ಟಿಗೆ ಮಹಾಕವಿ, ಆದಿಕವಿ ಪಂಪನೆ ಕರ್ನಾಟಕದಲ್ಲಿ ಮೊದಲ ನಾಡೋಜ. ಅವನು ಕಂಡಿದ್ದ ಸತ್ಯವೇನು ? ಅವನ ಗುರಿಯೇನು ? ಅದು 'ಮನುಜ ಕುಲ ತಾನೊಂದೆ ವಲಂ' ಎಂಬುದು. ಈ ಮಾತು ಸಕಲ ತತ್ವಶಾಸ್ತ್ರದ ತಿರುಳು, ಧರ್ಮಶಾಸ್ತ್ರದ ಅತ್ಯುನ್ನತ ಸತ್ಯ. ಅದನ್ನು ಅಧ್ಯಾತ್ಮದಲ್ಲಿ, ಜೀವಾತ್ಮ ಪರಮಾತ್ಮನಲ್ಲಿ ಐಕ್ಯವಾಗುವುದು ಎಂದರ್ಥ. ನಾನು ನೀನೆಂಬ ಭಿನ್ನಭಾವ ಅಳಿದು ಈ ಜೀವ ಈಶ್ವರನೊಡನೆ ಒಂದಾಗುವುದು. ಸರ್ವರಲ್ಲೂ ದೈವವನ್ನು ಕಾಣುವುದು. ಸರ್ವಜ್ಞ ಕವಿ ಬಹು ಸರಳ ಮಾತಿನಲ್ಲಿ; 'ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವೇ ಅಕ್ಕು ಸರ್ವಜ್ಞ' ಎಂದಿದ್ದಾನೆ. ನಾನು ನೀನು ಎಂಬ ಭೇದವಿಲ್ಲದೆ ಜೀವ, ಜಗತ್ತು, ಈಶ್ವರ ಎಲ್ಲ ತಾನೇ ಎಂಬ ಸ್ಥಿತಿಯನ್ನು ಮುಟ್ಟಿದವರು 'ಮನುಜ ಕುಲ ತಾನೊಂದೆ ವಲಂ' ಎಂಬ ಮಾತಿನಲ್ಲಿ ಪಂಪ ಮಹಾಕವಿ ಹೇಳಿದ್ದಾನೆ. ಇದು ನಾಡೋಜನ ಗುರಿ ಸಿದ್ಧಿ.

ಪಂಪ, ಕೇವಲ 'ಕವಿ' ಮಾತ್ರವೇ ಅಲ್ಲ, 'ಕಲಿಯೂ' ಆಗಿದ್ದ. ಕಲಿಯಾಗಿ ಕತ್ತಿ ಹಿಡಿದು ನಾಡನ್ನು ರಕ್ಷಿಸಿದ. ಆ ರಕ್ಷಿತ ನಾಡನ್ನು ಕವಿಯಾಗಿ ಲೇಖನಿ ಹಿಡಿದು ಶಿಕ್ಷಿತವನ್ನಾಗಿ ಮಾಡಿದ. ಈ ಉಭಯ ಕರ್ತವ್ಯವನ್ನು ನಿರ್ವಹಿಸಬೇಕಾದುದು ನಾಡೋಜನ ಕೆಲಸ. ಮಹಾಕವಿಯ ಮಾತನ್ನು ಬರಹಗಾರರಿಗೆ ಅನ್ವಯಿಸಿದಾಗ ಸಾಹಿತಿಯ ಲೇಖನಿ ಅನ್ಯಾಯವನ್ನು ಕತ್ತರಿಸುವ ಕತ್ತಿಯಾಗಬೇಕು. ಸತ್ಯವನ್ನು ಸ್ಥಾಪಿಸುವ ಖಡ್ಗವಾಗಬೇಕು. ಬರಹಗಾರನ ಲೇಖನಿ ಅವನ ಕೈಯಲ್ಲಿ ಸುದರ್ಶನ ಚಕ್ರವಾಗಬೇಕು. ಧರ್ಮ ಸಂಸ್ಥಾಪನೆಗಾಗಿ ಮೊಳಗುವ ಪಾಂಚಜನ್ಯವಾಗಬೇಕು. ಅವನ ಸಿಂಹನಾದ ನಾಡನ್ನು ಎಚ್ಚರಿಸಬೇಕು. ಅವನಿಗೆ "ಅರಸು – ಗಿರಸುಗಳ ಋಣವಿಲ್ಲ. ಅವನು ಅಗ್ನಿಮುಖಿ, ಪ್ರಳಯಶಿಖಿ." ಆದ್ದರಿಂದ ನಾಡೋಜನಾದವನು ಕಲಿಯಾಗಿ ಕವಿಯಾಗಿ ಗುರುವಾಗಿ ಸರ್ವರನ್ನೂ ಸಮದೃಷ್ಟಿಯಿಂದ ನೋಡಬೇಕು. ಸರ್ವರನ್ನೂ ರಕ್ಷಿಸಬೇಕು. 'ಮನುಜ ಕುಲ ತಾನೊಂದೆ ವಲಂ' ಎಂಬ ಪಂಪ ಕವಿಯ ಮಾತನ್ನು ದಿಟಪಡಿಸಬೇಕು. ಆಧುನಿಕ ಮಹಾಕವಿ ಕುವೆಂಪು ಘೋಷಿಸಿದ ವಿಶ್ವಮಾನವನ ಸೃಷ್ಟಿ ಸಾಧ್ಯವಾಗಬೇಕು. ಹಾಗಾದರೆ ಮಾತ್ರ ನಾಡಿನಲ್ಲಿ, ವಿಶ್ವದಲ್ಲಿ ಶಾಂತಿ ನೆಲೆಸೀತು. ಅದಕ್ಕೆ ಹೊಸ ತಳಿಯ ಮಾನವ ಸೃಷ್ಟಿಯಾಗಬೇಕು. ಅಂಥ ಹೊಸ ತಳಿಯ ಮಾನವನನ್ನು ಸೃಷ್ಟಿ ಮಾಡುವುದು ಅಸಾಧ್ಯವೇನಲ್ಲ. ಆಗ ಶ್ರೀ ಅರವಿಂದರು ಹೇಳಿದ ದಿವ್ಯ ಜೀವನ ಈ ಭೂಮಿಯ ಮೇಲೆಯೇ ಸ್ಥಾಪನೆಯಾಗುವುದು. ಎಲ್ಲ ಧರ್ಮ ಸಂಸ್ಥಾಪಕರೂ ಪ್ರತಿಪಾದಿಸುತ್ತ ಬಂದಿರುವ "ಭೂಮಿಯಲ್ಲಿ ಸ್ವರ್ಗ ಸ್ಥಾಪನೆ" ಮಾಡುವ ಗುರಿ ಈಡೇರುತ್ತದೆ. ನಾಡಿನ ಜನರನ್ನು ಆ ಗುರಿಯತ್ತ ಕರೆದೊಯ್ಯುವ ಭುವನ ಗುರು, ಲೋಕ ಗುರು ನಾಡೋಜ.

ನಾಡೋಜ ಎಂಬ ಮಾತಿನ ಈ ಅರ್ಥ ತಿಳಿದಾಗ ಈ ಪದವಿ ಲೆಟರ್‌ಹೆಡ್‌ಗಳಲ್ಲಿ, ವಿಸಿಟಿಂಗ್ ಕಾರ್ಡುಗಳಲ್ಲಿ ಬಂಗಾರದ ಅಕ್ಷರದಲ್ಲಿ ಅಚ್ಚುಮಾಡಿಸಿ ಕೊಳ್ಳುವ ಅಲಂಕಾರವಲ್ಲ. ಆ ಪದವಿ ಪ್ರದಾನ ಅಂತಹ ಮಹದ್‌ವ್ಯಕ್ತಿಗಳಿಗೆ ಸಲ್ಲಬೇಕು. ನಾಡೋಜ ಪದದ ಈ ಅರ್ಥವನ್ನು ನಾನು ತಿಳಿದುಕೊಂಡಾಗ ಈ ಮಹಾಪದವಿಗೆ ನಾನು ಅರ್ಹನೆ ? ಎಂಬ ಸಂದೇಹ ಇಂದಿಗೂ ನನ್ನ ಮನದಲ್ಲಿದೆ. ನಮ್ಮ ಜನರು ಈ ಅರ್ಥದಲ್ಲಿ ಈ ನಾಡೋಜ ಪದವಿ ಪಡೆದವರಿಗೆ ಅರ್ಹತೆ ಇದೆಯೆ ? ಎಂದು ಯೋಚಿಸಬೇಕು. ಎದೆ ಮುಟ್ಟಿಕೊಂಡು ನೋಡಿಕೊಳ್ಳಬೇಕು. ಅರ್ಹತೆಯಿಲ್ಲದವರು ತಲೆ ತಗ್ಗಿಸಬೇಕು. ಇಲ್ಲದಿದ್ದರೆ ಆತ್ಮದ್ರೋಹ, ದೈವದ್ರೋಹ, ಆ ಪದವಿ ಪ್ರದಾನ ಮಾಡಿದ ವಿದ್ಯಾಲಯಕ್ಕೂ ದ್ರೋಹ.

**ಕೋ. ಚೆನ್ನಬಸಪ್ಪ**
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರಸ್ತೆ, ರಾಜಾಜಿನಗರ, ಬೆಂಗಳೂರು – ೫೬೦ ೦೮೬







## ಅಪ್ರತಿಮ ದೇಶಭಕ್ತ ಟೀಪೂ ಸುಲ್ತಾನ್

*ಸಂಗ್ರಹ – ಸಂಪಾದನೆ : ಕೋ. ಚೆ.*

**ಪುಟ : ೬೪** **ಬೆಲೆ : ರೂ. ೪೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಟೀಪೂ ಸುಲ್ತಾನ್ ಹಿಂದೂ ಧರ್ಮವಿರೋಧಿಯಾಗಿದ್ದ ಎಂಬ ಕೂಗು ಎಲ್ಲೆಡೆ ಕೇಳಿಬರುತ್ತಿದೆ. ಆದರೆ ಆತ ಪರಮತ ಸಹಿಷ್ಣು, ಹಿಂದೂ ಧರ್ಮರಕ್ಷಕನಾಗಿದ್ದ ಎಂಬ ಅಂಶ ಎಷ್ಟು ಜನರಿಗೆ ಗೊತ್ತಿದೆ? ಅದನ್ನು ಈ ಕೃತಿಯಲ್ಲಿ ಕೋಚೆ ಅವರು ಚಾರಿತ್ರಿಕ ದಾಖಲೆಗಳ ಸಹಿತ ನಮ್ಮ ಮುಂದೆ ಹರಡಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಹಿಂದೂ – ಮುಸ್ಲಿಮರು ಶಾಂತಿ–ಸೌಹಾರ್ದತೆಯಿಂದ ಬಾಳಿದ್ದಕ್ಕೆ ಟೀಪೂ ಸುಲ್ತಾನ್ ಕಾಲ ಒಳ್ಳೆಯ ಉದಾಹರಣೆ. ಬ್ರಿಟಿಷರಿಗೆ ವಸಾಹತು ವಿಸ್ತರಣೆಗೆ ದೊಡ್ಡ ತಲೆನೋವಾಗಿದ್ದ ಟೀಪೂ ಮೈಸೂರಿನ ಹುಲಿಯೆಂದೇ ಖ್ಯಾತನಾಗಿದ್ದ. ಹಿಂದೂ ದೇವಾಲಯಗಳಿಗೆ ಆತ ನೀಡುತ್ತಿದ್ದ ದತ್ತಿಗಳ ಬಗ್ಗೆ ಪ್ರಸ್ತಾಪಿಸುತ್ತ ಶೃಂಗೇರಿಯ ಶಾರದಾ ಪೀಠದ ಸೇವೆಗಾಗಿ ಅಂದಿನ ಸಚ್ಚಿದಾನಂದ ಭಾರತೀ ಜಗದ್ಗುರುಗಳೊಂದಿಗೆ ನಡೆಸಿದ ಪತ್ರವ್ಯವಹಾರಗಳ ದಾಖಲೆಗಳನ್ನೇ ಇಲ್ಲಿ ನೀಡಲಾಗಿದೆ. ಶೃಂಗೇರಿಯ ದೇವಾಲಯದಲ್ಲಿ ಟೀಪೂ ಸುಲ್ತಾನ್ ನೀಡಿದ ಬೆಳ್ಳಿ ಬಂಗಾರದ ಕಿರೀಟ, ಪಲ್ಲಕ್ಕಿಗಳು, ಪಾತ್ರೆಗಳನ್ನು ನವರಾತ್ರೆಯ ಉತ್ಸವದ ಸಂದರ್ಭದಲ್ಲಿ ಉಪಯೋಗಿಸುತ್ತಾರೆ. ಅಷ್ಟಲ್ಲದೆ ಈ ಕೃತಿಯಲ್ಲಿ ಉಲ್ಲೇಖಿಸದಿರುವ ಇನ್ನೊಂದು ಅಂಶವಿದೆ – ಟೀಪೂ ನೀಡಿದ ದಿರಿಸು, ಟೊಪ್ಪಿಗೆಯನ್ನು ಧರಿಸಿ ನವರಾತ್ರಿಯಲ್ಲಿ ಒಂದೇ ಒಂದು ದಿನ ಶೃಂಗೇರಿಯ ಸ್ವಾಮಿಯವರು ಪಲ್ಲಕ್ಕಿಯಲ್ಲಿ ದೇವಾಲಯದ ಚೌಕಕ್ಕೆ ಒಂದು ಸುತ್ತು ಪ್ರದಕ್ಷಿಣೆ ಹಾಕಿ ದರ್ಬಾರು ನಡೆಸುವ ರೂಢಿ – ಸಂಪ್ರದಾಯ ಇದೆ. ಇವನ್ನೆಲ್ಲ ಕೋಮುವಾದಿಗಳು ಸಾಕಷ್ಟು ಅಡಗಿಸಿಟ್ಟು ಸುಳ್ಳನ್ನೇ ತಮ್ಮ ಪ್ರಚಾರಕ್ಕಾಗಿ ಬಳಸಿಕೊಂಡು ಮತೀಯ ಭಾವನೆ ಕೆರಳಿಸುತ್ತಿದ್ದಾರೆ. ಟೀಪೂ ಬಗ್ಗೆ ಆರೋಗ್ಯಕರ ಚರ್ಚೆ ಮತ್ತು ದೇಶದಲ್ಲಿನ ಮತೀಯ ಕಂದಕ ಇಲ್ಲವಾಗಿಸಲು ಈ ಕೃತಿಯ ಓದು ಪೂರಕ.




## ತಂಗಾಳಿ

*ಬಿ. ಪಿ. ಶಿವಾನಂದರಾವ್*

**ಪುಟ : ೪೧೨ + iv**

**ಬೆಲೆ : ರೂ. ೩೫೦**

**ಜಾಗೃತಿ ಪ್ರಿಂಟರ್ಸ್**

# ೫೬/೧–೬, ನರಸಿಂಹಯ್ಯ ಗಾರ್ಡನ್ ಕೊಟ್ಟಿಗೆಪಾಳ್ಯ ಮಾಗಡಿ ಮುಖ್ಯರಸ್ತೆ ಬೆಂಗಳೂರು – ೫೬೦ ೦೯೧

ತಿಳಿವಳಿಕೆ ಮತ್ತು ವಿವೇಕ ಮನುಷ್ಯನನ್ನು ಎಂಥ ಕೆಳಮಟ್ಟದಿಂದಲೂ ಮೇಲೆತ್ತಬಲ್ಲ ಶಕ್ತಿಯುತ ಸಾಧನಗಳು. ವಿಚಾರವಂತಿಕೆ ಮನುಷ್ಯನ ಬಾಳಿನಲ್ಲಿ ದೀವಿಗೆಯಿದ್ದಂತೆ. ಬೆಳಕಿನಲ್ಲಿ ತಾನೂ ಮುಂದುವರಿಯುತ್ತ ಇತರರನ್ನೂ ತನ್ನೊಂದಿಗೆ ಬರುವಂತೆ ದಾರಿ ತೋರಿಸುತ್ತ ನಡೆವಾತನೇ ಸನ್ಮಾರ್ಗದರ್ಶಕ. ಆದರೆ ಇಂದು ಇಂಥವರು ಅಪರೂಪ. ದುರದೃಷ್ಟವೆಂದರೆ ಸನ್ಮಾರ್ಗ ಯಾವುದು – ದುರ್ಮಾರ್ಗ ಯಾವುದೆಂಬ ನಿಖರ ವಿವೇಚನೆ ಇಲ್ಲವಾಗಿದೆ. ಆನೆ ಹೋದದ್ದೇ ದಾರಿಯಾಗಿದೆ. ಇಂಥ ಅನಿಸಿಕೆಗಳು ಪ್ರತಿಯೊಬ್ಬರ ಬಾಳಿನಲ್ಲಿ ನುಸುಳಿ ಪ್ರತ್ಯಕ್ಷ–ಪರೋಕ್ಷ ಅನುಭವ ನೀಡುತ್ತವೆ. ಬಾಳಿನ ಪ್ರತಿಯೊಂದು ಮೈಲಿಗಲ್ಲಿನ ಸಮೀಪ ಒಂದರೆಕ್ಷಣ ನಿಂತು ಅವಲೋಕಿಸಿದಾಗ ತಾವು ಎಡವಿದ್ದೆಲ್ಲಿ, ಯಾಕೆ ಎಂಬ ಸುಳುಹು ತಿಳಿಯುತ್ತದೆ. ಕಾಲ ಬದಲಾದಂತೆ ಅನಿವಾರ್ಯವಾಗಿ ನಾವೂ ಬದಲಾದಾಗ ಅಂದು ಅಂದಿಗೆ, ಇಂದು ಇಂದಿಗೆ ಎಂಬ ಒಂದು ರಾಜೀ ಸೂತ್ರ ನಮ್ಮದಾಗುತ್ತದೆ. ಮೌಲ್ಯಗಳು ಪಲ್ಲಟಗೊಳ್ಳುತ್ತವೆ. ಗೊಂದಲ ಮೂಡಿಸುತ್ತವೆ. ಇಂಥ ದಿಕ್ಕು ಕಾಣದ ತಿರುವಿನಲ್ಲಿ ಈ 'ತಂಗಾಳಿ' ಎಂಬ ಹಿತವಾದ ಬರಹಗಳ ಸಂಕಲನ ನಿಮ್ಮ ಮುಂದಿದೆ. ಸತ್ವಯುತವಾದ ವಿಚಾರಗಳು ತುಂಬಿವೆ. ಲೇಖಕ ಶ್ರೀ ಬಿ. ಪಿ. ಶಿವಾನಂದರಾವ್ ಸುದೀರ್ಘವಾಗಿ, ಸಾವಕಾಶವಾಗಿ ಮನುಷ್ಯನ ಚಂಚಲ ಪ್ರವೃತ್ತಿ ಮತ್ತು ಅತೃಪ್ತ ಮನಸ್ಸಿನ ಮೇಲೆ ವಿಶ್ಲೇಷಣಾತ್ಮಕ ದೃಷ್ಟಿಕೋನದಿಂದ ತರ್ಕಬದ್ಧ ವಿಚಾರಸರಣಿಯನ್ನು ನಮ್ಮ ಮುಂದಿಟ್ಟಿದ್ದಾರೆ. ನಾವು ನಮಗೆ ಬೇಕಷ್ಟು ಹೀರೋಣ.




## ಸಂದೇಹದ ಸುಳಿಯಲ್ಲಿ (ಸಮಗ್ರ ಕತೆಗಳು)

*ನಾಡೋಜ ಡಾ॥ ಸಾರಾ ಅಬೂಬಕ್ಕರ್*

**ಪುಟ : ೧೮೬ + vi** **ಬೆಲೆ : ರೂ. ೧೫೦**

**ಚಂದ್ರಗಿರಿ ಪ್ರಕಾಶನ,** ೨–೨೧–೧೬೩೧/೨, ಸೂಕ್ಷ್ಮತರಂಗ ನಿಲಯ ರಸ್ತೆ ಮಂಗಳೂರು – ೫೭೫ ೦೦೬

ಶ್ರೀಮತಿ ಸಾರಾ ಅಬೂಬಕ್ಕರ್ ಅವರ ಬರಹಗಳಲ್ಲಿ – ಕಥೆಗಳಲ್ಲಿ ಕೌಟುಂಬಿಕ ಚಿತ್ರಣಗಳು ಹೇರಳವಾಗಿರುತ್ತವೆ. ಸಂಬಂಧಗಳು ಪರಸ್ಪರ ವ್ಯಕ್ತಿಗಳಿಗೆ ಅರಿವಿಲ್ಲದಂತೆ ಗಾಢವಾಗಿರುತ್ತವೆ. ಮತಧಾರ್ಮಿಕ ಸಂಪ್ರದಾಯಗಳು – ನಂಬಿಕೆಗಳು ಆಯಾ ಸಮುದಾಯದ ಜನರ ವ್ಯಕ್ತಿಗತ ಬದುಕಿನ ಸ್ವಾತಂತ್ರ್ಯಕ್ಕೆ ಅಡ್ಡಿಪಡಿಸುತ್ತವೆ. ಅಷ್ಟೇ ಅಲ್ಲ – ತನ್ನ ಪಾಡಿಗೆ ತಾನಿರಲೂ ಸಮಾಜ ಬಿಡುವುದಿಲ್ಲ. ಸ್ವಾತಂತ್ರ್ಯ ಎಷ್ಟೋ ಜನರಿಗೆ ಸ್ವೇಚ್ಛೆಯಾಗಿರುತ್ತದೆ. ಇಲ್ಲಿರುವ ಕಥೆಗಳು ಅನಾಗರಿಕ, ತಿಳಿವಳಿಕೆಯಿಲ್ಲದ ಅಥವಾ ಮುಗ್ಧರ ಕಥೆಗಳಲ್ಲ. ಸಿರಿವಂತರ–ಕಪಟಿಗಳ ದರ್ಪದ ನಡುವೆ ನಿರ್ಗತಿಕರಿಗೆ – ಅಮಾಯಕರಿಗೆ ಬದುಕಲೂ ಅವಕಾಶವಿಲ್ಲದಂಥ ಸತ್ಯವನ್ನು ಇವು ಬೆತ್ತಲಾಗಿಸುತ್ತವೆ. ಹೆಚ್ಚಿನ ಕಥೆಗಳಲ್ಲಿ ನೇರವಾಗಿ ಬಲಿಪಶುವಾಗುವುದು ಹೆಣ್ಣು! ಆದರೆ ಹೆಣ್ಣನ್ನು ಶೋಷಿಸಲು ಎಷ್ಟೋ ಸಲ ಹೆಣ್ಣೇ ಮುಂದಾಗುವುದು ಕೂಡ ವ್ಯವಸ್ಥೆಯ ಒಂದು ಕುರೂಪ. ಆಕೆ ಎಷ್ಟೇ ವಿದ್ಯಾವಂತೆಯಾದರೂ ಹೊರನೋಟಕ್ಕೆ ತುಂಬ ಸುಖಿಯೆಂದು ಇತರರಿಗೆ ಕಂಡುಬಂದರೂ ಆಕೆಯ ಒಳಬೇಗುದಿಗಳು ಮಾತ್ರ ಅವಳವೇ ಆಗಿರುತ್ತವೆ. ಆಕೆ ಅಸೂಯಾಪರಳು ಎಂಬ ಮಾತೂ ಕೂಡ ಸರ್ವೇಸಾಮಾನ್ಯ. ಮೇಲ್ನೋಟಕ್ಕೆ ಒಂದು ಮನೆಯ ಕೌಟುಂಬಿಕ ಕಥೆಯಂತೆ ಚಿತ್ರಿತವಾದರೂ ಒಂದರ ಹಿಂದೊಂದರಂತೆ ಇಡೀ ವ್ಯವಸ್ಥೆಯ ಆಳ – ಅಗಲ – ಒಳನೋಟಗಳು ತೆರೆಯುತ್ತಾ ಹೋಗುವ ಗುಣ ಸಾರಾ ಅವರ ಕಥೆಗಳಿಗಿದೆ. ಒಬ್ಬರ ಬಾಳಿನಲ್ಲಿ ಇನ್ನೊಬ್ಬರ ಹಸ್ತಕ್ಷೇಪ ಕೆಲವೊಮ್ಮೆ ಢಾಳಾಗಿಯೇ ಕಣ್ಣಿಗೆ ರಾಚಿದಂತಿದ್ದರೆ ಮತ್ತೊಮ್ಮೆ ಕಂಡೂ ಕಾಣದಂತಿರುತ್ತದೆ. ಒಟ್ಟಿನಲ್ಲಿ ಸಮಾಜಕ್ಕೆ ಸವಾಲೆಸೆಯುವ ಕಥೆಗಳಿವು.

## ಭಾರತೀಯ ಇತಿಹಾಸದ ವೈಲಕ್ಷಣ್ಯಗಳು

*ಎಸ್. ಜಿ. ಸರ್ದೇಸಾಯಿ, ಅನುವಾದ : ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ*

**ಪುಟ : ೧೪೪** **ಬೆಲೆ : ರೂ. ೭೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧




ಭಾರತೀಯ ಇತಿಹಾಸವನ್ನು ವೇದಪೂರ್ವ – ವೇದಕಾಲೀನ – ವೇದೋತ್ತರವೆಂಬ ದೀರ್ಘ ವಿಸ್ತಾರದಲ್ಲಿ ಆಳವಾಗಿ ಅಧ್ಯಯನ ಮಾಡಿದವರು ವಿದ್ವಾಂಸರಾದ ಎಸ್. ಜಿ. ಸರ್ದೇಸಾಯಿ. ನಿಖರ ಮಾಹಿತಿ ಹುಡುಕುತ್ತ ಅವರು ಜಾಲಾಡಿದ ಸಂಸ್ಕೃತಿಯ ಪಾಂಡಿತ್ಯಪೂರ್ಣ ಬರಹದ ಒಂದೆರಡು ಅಧ್ಯಾಯಗಳ ಅನುವಾದ ಮಾತ್ರವಾಗಿದೆ ಈ ಕೃತಿ. ಭೂಮಿಯ ಮೇಲೆ ಮಾನವನ ಶಕೆ ಆರಂಭದ ನಂತರ ಅದೆಷ್ಟೋ ನಾಗರಿಕತೆಗಳು ಅರಳಿ, ಮೆರೆದು, ಉಚ್ಛ್ರಾಯಸ್ಥಿತಿ ತಲುಪಿದವು. ಕೆಲವು ಬದಲಾದುವು, ಕಾಲ ಕಳೆದಂತೆ ನಶಿಸಿ ಕುರುಹನ್ನು ಮಾತ್ರ ಉಳಿಸಿದವು. ಇಂದಿಗೂ ಪಳೆಯುಳಿಕೆಯೆಂಬಂತೆ ಅದೇ ಸಂಸ್ಕೃತಿಯ ಬದಲಾದ ಆಚರಣೆಗಳು ನಮ್ಮೊಂದಿಗೆ ಉಳಿದಿವೆ. ವೇದಪೂರ್ವ ಕಾಲವು ಮಾನವನು ಬೇಟೆಯ ಹಂತದಿಂದ ಕೃಷಿಯ ಕಡೆಗೆ ವಾಲಿ ಒಂದೆಡೆ ನೆಲೆನಿಂತು ಬುಡಕಟ್ಟು ವ್ಯವಸ್ಥೆ, ಸಮುದಾಯಜೀವನ ಆರಂಭಿಸಿದ ಕಾಲ. ಮುಂದೆ ಪ್ರಕೃತಿಯ ವೈವಿಧ್ಯಮಯ ವಿದ್ಯಮಾನಗಳನ್ನು ಅಚ್ಚರಿ ಮತ್ತು ಕೃತಜ್ಞತಾಭಾವದಿಂದ ಅವಲೋಕಿಸಿ ರಹಸ್ಯ ಮತ್ತು ನಿಜವನ್ನರಸುತ್ತ ಮಾನವ ನಡೆದ. ಮಾತೇ ಮಂತ್ರವಾಯಿತು. ಹಾಡೇ ಸಾಹಿತ್ಯವಾಯಿತು. ರಾಗ ತಾಳಗಳೇ ಸಂಗೀತ ನಾಟ್ಯಗಳಾದುವು. ನಾಲ್ಕು ವೇದಗಳು ರೂಪುಗೊಳ್ಳಲು ಸಾವಿರಾರು ವರ್ಷಗಳೇ ಸಂದವು. ಕ್ರಮೇಣ ಹಲವಾರು ಆಚರಣೆಗಳನ್ನು ರೂಢಿಗೆ ತಂದು ಪ್ರಕೃತಿಯನ್ನು ದೇವತಾಸ್ವರೂಪವೆಂದು ಬಗೆದು ಮನದಣಿಯೇ ಸ್ತುತಿಸಿದ... ಹೀಗೆ ಅಂದಿನ ಸಂಸ್ಕೃತಿ–ಆಚರಣೆಗಳನ್ನು ವೈಲಕ್ಷಣ್ಯಗಳನ್ನು ವಿಮರ್ಶೆಗೊಳಪಡಿಸಿ, ನಡೆದುಹೋದ ಘಟನಾವಳಿಗಳನ್ನು ಕಣ್ಮುಂದೆ ಹಾದುಹೋದಂತೆ ಚಿತ್ರಿಸಿದ ಅಪೂರ್ವ ಜ್ಞಾನಧಾರೆಯಿದು. ನಮ್ಮ ಸಂಸ್ಕೃತಿ – ತಿಳಿದುಕೊಳ್ಳೋಣ. ನಮ್ಮ ದೌರ್ಬಲ್ಯಗಳನ್ನು ಅರಿಯೋಣ.

– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು - ೨೨

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / MARCH 2014 / ₹ 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)








